

ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

# ಪಿ.ಎಂ. ಬಾಂಗಿ



ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

# ಪಿ.ಎಂ. ಬಾಂಗಿ

ಪ್ರಕಟಣೆ

ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ
ವಿಧಾನಸೌಧ, ಬೆಂಗಳೂರು – 560 001

ಪಿ.ಎಂ. ಭಾಂಗಿ
ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ
ಲೇಖಕರು: ಡಾ॥ ಎಂ.ಎಸ್. ಪಾಟೀಲ
ಕನ್ನಡ ಅಧ್ಯಯನ ಸಂಸ್ಥೆ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ
ಪ್ರಕಾಶನ
ಗ್ರಂಥಾಲಯ ಸಮಿತಿ
ಕರ್ನಾಟಕ ವಿಧಾನ ಮಂಡಲ
ವಿಧಾನಸೌಧ, ಬೆಂಗಳೂರು - 560 001
ಪುಟ : vi+398 ಬೆಲೆ: ರೂ. 30/-
ಸಭಾಪತಿಗಳು : ಕರ್ನಾಟಕ ವಿಧಾನ ಪರಿಷತ್ತು
ಸಭಾಧ್ಯಕ್ಷರು : ಕರ್ನಾಟಕ ವಿಧಾನ ಸಭೆ
ಮೊದಲ ಮುದ್ರಣ : 2010 ಪ್ರತಿಗಳು : 2,000
ಮುದ್ರಣ ಮತ್ತು ವಿನ್ಯಾಸ
ಸರ್ಕಾರಿ ಮುದ್ರಣಾಲಯ, ಬೆಂಗಳೂರು.

**P.M. BANGI**
**Eminent Parliamentarian Series**
**Written by Dr. M.S. Patil**
**Kannada Adhyayana Samsthe,**
**Gulbarga University, Gulbarga**
**Published by**
**Karnataka Legislature Library Committee**
**Vidhana Soudha, Bangalore - 560 001**
Page: vi+398 Price: Rs. 30-00
Chairman Karnataka Legislative Council
& Speaker Karnataka Legislative Assembly
First Edition : 2010 Copies : 2000
Printed & Designed by
Government Press, Bangalore.

# ವಿಧಾನ ಮಂಡಲ ಗ್ರಂಥಾಲಯ ಸಮಿತಿ
## 2011 – 2012

**ಅಧ್ಯಕ್ಷರು**

**ಶ್ರೀ ಡಿ.ಹೆಚ್. ಶಂಕರಮೂರ್ತಿ**
ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು

**ಸದಸ್ಯರು**

**ಶ್ರೀ ಕೆ.ಜಿ. ಬೋಪಯ್ಯ**
ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ

**ಶ್ರೀ ನೆ.ಲ. ನರೇಂದ್ರಬಾಬು**
ವಿಧಾನಸಭಾ ಸದಸ್ಯರು

**ಶ್ರೀ ಕಿಮ್ಮನೆ ರತ್ನಾಕರ್**
ವಿಧಾನಸಭಾ ಸದಸ್ಯರು

**ಶ್ರೀ ಎನ್.ಎ. ಹ್ಯಾರಿಸ್**
ವಿಧಾನಸಭಾ ಸದಸ್ಯರು

**ಶ್ರೀ ಜಮೀರ್ ಅಹ್ಮದ್ ಖಾನ್**
ವಿಧಾನಸಭಾ ಸದಸ್ಯರು

**ಡಾ|| ಡಿ. ಹೇಮಚಂದ್ರ ಸಾಗರ್**
ವಿಧಾನಸಭಾ ಸದಸ್ಯರು

**ಡಾ|| ಶ್ರೀನಾಥ್**
ವಿಧಾನ ಪರಿಷತ್ ಸದಸ್ಯರು

**ಪ್ರೊ|| ಪಿ.ವಿ. ಕೃಷ್ಣಭಟ್**
ವಿಧಾನ ಪರಿಷತ್ ಸದಸ್ಯರು

**ಪ್ರೊ|| ಎಸ್.ಆರ್. ಲೀಲಾ**
ವಿಧಾನ ಪರಿಷತ್ ಸದಸ್ಯರು

# ಪ್ರತಿಭಾವಂತ ಸಂಸದೀಯಪಟು ಪುಸ್ತಕ ಮಾಲಿಕೆ

## ಅಧಿಕಾರಿ – ಸಂಪಾದಕ ವರ್ಗ

### ಕರ್ನಾಟಕ ವಿಧಾನಸಭೆ ಸಚಿವಾಲಯ

| | |
|---|---|
| ಪಿ. ಓಂ ಪ್ರಕಾಶ | ಕಾರ್ಯದರ್ಶಿ |
| ಎಂ. ಮಂಜುನಾಥ್ | ಅಪರ ಕಾರ್ಯದರ್ಶಿ |
| ಲಕ್ಷ್ಮಣರಾಜ್ ಅರಸ್ | ನಿರ್ದೇಶಕರು (ಪ್ರ) |
| ಅನುಸೂಯ ಎನ್. ದೇವಗಿರಿ | ಮುಖ್ಯ ಗ್ರಂಥಪಾಲಕಿ |

### ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

| | |
|---|---|
| ವಿ. ಶ್ರೀಶ್ | ಕಾರ್ಯದರ್ಶಿ |
| ಟಿ. ಕೃಷ್ಣೇಗೌಡ | ಅಪರ ಕಾರ್ಯದರ್ಶಿ |

### ಸಂಪಾದಕರು

ಡಾ. ಮಲ್ಲಿಕಾರ್ಜುನ ಎಂ.ಸಿ.

# ಲೇಖಕರ ನುಡಿ

ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ ಪ್ರತಿಭಾವಂತ ಸಂಸದೀಯ ಪಟುಗಳ ಪುಸ್ತಕ ಮಾಲಿಕೆಗಾಗಿ, ಹಿರಿಯರಾಗಿದ್ದ ಶ್ರೀ ಪಿ. ಎಂ. ಬಾಂಗಿ ವಕೀಲರು, ಜಮಖಂಡಿ ಅವರ ಕುರಿತು ಪುಸ್ತಕ ರಚಿಸಲು ತೀರ್ಮಾನ ಕೈಗೊಂಡು, ಆ ಕೆಲಸವನ್ನು ನನಗೆ ವಹಿಸಿದ್ದು ಸಂತೋಷದ ವಿಷಯ.

ಶ್ರೀ ಪಿ.ಎಂ. ಬಾಂಗಿ ವಕೀಲರು ಸರಳ ಸಾದಾ ಜೀವನ ನಡೆಸಿದ ಧೀಮಂತರು. ಪ್ರಾಮಾಣಿಕತೆ ಅವರ ವ್ಯಕ್ತಿತ್ವದ ಲಕ್ಷಣವಾದರೆ, ಶಿಸ್ತು ಮತ್ತು ದಕ್ಷತೆ ಅವರ ವ್ಯಕ್ತಿತ್ವದ ಗುಣಗಳಾಗಿದ್ದವು. ಶ್ರೀ ಪಿ.ಎಂ. ಬಾಂಗಿಯವರು ವಕೀಲವೃತ್ತಿ ವ್ಯಸನಿ, ಸಮಾಜಸೇವಾ ಪ್ರೇಮಿ. ಅವರನ್ನು ನಾನು ಮುಖಾಮುಖಿಯಾಗಿ ಕಂಡವನಲ್ಲ, ಆದರೆ ಅವರ ಕುರಿತು ಕೇಳಿದವನು. ಅವರ ವ್ಯಕ್ತಿತ್ವದ ಕುರಿತು ಗೌರವವಿಟ್ಟುಕೊಂಡವನು.

ಪ್ರತಿಭಾವಂತ ಹಿರಿಯ ಸಂಸದೀಯ ಪಟು ಪುಸ್ತಕ ಮಾಲಿಕೆಯಲ್ಲಿ ಈ ಪುಸ್ತಕ ರಚಿಸುವ ಜವಾಬ್ದಾರಿ ಹೊರಿಸಿದ ಗ್ರಂಥಾಲಯ ಉಪಸಮಿತಿಯ ಅಧ್ಯಕ್ಷರು ಹಾಗೂ ಸದಸ್ಯರಿಗೆ ನನ್ನ ನಮನಗಳು

ಈ ಪುಸ್ತಕ ರಚನೆಗೆ ಒತ್ತಾಸೆಯಾಗಿ ನಿಂತು ನನಗೆ ಬೇಕಾದ ಅಗತ್ಯ ಮಾಹಿತಿ ಒದಗಿಸಿದ ಶ್ರೀ ಪಿ.ಎಂ. ಬಾಂಗಿಯವರ ಮಕ್ಕಳಾದ ಶ್ರೀಮತಿ ಸರೋಜಿನಿ ಪಿ.ಕೊಟ್ಟೂರ್ ಶೆಟ್ಟರ್, ತಾತಾ ಸಾಹೇಬ, ಬಾಳಾ ಸಾಹೇಬ ಮತ್ತು ಚಾಮರಾಜರವರಿಗೆ ನನ್ನ ನೆನಪುಗಳು.

ಕಾಲಬದ್ಧ ಮಿತಿಯಲ್ಲಿಯೇ ಪುಸ್ತಕ ರಚಿಸುವ ಸಂದರ್ಭದಲ್ಲಿ ಎಲ್ಲಂದದಲ್ಲಿ ಸಹಕಾರ ನೀಡಿದ ಗುಲಬರ್ಗಾ ವಿಶ್ವವಿದ್ಯಾಲಯದ ಕುಲಸಚಿವರಾದ ಪ್ರೊ. ಎಸ್.ಎಲ್. ಹಿರೇಮಠ ಅವರನ್ನು ಈ ಸಂದರ್ಭದಲ್ಲಿ ತುಂಬು ಹೃದಯದಿಂದ ನೆನೆಯುತ್ತೇನೆ.

**ಡಾ. ಎಂ.ಎಸ್. ಪಾಟೀಲ**
ಕನ್ನಡ ಅಧ್ಯಯನ ಸಂಸ್ಥೆ,
ಗುಲಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ

# ಪರಿವಿಡಿ

## ಶ್ರೀ ಪಿ.ಎಂ. ಬಾಂಗಿಯವರ ವ್ಯಕ್ತಿತ್ವ

ಜೀವನವೆನ್ನುವುದು ಹಲವು ಸೋಲು ಗೆಲುವುಗಳ ತವರುಮನೆ. ಬದುಕಿಗೆ ಸೋಲು ಹೊಸತೇನಲ್ಲ, ಗೆಲವು ಆಶ್ಚರ್ಯವೂ ಅಲ್ಲ. ಇಂತಹ ಸೋಲು ಗೆಲವಿನ ಘಟನೆಗಳನ್ನು ಸಾಕ್ಷಿಯಾಗಿಟ್ಟುಕೊಂಡು ಜೀವನವನ್ನು ಕಟ್ಟಿಕೊಡಬೇಕು. ವ್ಯಕ್ತಿ ಬದುಕನ್ನು ಘಟನೆಗಳ ಮೂಲಕ ಕಟ್ಟಿಕೊಟ್ಟರೆ ಅದೊಂದು ಒಳ್ಳೆಯ ಜೀವನ ಚರಿತ್ರೆಯಾಗುತ್ತದೆ. ಅಧ್ಯಯನಯೋಗ್ಯ ವ್ಯಕ್ತಿಗಳ ಕುರಿತು ಬರೆಯುವುದು ಒಂದು ರೀತಿ ಆತ್ಮ ತೃಪ್ತಿಯ ಕೆಲಸವೆಂದು ಬಗೆದವನು ನಾನು. ಇದೊಂದು ರೀತಿ ವ್ಯಕ್ತಿ ಮೌಲ್ಯಮಾಪನ. ಬರೆಯಿಸಿಕೊಳ್ಳುವ ವ್ಯಕ್ತಿಯ ಕುರಿತು ಬರಹಗಳು ಬಂದು, ಮತ್ತೆ ಅದೇ ವ್ಯಕ್ತಿಯ ಕುರಿತು ಬರೆಯುವುದೆಂದರೆ ಅದು ಪುನರ್‌ಮೌಲ್ಯಮಾಪನವಾಗುತ್ತದೆ. ಶ್ರೀ ಪಿ.ಎಂ. ಬಾಂಗಿಯವರ ಈ ಬರಹ, ಪುನರ್‌ಮೌಲ್ಯಮಾಪನವೆಂದು ನಾನು ತಿಳಿದಿದ್ದೇನೆ.

ವ್ಯಕ್ತಿ ಮತ್ತು ಸಮಾಜ, ಇವು ಒಂದಕ್ಕೊಂದು ಅನನ್ಯ ಸಂಬಂಧವನ್ನು ಹೊಂದಿರುವಂತಹ ಘಟಕಗಳೆ. ವ್ಯಕ್ತಿ ಬದುಕು ಹಾಗೂ ಸಮಾಜಿಕ ಸಂದರ್ಭಗಳ ಬದುಕಿನ ಮೂಲಕ, ಜೀವನಚರಿತ್ರೆ ಕಟ್ಟುವುದರಿಂದ, ಬರೆಯಿಸಿಕೊಳ್ಳುವ ವ್ಯಕ್ತಿಗೆ ನ್ಯಾಯ ಒದಗಿಸಿದಂತಾಗುತ್ತದೆ. ವ್ಯಕ್ತಿ ಮೂಲಕ ಸಮಾಜದಲ್ಲಿ ಘಟಿಸಿದ ಒಳ್ಳೆಯ ಕಾರ್ಯಗಳ ದಾಖಲೀಕರಣವೂ ಇಂದು ಅಗತ್ಯವಾಗಿದೆ. ಇಂತಹ ಜೀವನ ಚರಿತ್ರೆಗಳು ಭವಿಷ್ಯದ ಸಾಲುದೀಪಗಳು. ಅಂತಹ ಸಾಲುದೀಪಗಳಲ್ಲಿ ಶ್ರೀ ಪಿ.ಎಂ. ಬಾಂಗಿಯವರು ಒಬ್ಬರು.

### ಪರಿಸರ ಮತ್ತು ಶಿಕ್ಷಣ :

ಸುಸಂಸ್ಕೃತ ಮನೆತನದಲ್ಲಿ ಜನಿಸಿದ ಬಾಂಗಿಯವರು, ಸಾದಾಚಾರ ಸಂಪನ್ನರು, ಸರಳಜೀವಿಗಳು. ಇವರ ಹೆಸರು ಪವಾಡಪ್ಪ ಮಲ್ಲಪ್ಪ ಬಾಂಗಿ. 03.03.1903 ರಂದು ಜನಿಸಿದ ಇವರು ತಮ್ಮ ಪ್ರಾಥಮಿಕ ಹಾಗು ಪ್ರೌಢ ಶಿಕ್ಷಣವನ್ನು ಜಮಖಂಡಿಯಲ್ಲಿಯೇ ಮುಗಿಸಿದರು. ಪೇಶ್ವೆ ಆಡಳಿತ ಪ್ರಭಾವದಿಂದ ಅಂದು ಬಾಂಬೆ ಕರ್ನಾಟಕದಲ್ಲಿ ಕನ್ನಡ ಮಾತೃಭಾಷೆಯಿದ್ದರೂ,

ಮರಾಠಿ ಪ್ರಭಾವವೇ ಹೆಚ್ಚು. ವ್ಯಾಪಾರ ವಹಿವಾಟುಗಳೆಲ್ಲ ಮೋಡಿಯಲ್ಲಿ. ಹೀಗಾಗಿ ಪಿ.ಎಂ. ಬಾಂಗಿಯವರು ಮರಾಠಿ ಮಾಧ್ಯಮದಲ್ಲಿ ತಮ್ಮ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣವನ್ನು ಪೂರೈಸಿದರು. ಬಿ.ಎ. ಪದವಿಯನ್ನು ಸಾಂಗ್ಲಿಯ ವಿಲಿಂಗ್ಡನ್ ಕಾಲೇಜಿನಲ್ಲೂ, ಪೂನಾದ ಫರ್ಗ್ಯುಸನ್ ಕಾಲೇಜಿನಲ್ಲೂ ಮುಗಿಸಿದರು. ಪಿ.ಎಂ. ಬಾಂಗಿಯವರ ತಂದೆಯವರಾದ ಮಲ್ಲಪ್ಪನವರು ತಮ್ಮ ವ್ಯವಹಾರದ ಆದಾಯ ತೆರಿಗೆಯ ಸಲಹೆಗಾಗಿ ಶ್ರೀ ಪೋಂಕ್ಷೆ ವಕೀಲರ ಹತ್ತಿರ ಹೋಗುತ್ತಿದ್ದರಂತೆ. ಅವರು ಲಿಂಗಾಯತರನ್ನು ಶೂದ್ರರೆಂದೇ ಪರಿಗಣಿಸಿ ಚಪ್ಪಲಿ ಬಿಡುವ ಜಾಗದಲ್ಲಿ ಕೂಡಿಸುತ್ತಿದ್ದರಂತೆ. ಈ ಅಸಹನೀಯ ಅವಮಾನವನ್ನು ಸಹಿಸದ ಶ್ರೀ ಮಲ್ಲಪ್ಪನವರು, ನನ್ನ ಮಕ್ಕಳಲ್ಲಿ ಒಬ್ಬನನ್ನಾದರೂ ವಕೀಲನನ್ನಾಗಿ ಓದಿಸಿಯೇತೀರಬೇಕೆಂದು ನಿರ್ಧರಿಸಿ, ತಮ್ಮ ಮಗ ಪವಾಡಪ್ಪನವರನ್ನು ಪುಣೆಯಲ್ಲಿಟ್ಟು ಎಲ್.ಎಲ್.ಬಿ. ಪದವಿ ಪಡೆಯುವಂತೆ ಮಾಡಿದರು. ಶ್ರೀ ಪಿ.ಎಂ. ಬಾಂಗಿಯವರು ಜಮಖಂಡಿಯನ್ನೆ ತಮ್ಮ ಕಾರ್ಯಕ್ಷೇತ್ರ ಮಾಡಿಕೊಂಡು ವಕೀಲಿ ವೃತ್ತಿಯನ್ನು ಪ್ರಾರಂಭಿಸಿದರು. ಅವರು 1934ರಲ್ಲಿ ಚೆನ್ನಮ್ಮ ಅವರನ್ನು ಧರ್ಮಪತ್ನಿಯನ್ನಾಗಿ ಸ್ವೀಕರಿಸಿದರು. ಚೆನ್ನಮ್ಮ ಅವರಿಂದ ಏಳು ಜನ ಮಕ್ಕಳು. ಹೀಗಾಗಿ ಶ್ರೀ ಪಿ.ಎಂ. ಬಾಂಗಿಯವರದು ಶ್ರೀಮಂತ ಕುಟುಂಬ. ಸಂತೃಪ್ತಿಯ ಸಂಸಾರ.

## ವೃತ್ತಿ–ಪ್ರವೃತ್ತಿ :

ವಕೀಲಿ ವೃತಿಯನ್ನು ಶ್ರೀ ಪಿ.ಎಂ. ಬಾಂಗಿಯವರು ಪವಿತ್ರ ಕಾರ್ಯವೆಂದೇ ಪರಿಗಣಿಸಿದವರು. ತುಂಬ ಓದಿಕೊಂಡ ಬಾಂಗಿಯವರು, ಅಪ್ಪಟ ಶರಣಜೀವಿ. ಬಸವಾನುಯಾಯಿ. ವಕೀಲಿ ವೃತ್ತಿ ಎಂದರೆ ನ್ಯಾಯಕ್ಕಾಗಿ ಹೋರಾಡುವುದು, ನ್ಯಾಯದ ಪರವಾಗಿ ನಿಲ್ಲುವುದು. ಇಂತಹ ವೃತ್ತಿಯನ್ನು ಶ್ರೀ ಬಾಂಗಿಯವರು ತಪಸ್ವಿನಂತೆ ನಿರ್ವಹಿಸಿದರು. ವಕೀಲಿ ವೃತ್ತಿಯನ್ನು ಅವರು ಗೌರವಿಸಿದರು. ಅದು ದೇವರ ಪೂಜೆಯಷ್ಟು ಪವಿತ್ರವೆಂದು ಬದುಕಿನುದ್ದಕ್ಕೂ ಚಾಚೂ ತಪ್ಪದೆ ಪಾಲಿಸಿಕೊಂಡುಬಂದರು. ಕಾಯಕದಲ್ಲಿ ಕೈಲಾಸ ಕಂಡರು. ವೃತ್ತಿಯೇ ಧರ್ಮ, ದೇವರು ಎಂದು ಬದುಕಿದರು. Dignity of Labour is Divinity of Labour ಎಂಬುದನ್ನು ಅಕ್ಷರಶಃ ಪಾಲಿಸಿದರು. ತಮ್ಮ ಕಕ್ಷಿದಾರರನ್ನು ಎಂದೂ

ಹಿಂಸಿಸಿದವರಲ್ಲ. ಹಣಕ್ಕಾಗಿ ಅವರಿಗೆ ನೋವನ್ನು ನೀಡಿದವರಲ್ಲ. ಹಣಕ್ಕಾಗಿ ಅನ್ಯಾಯದ ವ್ಯಾಜ್ಯಗಳನ್ನು ಅವರು ಕೈಗೆತ್ತಿಕೊಳ್ಳುತ್ತಿರಲಿಲ್ಲ. 'ಅನ್ಯಾಯವಾದವರಿಗೆ ನ್ಯಾಯ ಒದಗಿಸಿಕೊಡುವವರೇ, ಅನ್ಯಾಯದ ಪರವಾಗಿ ವಾದ ಮಾಡಿದರೆ ಹೇಗೆ? ತಪ್ಪಿತಸ್ಥ ಶಿಕ್ಷೆ ಅನುಭವಿಸಲಿ, ತಪ್ಪಿತಸ್ಥರಲ್ಲದವರನ್ನು ರಕ್ಷಿಸಬೇಕು' ಇದು ಬಾಂಗಿಯವರ ವೃತ್ತಿಧರ್ಮ. ನ್ಯಾಯಕ್ಕಾಗಿ ಹೋರಾಡುವುದು ಅವರ ವೃತ್ತಿಧರ್ಮವಾದರೆ, ಇದರಿಂದ ಸಧೃಡ ಸಮಾಜ ರಚನೆಯಾಗುವುದೆಂದು ತಿಳಿದುಕೊಂಡು ರಾಜಕೀಯದ ಮೂಲಕ ಸಮಾಜಸೇವೆಯನ್ನು ತಮ್ಮ ಪ್ರವೃತ್ತಿಯನ್ನಾಗಿಸಿಕೊಂಡಿದ್ದರು.

ವಕೀಲಿ ವೃತ್ತಿಯಲ್ಲಿ ಕಾಯಾ–ವಾಚಾ–ಮನಸಾ ತಮ್ಮನ್ನು ತಾವು ತೊಡಗಿಸಿಕೊಂಡವರು. ಕಕ್ಷಿದಾರರನ್ನು ವ್ಯವಹಾರಿಕವಾಗಿ ಕಾಣದೆ, ಮಾನವೀಯ ಅನುಕಂಪದಿಂದಲೇ ನೋಡಿದವರು. ದಲಿತ–ಬಡವರ ಬೆನ್ನಿಗೆ ನಿಂತು, ಅವರ ಹಿತಾಸಕ್ತಿಗಳನ್ನು ರಕ್ಷಿಸುತ್ತ ಬಂದವರು. ವಕಾಲತ್ತನ್ನು ಒಂದು ಕಲೆಯಾಗಿಸಿಕೊಂಡವರು. ನಿರಂತರ ಅಧ್ಯಯನ, ಸಮಯ ಪ್ರಜ್ಞೆ, ದಿನಾಲು ತಪ್ಪದೆ ಕೋರ್ಟಿಗೆ ಹೋಗುವುದು, ಆತ್ಮವಂಚನೆ ಮಾಡಿಕೊಳ್ಳದೆ ವೃತ್ತಿಯನ್ನು ಗೌರವಿಸ್ಸಿದ ಧೀಮಂತರು. ಬಾಂಗಿಯವರು ಅದೃಷ್ಟ, ಸುದೈವ–ದುರ್ದೈವಗಳನ್ನು ನಂಬದೇ ಪ್ರಾಮಾಣಿಕ ಪ್ರಯತ್ನಗಳನ್ನೇ ನಂಬಿದವರು. ಪ್ರಯತ್ನ ಸುದೈವದ ತಾಯಿಯೆಂಬುದರಲ್ಲಿ ನಂಬಿಕೆಯಿಟ್ಟವರು. ಒಂದು ನಿಮಿಷವನ್ನು ವಿನಾಕಾರಣ ಕಳೆದವರಲ್ಲ. ಹೀಗಾಗಿ ಬಾಂಗಿಯವರು, ಬಾಂಗಿ ವಕೀಲರೆಂದೇ ಪ್ರಸಿದ್ಧರಾಗಿದ್ದರು. ಕೋರ್ಟು ಕೇಸುಗಳನ್ನು ಆಳವಾಗಿ ಅಧ್ಯಯನ ಮಾಡಿಕೊಂಡು ಹೋಗುತ್ತಿದುದರಿಂದ ಮತ್ತು ವಾದಗಳನ್ನು ಮಂಡಿಸುವ ವಿಧಾನಗಳಿಂದ ಸುಲಭವಾಗಿ ಜಯಗಳಿಸುತ್ತಿದ್ದರು. ನ್ಯಾಯಪರ ಮತ್ತು ಗುಣ ಪಕ್ಷಪಾತಿಯಾಗಿ ಬದುಕಿದವರು. ಸತ್ಯಕ್ಕಾಗಿ ಹಠಮಾರಿಗಳಾಗುತ್ತಿದ್ದರು. ಜಿದ್ದಿನ ಮನುಷ್ಯರೆಂದೂ, ಪ್ರಾಮಾಣಿಕರೆಂದೂ, ಹಂಗಿನವರಲ್ಲವೆಂದೂ, ಮುಂಗೋಪಿಗಳೆಂದೂ, ಶ್ರದ್ಧೆ–ಶಿಸ್ತಿನ ಸರಳ ವ್ಯಕ್ತಿತ್ವದವರೆಂದೂ ಗುರುತಿಸಲ್ಪಟ್ಟಿದ್ದರು. ತಮ್ಮ ಬದುಕಿನುದ್ದಕ್ಕೂ ನೈತಿಕತೆಯನ್ನು ಭದ್ರವಾಗಿ ರಕ್ಷಿಸಿಕೊಂಡುಬಂದವರು.

ವಕೀಲಿ ವೃತ್ತಿಯಿಂದ ಜನಪ್ರಿಯರಾದ ಬಾಂಗಿ ವಕೀಲರು ಸಾರ್ವಜನಿಕ ಮತ್ತು ರಾಜಕೀಯ ಬದುಕಿನಲ್ಲಿ ಸಕ್ರಿಯವಾಗಿ ತಮ್ಮನ್ನು ತಾವು ತೊಡಗಿಸಿಕೊಂಡವರು. 1932 ರಿಂದಲೇ ರಾಜಕೀಯ ಕ್ಷೇತ್ರದಲ್ಲಿ ಗುರುತಿಸಿಕೊಂಡವರು. ಚುನಾವಣೆಯಲ್ಲಿನ ಸೋಲು ಗೆಲುವುಗಳನ್ನು ಸಮನಾಗಿ ಸ್ವೀಕರಿಸಿದವರು. ಜಮಖಂಡಿ ಸಂಸ್ಥಾನದ ಪ್ರಜಾ-ಪರಿಷತ್ತಿನ ಮುಖ್ಯಮಂತ್ರಿಗಳಾಗಿ, ಪ್ರತಿಷ್ಠಿತ ಹುದ್ದೆಯಲ್ಲಿ ಕಾರ್ಯನಿರ್ವಹಿಸಿದವರು. 1952 ರಲ್ಲಿ ನಡೆದ ದೇಶದ ಮೊದಲ್ನೇ ಸಾರ್ವತ್ರಿಕ ಚುನಾವಣೆಯಲ್ಲಿ ಗುಡಿಸಲು ಸಂಕೇತದಿಂದ ಚುನಾವಣೆಗೆ ಸ್ಪರ್ಧಿಸಿದರು. ನಂತರ 1957 ರಲ್ಲೂ ಚುನಾವಣೆಗೆ ನಿಂತಿದ್ದರು. ಆದರೆ, ಅವೆರಡೂ ಚುನಾವಣೆಗಳಲ್ಲಿ ಕುತಂತ್ರ ರಾಜಕಾರಣದಿಂದ ಪರಾಜಯಗೊಂಡರು. ಸೋಲಿನಿಂದ ಅವರೆಂದೂ ಅಧೀರರಾದವರಲ್ಲ. ಸಾರ್ವಜನಿಕ ಹಿತಾಸಕ್ತಿಯ ಒಳ್ಳೆಯ ಕಾರ್ಯಗಳಿಗೆಲ್ಲ ಇವರು ನಾಯಕರು. ವೈರಿಗಳೂ ಮೆಚ್ಚುವಂತೆ ಕಾರ್ಯನಿರ್ವಹಿಸಿದವರು. 1972 ರಲ್ಲಿ ಇಂದಿರಾ ಕಾಂಗ್ರೆಸ್ಸಿನ ಅಭ್ಯರ್ಥಿಯಾಗಿ ಚುನಾವಣೆಗೆ ಸ್ಪರ್ಧಿಸಿ. ಸಮೀಪದ ಪ್ರತಿಸ್ಪರ್ಧಿ ಎ.ಜಿ. ದೇಸಾಯಿಯವರನ್ನು ಸೋಲಿಸಿ ಜಮಖಂಡಿ ಶಾಸಕರಾಗಿ ಚುನಾಯಿತರಾದರು. ರಾಜಕೀಯ ಬದುಕಿನಲ್ಲಿ ತುಂಬು ಅನುಭವವನ್ನು ಹೊಂದಿದವರು. 1942 ರಿಂದ 1948 ರವರೆಗೆ ಜಮಖಂಡಿ ಸಂಸ್ಥಾನದ ಪ್ರಜಾಪರಿಷತ್ತಿನ ಸದಸ್ಯರಾಗಿ, ಮಂತ್ರಿಗಳಾಗಿ ಕಾರ್ಯನಿರ್ವಹಿಸಿದ್ದರು. 1932 ರಿಂದ 1936 ರವರೆಗೆ ಜಮಖಂಡಿ ನಗರಸಭೆಯ ಸದಸ್ಯರಾಗಿ, ಚೇರಮನ್‌ರಾಗಿ ಕಾರ್ಯನಿರ್ವಹಿಸಿದ್ದರು. ಸಹಕಾರಿ ಕ್ಷೇತ್ರದ ಪಾಂಡಿತ್ಯವನ್ನು ಹೊಂದಿದ ಇವರು ಜಮಖಂಡಿ ಅರ್ಬನ್ ಕೋ-ಆಪರೇಟಿವ್ ಬ್ಯಾಂಕಿನ ನಿರ್ದೇಶಕರು, ಚೇರಮನ್‌ರೂ ಆಗಿ ಕಾರ್ಯನಿರ್ವಹಿಸಿದ್ದರು. ಇಷ್ಟೆಲ್ಲ ಅನುಭವಗಳೊಂದಿಗೆ ನೇಕಾರರ ಜೀವದ್ರವ್ಯವಾಗಿ ದುಡಿದು 'ನೇಕಾರ ನೇತಾ' ಎಂದೇ ಅವರು ಪ್ರಸಿದ್ಧರು. ರಾಜಕೀಯ ಹಾಗೂ ಸಾರ್ವಜನಿಕ ದೀರ್ಘಕಾಲದ ಬದುಕಿನಲ್ಲಿ ಶುದ್ಧ ಅಪರಂಜಿ ಬಾಂಗಿಯವರು. ಇನ್ನೊಬ್ಬರ ಒಂದು ದುಡ್ಡಿಗೂ ಕಣ್ಣೆತ್ತಿ ನೋಡದ ಶುದ್ಧ ಪ್ರಾಮಾಣಿಕರು. ಹೀಗಾಗಿ ಜನ ಅವರನ್ನು ಕಂಡರೆ ಹೆದರುವಷ್ಟರಮಟ್ಟಿಗೆ ಪ್ರಾಮಾಣಿಕರು. ಇಂತಹ ಘನ ವ್ಯಕ್ತಿತ್ವದ ಶ್ರೀ ಪಿ.ಎಂ. ಬಾಂಗಿಯವರು ವಿಧಾನಸಭೆಯಲ್ಲಿ ಸಮರ್ಥ ಶಾಸಕರೆಂದು ಹೆಸರು ಮಾಡಿದವರು.

ಶ್ರೀ ದೇವರಾಜ ಅರಸರು ಮುಖ್ಯಮಂತ್ರಿ ಆಗಿದ್ದ ಸಮಯ. ಸಾರ್ವಜನಿಕ ಜೀವನದಲ್ಲಿ ಸರಕಾರ ತರುತ್ತಿರುವ ಬದಲಾವಣೆಗಳ ಪರ್ವಕಾಲವದು. ಘಟಾನುಘಟಿ ಶಾಸಕ ಅನುಭವಿಗಳಿಂದ ತುಂಬಿದ ವಿಧಾನಸಭೆಯಲ್ಲಿ ಶ್ರೀ ಪಿ.ಎಂ. ಬಾಂಗಿಯವರಿಗೆ ಭೂಮಿತೂಕದ ಬೆಲೆಯಿತ್ತು. ಶಾಸಕರಾಗಿ ಅವರು ವಿಷಯಗಳನ್ನು ಮಂಡಿಸುವ ರೀತಿ, ಕಾನೂನಿನ ಪ್ರತಿ ಪರಿಚ್ಛೇದಗಳನ್ನು ತಿಳಿದುಕೊಂಡು ವಿಧೇಯಕಗಳಿಗೆ ಕೊಡುವ ಸಮರ್ಥನೆ, ಜನಪರ ವಿಷಯಗಳಿಗೆ ಒತ್ತು ನೀಡುವ ಪರಿಯಿಂದಾಗಿ ಅವರೆಷ್ಟು ಮಾತನಾಡಿದರೂ ಎಲ್ಲರೂ ಒಪ್ಪುವಂತಿರುತ್ತಿತ್ತು. ಒಟ್ಟಿನಲ್ಲಿ ಲಿಂಗ ಮೆಚ್ಚುವ ರೀತಿಯಲ್ಲಿ ಮಾತನಾಡುತ್ತಿದ್ದುದರಿಂದ ಎಲ್ಲರೂ ಅವರ ಮಾತುಗಳನ್ನು ಶಾಂತವಾಗಿ ಆಲಿಸುತ್ತಿದ್ದರು. ನಿಜವಾಗಿಯೂ ಅವರೊಬ್ಬ ಮಾದರಿ ಶಾಸಕರು. ಘನತೆ-ಗಾಂಭಿರ್ಯಗಳಿಂದ ಕೂಡಿದ ಬಾಂಗಿಯವರು ಮತ್ತೊಮ್ಮೆ ಮಗದೊಮ್ಮೆ ನೋಡಬೇಕೆನ್ನುವ ವ್ಯಕ್ತಿತ್ವವುಳ್ಳವರು. ಅವರ ಕುರಿತು ಬರೆದಷ್ಟೂ ಉಳಿಯುತ್ತದೆ.

ವಿಧಾನಸಭೆಯಲ್ಲಿ ರಾಷ್ಟ್ರ ಸಮಸ್ಯೆ, ರಾಜ್ಯ ಸಮಸ್ಯೆ, ಉತ್ತರ ಕರ್ನಾಟಕದ ಸಮಸ್ಯೆ ಅದರಲ್ಲೂ ವಿಜಾಪೂರ ಜಿಲ್ಲೆಗೆ ಸಂಬಂಧಪಟ್ಟ ಸಮಸ್ಯೆ, ಮತಕ್ಷೇತ್ರ ಜಮಖಂಡಿಯ ಸಮಸ್ಯೆಗಳ ಕುರಿತಾದ ಅವರ ಮಾತುಗಳನ್ನು ಗಮನಿಸಿದಾಗ, ವಿಷಯದ ಸಮಗ್ರ ತಿಳುವಳಿಕೆ ಅವರಿಗಿರುತ್ತಿರುವುದು ಸ್ಪಷ್ಟವಾಗುತ್ತದೆ. ತಮ್ಮ ಮತಕ್ಷೇತ್ರವಾದ ಜಮಖಂಡಿಯ ಕುರಿತು ಮಾತನಾಡುವಾಗ, ಪ್ರತಿಯೊಂದು ಹಳ್ಳಿ, ಆ ಹಳ್ಳಿಗರ ಸಮಸ್ಯೆ ಅವರಿಗೆ ಚನ್ನಾಗಿ ಗೊತ್ತಿರುತ್ತಿತ್ತು. ಅಗಾಧವಾದ ಸ್ಮರಣಶಕ್ತಿ ಅವರದು. ನೇಕಾರರ ಕುರಿತು ಅವರು ಮಾತನಾಡಿದ್ದು ನೋಡಿದರೆ, ನಿಜಕ್ಕೂ ಆಶ್ಚರ್ಯವಾಗುತ್ತದೆ. ಇಡೀ ದೇಶದ ನೇಕಾರಿಕೆಯ ಕುರಿತು ಅವರಿಗೆ ಪೂರ್ಣ ತಿಳುವಳಿಕೆಯಿತ್ತು. ಪ್ರತಿ ರಾಜ್ಯದಲ್ಲಿ ನಡೆಯುವ ಕಾರ್ಯಚಟುವಟಿಕೆಯ ಕುರಿತು ಅಂಕಿಸಂಖ್ಯೆಗಳ ಹಿನ್ನೆಲೆಯಲ್ಲಿ ಸ್ಪಷ್ಟಪಡಿಸುತ್ತಿದ್ದರು. ಗ್ರಾಮೀಣ ಕುಶಲ ಅಥವಾ ಗುಡಿಕೈಗಾರಿಕೆಗಳಿಗೆ ಪ್ರಾಶಸ್ತ್ಯ ನೀಡುವುದರ ಮೂಲಕ ನಿರುದ್ಯೋಗ ಸಮಸ್ಯೆಯನ್ನು ಪರಿಹರಿಸಬಹುದೆಂಬ ತಾತ್ವಿಕ ನಿಲುವು ತಾಳಿದ ಬಾಂಗಿಯವರು ನಿಜಕ್ಕೂ 'ನೇಕಾರ ನೇತಾರರೆ'. ನೇಕಾರರ ಬದುಕು, ಅವರ ಸಮಸ್ಯೆಗಳು, ಕಿತ್ತು ತಿನ್ನುವ ಬಡತನ, ಅವರ ಉನ್ನತೀಕರಣದ ಸಾಧ್ಯಾಸಾಧ್ಯತೆಗಳನ್ನು

ವಿಧಾನಸಭೆಯಲ್ಲಿ ಚರ್ಚಿಸುವಾಗ ಬಾಂಗಿಯವರ ಸಮಾಜೋ ಸಾಂಸ್ಕೃತಿಕ ಕಳಕಳಿಯನ್ನು ಕಾಣಬಹುದಾಗಿದೆ. ಅಂತೆಯೇ ಬನಹಟ್ಟಿಯಲ್ಲಿ ಬಾಂಗಿಯವರ ಪ್ರತಿಮೆಯನ್ನು ಸ್ಥಾಪಿಸಿ, ಇವತ್ತಿಗೂ ಅಲ್ಲಿನ ನೇಕಾರ ಸಮುದಾಯ ನಿತ್ಯ ಪೂಜೆ ಸಲ್ಲಿಸಿ ತಮ್ಮ ಗೌರವವನ್ನು ಸೂಚಿಸುತ್ತಿರುವುದು ಐತಿಹಾಸಿಕ ಸತ್ಯ.

ಪ್ರೀತಿ-ಕರುಣೆ-ಜ್ಞಾನಗಳಿಗೆ ಜಾತಿಯಿಲ್ಲ. ಹಾಗೆಯೇ ಬಾಂಗಿಯವರು ಬಡವರನ್ನು ಪ್ರೀತಿಯಿಂದ ಕಂಡರು, ದಲಿತರನ್ನು ಕರುಣೆಯಿಂದ ಕಾಪಾಡಿದರು, ಜ್ಞಾನವಂತರನ್ನು ಗೌರವಿಸಿದರು. ಮೊದಲೆ ಶ್ರೀಮಂತ ಕೌಟುಂಬಿಕ ಪರಿಸರದಿಂದ ಬಂದ ಇವರು ತಾವು ಬದುಕಿದ್ದ ಕಾಲದಲ್ಲಿ ಹೃದಯ ಶ್ರೀಮಂತಿಕೆಯಿಂದ ಜನಪ್ರೀಯ ಶಾಸಕರಾಗಿ, ನಿಷ್ಠಾವಂತ ವಕೀಲರಾಗಿ, ಪ್ರಾಮಾಣಿಕ ಸಮಾಜ ಸೇವಕರಾಗಿ ಜನಮನದಲ್ಲಿ ಉಳಿದಿದ್ದಾರೆ. ಪ್ರಾಮಾಣಿಕತೆಗೆ ಇನ್ನೊಂದು ಹೆಸರು ಶ್ರೀ ಪಿ.ಎಂ. ಬಾಂಗಿ ವಕೀಲರು.

# ಸಪ್ಲಿಮೆಂಟರಿ ಡಿಮಾಂಡ ಮೇಲಿನ ಚರ್ಚೆ

(27ನೇ ಮಾರ್ಚ 1972)

## 1) ಮತದಾರರ ಪಟ್ಟಿ ಕ್ರಮವಾಗಿರಬೇಕು:

ಶ್ರೀ ಪಿ. ಎಂ. ಬಾಂಗಿ (ಜಮಖಂಡಿ)– ಸನ್ಮಾನ್ಯ ಸಭಾಧ್ಯಕ್ಷಣಿಯವರೆ, ನಾನು ಈ ಸಪ್ಲಿಮೆಂಟರಿ ಡಿಮಾಂಡಿನ ಮೇಲೆ ಕೆಲವು ವಿಚಾರಗಳನ್ನು ತಮ್ಮ ಮುಖಾಂತರ ಸರಕಾರದ ಗಮನಕ್ಕೆ ತರಲಿಚ್ಛಿಸುತ್ತೇನೆ. ಮೊದಲನೆಯದಾಗಿ ಡಿಮ್ಯಾಂಡ್ ನಂ. 9 ರಲ್ಲಿ ಪ್ರಿಂಟಿಂಗ್ ಮತ್ತು ಇಲೆಕ್ಟೊರಲ್ ರೋಲ್ಸ್ ತಯಾರು ಮಾಡುವುದಕ್ಕೆ 2,25,000 ರೂಪಾಯಿಯನ್ನು ಕೇಳಿದ್ದಾರೆ. ಆದರೆ ಇದರ ಬಗ್ಗೆ ಒಂದು ಮಾತನ್ನು ಹೇಳಬಯಸುತ್ತೇನೆ. ಮೊನ್ನೆ ಸಾರ್ವತ್ರಿಕ ವಿಧಾನ ಸಭೆ ಚುನಾವಣೆ ಸಮಯದಲ್ಲಿ ಮತದಾರರ ಪಟ್ಟಿ ಏನು ತಯಾರು ಮಾಡಿದ್ದರು, ಅದರಲ್ಲಿ 100ಕ್ಕೆ 25 ಮಂದಿ ಊರಲ್ಲಿ ಇರಲಿಲ್ಲ ಎಂದು ಬರೆಯಲಾಗಿದೆ. ಆದರೆ ನಿಜವಾಗಿ ಹಾಗಿಲ್ಲ. ಇದರಿಂದ ಅವರ ಮತದಾನದ ಹಕ್ಕು ನಷ್ಟವಾಗಿ ಹೋಗಿದೆ. ಅದಲ್ಲದೆ ಈ ಪಟ್ಟಿಯು ಬೇರೆ ಕೆಲವು ದೋಷಗಳಿಂದ ಕೂಡಿದ್ದಾಗಿದೆ. ಸರ್ಕಾರದವರು ಇಷ್ಟು ಹಣವನ್ನು ಖರ್ಚು ಮಾಡಿದರು ಕೂಡ ಸರಿಯಾದ ಮತದಾರರ ಪಟ್ಟಿ ತಯಾರು ಮಾಡಿಲ್ಲ. ಅದು ಒಂದು ದೊಡ್ಡ "ಕ್ರಿಮಿನಲ್ ವೇಸ್ಟ್" ಎಂದು ನಾನು ಹೇಳಬಯಸುತ್ತೇನೆ. ಇನ್ನು ಮುಂದಾದರು ಕೂಡ ಸ್ವಲ್ಪ ಹೆಚ್ಚು ಖರ್ಚಾದರೂ ಪರವಾಗಿಲ್ಲ; ಮತದಾರರ ಪಟ್ಟಿ ಮಾತ್ರ ಬಹಳ ಕ್ರಮವಾಗಿದ್ದುಕೊಂಡು ಯಾವ ಮನುಷ್ಯನ ಮತವು ಕೂಡ ಪೋಲಾಗದಂತೆ ಏರ್ಪಾಡು ಮಾಡಬೇಕೆಂದು ನಾನು ಕೇಳಿಕೊಳ್ಳುತ್ತೇನೆ. ನಮ್ಮ ತಾಲೂಕ ಬೋರ್ಡ್ ಚುನಾವಣೆ ಹತ್ತಿರ ಬರುತ್ತಾ ಇದೆ. ಆದ್ದರಿಂದ ಒಂದು ಶುದ್ಧವಾದ ಮತದಾರ ಪಟ್ಟಿಯನ್ನು ಮಾಡುವುದು ಒಳ್ಳೆಯದು ಎಂಬ ಸೂಚನೆ ಕೊಡಬಯಸುತ್ತೇನೆ.

## 2) ಭೂ ಸುಧಾರಣೆ (ಉಳುವವನೇ ಭೂ ಒಡೆಯ):

ಇನ್ನು ಲ್ಯಾಂಡ್ ರೀಫಾರ್ಮ್ಸ್ ಕಾನೂನಿನ 66ನೇ ಕಲಂ ಪ್ರಕಾರ ಭೂ ಮಾಲಿಕರು ಡಿಕ್ಲೇರೇಷನ್ ಕೊಡುವ ಬಗ್ಗೆ ಗೆಜೆಟ್ ನೋಟಿಫಿಕೇಶನ್ ಪ್ರಕಟಿಸಿದ್ದಾರೆ. ಅನಂತರ ಭೂ ಮಾಲಿಕರು ತಮ್ಮ ಹಿಡುವಳಿ ಬಗ್ಗೆ ಡಿಕ್ಲೇರೇಶನ್ ಕೊಟ್ಟರು. ತದನಂತರ ತಹಸೀಲ್ದಾರರು ಸೀಲಿಂಗ್ ಫಿಕ್ಸ್ ಮಾಡಿ ಸರ್‌ಪ್ಲಸ್ ಏರಿಯಾ ಡಿಕ್ಲೇರ್ ಮಾಡಿದ್ದಾರೆ. ಆದರೆ ಸರ್‌ಪ್ಲಸ್ ಏರಿಯಾದ ಬಗ್ಗೆ ಕೊಡಬೇಕಾದ ಪರಿಹಾರಧನದ ಬಗ್ಗೆ ಈ ಬಜೆಟ್ಟಿನಲ್ಲಿ ಯಾವ ವ್ಯವಸ್ಥೆಯನ್ನೂ ಮಾಡಿಲ್ಲ. ಹೀಗಾಗಿ ಸರ್‌ಪ್ಲಸ್ ಜಮೀನು ಹಂಚುವ ಕೆಲಸ ನಿಂತಿದೆ. ಆದ್ದರಿಂದ ಸರಕಾರದವರು ಆ ಪರಿಹಾರ ಧನಕ್ಕೆ ತೀವ್ರ ಏರ್ಪಾಡು ಮಾಡಿ ಉಳುವವನೇ ಭೂಮಿಯ ಒಡೆಯನಾಗುವಂತೆ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ. ಇವೊತ್ತಿನ ದಿವಸ ಭೂ ಸುಧಾರಣೆ ಕಾಯ್ದೆಯ 44ನೇ ಕಲಮಿನ ಪ್ರಕಾರ ನೋಟಿಫಿಕೇಷನ್ ಮಾಡಿದರೆ, "ಟಿಲರ್ಸ್ ಆಫ್ ದಿ ಸಾಯಿಲ್ ವಿಲ್ ಬಿ ದಿ ಓನರ್ಸ್ ಆಫ್ ದಿ ಲ್ಯಾಂಡ್" ಆಗುತ್ತಾರೆ. ಆದ್ದರಿಂದ ಆ 44ನೇ ಕಲಮಿನ ಪ್ರಕಾರ ಸರ್ಕಾರ ಗೆಜೆಟ್ ಪ್ರಕಟಣೆ ಮಾಡಬೇಕು ಮತ್ತು ಭೂಮಾಲಿಕರಿಗೆ ಇದರ ಪರಿಹಾರ ಧನವನ್ನು ಕೊಡಬೇಕು. ಈ ಬಾಬಿನ ಬಗ್ಗೆ ಬಜೆಟ್ಟಿನಲ್ಲಿ ಬೇಕಾದ ಹಣವನ್ನು ಒದಗಿಸುವಂಥ ಏರ್ಪಾಡು ಮಾಡಬೇಕೆಂದು ಮಾನ್ಯ ಅರ್ಥಸಚಿವರಿಗೆ ಸೂಚಿಸುತ್ತೇನೆ.

## 3) ನ್ಯಾಯವೆಂಬುದು ಮನೆ ಬಾಗಿಲಿನಲ್ಲಿ ದೊರೆಯಬೇಕು:

ಅದೇ ಪ್ರಕಾರ ಅಡ್ಮಿನಿಸ್ಟ್ರೇಷನ್ ಆಫ್ ಜಸ್ಟಿಸ್ ಬಗ್ಗೆ ಹೇಳಬೇಕೆಂದರೆ, ನ್ಯಾಯ ಏನಿದೆ ಅದು ಜನರ ಬಾಗಿಲಿನಲ್ಲಿ ದೊರೆಯಬೇಕು. ಜಸ್ಟಿಸ್ ದೂರದಲ್ಲಿದ್ದರೆ ಲಿಟಿಗಂಟ್ಸ್‌ಗೆ ವಿಪರೀತ ತ್ರಾಸಾಗುತ್ತದೆ. ಆದ್ದರಿಂದ ಪ್ರತಿಯೊಂದು ತಾಲೂಕಿನಲ್ಲಿ ಮುನ್ಸಿಫ್ ಮ್ಯಾಜಿಸ್ಟ್ರೇಟರುಗಳನ್ನು ನೇಮಕ ಮಾಡಬೇಕು ಮತ್ತು ಅದಕ್ಕೆ ಎಷ್ಟು ಖರ್ಚಾಗುತ್ತದೋ ಅಷ್ಟು ಖರ್ಚನ್ನು ಅರ್ಥಮಂತ್ರಿಗಳು ಮಂಜೂರು ಮಾಡಬೇಕೆಂದು ಪ್ರಾರ್ಥನೆ.

ಎರಡನೆಯದಾಗಿ ಮುನ್ಸೀಪ್ ಮ್ಯಾಜಿಸ್ಟ್ರೇಟರುಗಳ ವಾಸಕ್ಕೆ ಸರ್ಕಾರಿ ಕಟ್ಟಡಗಳಿಲ್ಲ. ಅವರು ಖಾಸಗಿ ಮನೆಮಾಲಿಕರ ಮನೆಯನ್ನು ಬಾಡಿಗೆಯಿಂದ ತೆಗೆದುಕೊಳ್ಳಬೇಕಾಗುತ್ತದೆ. ಆಯಾ ಮನೆ ಮಾಲಿಕರ ವ್ಯಾಜ್ಯಗಳು ಕೋರ್ಟಿನಲ್ಲಿ ಇರುವುದರಿಂದ ಆಯಾ ಮುನ್ಸೀಪ್‌ರಿಗೆ ನ್ಯಾಯ ನಿರ್ಣಯ ಮಾಡುವಲ್ಲಿ ತೊಂದರೆ ಉಂಟಾಗುತ್ತದೆ. ಆದ್ದರಿಂದ ಸರ್ಕಾರದ ಪರವಾಗಿ ಅವರ ವಸತಿ ಸೌಕರ್ಯಕ್ಕಾಗಿ ಸೂಕ್ತ ಕಟ್ಟಡ ಕಟ್ಟಿಸಿಕೊಡಬೇಕು. ಆ ಪ್ರಕಾರ ಎಷ್ಟು ಖರ್ಚಾಗುತ್ತದೋ ಅಷ್ಟನ್ನು ಸರ್ಕಾರದವರು ವೆಚ್ಚಮಾಡಬೇಕು. ಆ ಬಗ್ಗೆ ಬಜೆಟ್ಟಿನಲ್ಲಿ ತಕ್ಕ ಹಣ ಒದಗಿಸಬೇಕೆಂದು ನಾನು ಎರಡನೆ ಸೂಚನೆಯನ್ನು ಮಾಡುತ್ತೇನೆ. ಕೊನೆಯದಾಗಿ ಈಗ ಸರ್ಕಾರದವರು ವೋಟ ಆನ್ ಅಕೌಂಟ್ ಮತ್ತು ಸಪ್ಲಿಮೆಂಟರಿ ಡಿಮ್ಯಾಂಡ್ಸ್ ಏನಿಟ್ಟಿದ್ದಾರೋ ಅದಕ್ಕೆ ನಾನು ಬೆಂಬಲವನ್ನು ನೀಡಿ, ನನ್ನ ಮಾತನ್ನು ಮುಗಿಸುತ್ತೇನೆ.

## ರಾಜ್ಯಪಾಲರ ಭಾಷಣಕ್ಕೆ ವಂದನಾ ನಿರ್ಣಯದ ಮೇಲಿನ ಚರ್ಚೆ

**(14ನೇ ಏಪ್ರಿಲ್, 1972)**

### 1) ಬಡ ನೇಕಾರರ ಗೋಳನ್ನು ಪರಿಹರಿಸಬೇಕು:

ಶ್ರೀ ಪಿ. ಎಂ. ಬಾಂಗಿ (ಜಮಖಂಡಿ) – ಮಾನ್ಯ ಅಧ್ಯಕ್ಷರೇ, ಈಗ ಈ ಸಭೆಯ ಮುಂದೆ ಮಂಡಿಸಿರತಕ್ಕ ರಾಜ್ಯಪಾಲರ ವಂದನಾರ್ಪಣಾ ಗೊತ್ತುವಳಿಗೆ ನಾನು ಅನುಮೋದನೆ ಕೊಡುತ್ತಾ, ಒಂದೆರ್ಡು ಮಾತು ಹೇಳಬಯಸುತ್ತೇನೆ. ರಾಜ್ಯಪಾಲರು ತಮ್ಮ ಭಾಷಣದಲ್ಲಿ ಪ್ರಸ್ತಾಪಿಸಿರುವ ವಿಷಯಗಳ ಬಗ್ಗೆ ಸರ್ಕಾರ ಕ್ರಮ ತೆಗೆದುಕೊಂಡು ಈ ಬಗ್ಗೆ ಸೂಕ್ತ ಪರಿಹಾರ ಕೊಟ್ಟರೆ, ನಮ್ಮ ಇಡೀ ಮೈಸೂರು ರಾಜ್ಯ ಅಭಿವೃದ್ಧಿ ಹೊಂದುವುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ರಾಜ್ಯಪಾಲರ ಭಾಷಣದಲ್ಲಿ ಒಂದು ಅಂಶದ ಬಗ್ಗೆ ಉಲ್ಲೇಖ ಇಲ್ಲ. ಅದು ಯಾವುದೆಂದರೆ ನೇಕಾರರಿಗೆ ಸಂಬಂಧಪಟ್ಟ ವಿಷಯ. ಮೈಸೂರು ರಾಜ್ಯದಲ್ಲಿ ಸುಮಾರು ಒಂದು ಲಕ್ಷ ಐವತ್ತು ಸಾವಿರ ಜನ ನೇಕಾರರು ಇದ್ದಾರೆ. ನೇಕಾರರಲ್ಲಿ ಕೆಲವರು ಕೇವಲ ರೇಷ್ಮೆ ಬಟ್ಟೆಗಳನ್ನೂ, ಕೆಲವರು ನೂಲಿನ ಬಟ್ಟೆಗಳನ್ನೂ

ನೇಯುತ್ತಾರೆ. ಈಗ ಪವರ್‌ಲೂಮ್ ಫ್ಯಾಕ್ಟರಿಯ ಮಾಲೀಕರು ಬಣ್ಣದ ಬಟ್ಟೆ ನೇಯಕೂಡದು ಎಂದು ಟೆಕ್ಸ್‌ಟೈಲ್ ಕಮೀಷನರ್ ಹುಕುಂ ಮಾಡಿದ್ದಾರೆ. ಇದನ್ನು ಸರ್ಕಾರ ವಿಚಾರ ಮಾಡಬೇಕೆಂದು ವಿನಂತಿ ಮಾಡಿಕೊಳ್ಳುತ್ತೇನೆ. ಗ್ರಾಮಾಂತರ ಪ್ರದೇಶಗಳಲ್ಲಿ ನೇಕಾರರು ಕೈಮಗ್ಗ ಹಾಕಿ ಅದಕ್ಕೆ ಸಾಕಷ್ಟು ಬಂಡವಾಳವನ್ನು ಹಾಕಿದ್ದಾರೆ. ಪವರ್ ಲೂಮ್‌ಗಳಿಂದ ಬಣ್ಣದ ಬಟ್ಟೆ ನೇಯಬಾರದು, ಒಂದು ವೇಳೆ ಅವರು ಬಣ್ಣದ ಬಟ್ಟೆ ನೇಯ್ದರೆ ಅದು ಅಪರಾಧವಾಗುತ್ತದೆ ಎಂದು ಟೆಕ್ಸ್‌ಟೈಲ್ ಕಮೀಷನರ್ ಹುಕುಂ ಮಾಡಿದ್ದಾರೆ. ಇದರ ಜೊತೆಗೆ ಹಿಂದಿನ ರಾಜ್ಯಪಾಲ ಶ್ರೀ ಧರ್ಮವೀರ ಅವರು ಒಂದು ಹುಕುಂ ಮಾಡಿ ಎಲ್ಲಾ ಡೆಪ್ಯೂಟಿ ಕಮೀಷನರ್‌ಗಳಿಗೆ ಸೂಚನೆ ಕೊಟ್ಟು, ಯಾರಾದರೂ ಪವರ್ ಲೂಮ್‌ನವರು ಬಣ್ಣದ ಬಟ್ಟೆ ತಯಾರು ಮಾಡಿದರೆ ಅದು ಅಪರಾಧವಾಗುತ್ತದೆ. ಆದ್ದರಿಂದ ಪವರ್-ಲೂಮ್‌ನವರು ಬಣ್ಣದ ಬಟ್ಟೆ ತಯಾರಿಸುವುದನ್ನು ನಿಲ್ಲಿಸಬೇಕೆಂದು ಸೂಚನೆ ಕೊಟ್ಟಿದ್ದರು. ಆದರೆ ಆ ಆಜ್ಞೆಯನ್ನು ಡೆಪ್ಯುಟಿ ಕಮೀಷನರ್‌ಗಳು ಇದುವರೆಗೆ ಇಂಪ್ಲಿಮೆಂಟ್ ಮಾಡಿಲ್ಲ. ಇದರಿಂದಾಗಿ ಸಾವಿರಾರು ಹ್ಯಾಂಡ್ಲೂಮ್ ನೇಕಾರರು ನಿರುದ್ಯೋಗಿಯಾಗಿದ್ದಾರೆ. ಆದ್ದರಿಂದ ಇವನ್ನು ಮಾನ್ಯ ಕೈಗಾರಿಕಾ ಮಂತ್ರಿಗಳು ಗಮನಿಸಿ ಟೆಕ್ಸ್‌ಟೈಲ್ ಕಮೀಷನರ್ ಹುಕುಮನ್ನು ಜಾರಿಗೆ ತಂದು ಬಡನೇಕಾರರ ಗೋಳನ್ನು ಬಗೆಹರಿಸಬೇಕೆಂದು ನನ್ನ ವಿನಂತಿ.

## 2) ವಿಜಾಪುರ ಜಿಲ್ಲೆಗೆ ಕುಡಿಯುವ ನೀರಿನ ವ್ಯವಸ್ಥೆ ಮಾಡಬೇಕು:

ಎರಡನೆಯ ವಿಷಯ ಏನೆಂದರೆ, ಕೃಷ್ಣಾ ನದಿಯಲ್ಲಿ ಇವತ್ತು ನೀರು ಇಲ್ಲ. ಆದ್ದರಿಂದ ನದಿ ದಡದಲ್ಲಿ ವಾಸಿಸುವ ವಿಜಾಪೂರ ಡಿಸ್ಟ್ರಿಕ್ಟಿನ ಜನರಿಗೆ ಕುಡಿಯುವ ನೀರು ಇಲ್ಲದಾಗಿ ತೊಂದರೆಯಾಗಿದೆ. ಆದಕಾರಣ ನಮ್ಮ ಸರ್ಕಾರದವರು ಮಹಾರಾಷ್ಟ್ರ ಸರ್ಕಾರದೊಡನೆ ವ್ಯವಹರಿಸಿ ಕೊಯ್ನಾ ರಿಸರ್ವಾಯರ್‌ನಿಂದ ಕೃಷ್ಣಾ ನದಿಗೆ ನೀರು ಬಿಡುವುದಕ್ಕೆ ವ್ಯವಸ್ಥೆ ಮಾಡಬೇಕೆಂದು ವಿನಂತಿ.

### 3) ಭೂಕಂದಾಯ:

ಈಗ ಕೆಲವು ಮಾನ್ಯ ಸದಸ್ಯರು 10 ಎಕರೆಗಳಿಗಿಂತ ಕಡಿಮೆ ಇರತಕ್ಕ ಭೂಮಿಗೆ ಕಂದಾಯವನ್ನು ವಜಾ ಮಾಡಬೇಕೆಂದು ಹೇಳಿದರು. ಆದರೆ ಬಾಂಬೆ ಲ್ಯಾಂಡ್ ರೆವಿನ್ಯೂ ಕೋಡ್ ಪ್ರಕಾರ ಮತ್ತು ಮೈಸೂರಿನ ಲ್ಯಾಂಡ್ ರೆವಿನ್ಯೂ ಆ್ಯಕ್ಟ್ ಪ್ರಕಾರ ಭೂಮಿಯು ಸರ್ಕಾರದ್ದಾಗಿದ್ದರೆ, ಅದರ ಹಕ್ಕುದಾರಿಕೆಯನ್ನು ಭೂಮಾಲೀಕನಿಗೆ ಕೊಡತಕ್ಕದ್ದು. ಅಂಥಾ ಸಂದರ್ಭಗಳಲ್ಲಿ ಪ್ರತಿಯೊಬ್ಬ ಭೂಮಾಲೀಕನಿಂದ ನಾಮಿನಲ್ ಫೀಸನ್ನು ಕಂದಾಯ ರೂಪದಲ್ಲಿ ವಸೂಲು ಮಾಡುತ್ತಾರೆ. ಅದನ್ನು ಸಂಪೂರ್ಣ ರಿಯಾಯಿತಿ ಬಿಡುವುದಕ್ಕಾಗುವುದಿಲ್ಲ. ಇಷ್ಟು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ.

## ಭೂ ಸುಧಾರಣಾ ತಿದ್ದುಪಡಿ ಮಸೂದೆಯ ಮೇಲಿನ ಚರ್ಚೆ

**(15ನೇ ಏಪ್ರಿಲ್ 1972)**

### 1) ಭೂ ಮಾಲಿಕರಿಗೆ ನ್ಯಾಯ ಕೊಡಬೇಕು.

ಶ್ರೀ ಪಿ. ಎಂ. ಬಾಂಗಿ (ಜಮಖಂಡಿ) – ಮಾನ್ಯ ಅಧ್ಯಕ್ಷಿಣಿಯವರೇ, ಈ ಸಭೆಯ ಮುಂದೆ ಮಂಡಿಸಿರುವ ಭೂಸುಧಾರಣಾ ತಿದ್ದುಪಡಿ ಮಸೂದೆಯನ್ನು ನಾನು ಅನುಮೋದಿಸುವುದಕ್ಕೆ ಎದ್ದು ನಿಂತಿದ್ದೇನೆ. ಈ ಮಸೂದೆಯಲ್ಲಿ ಹೇಳಿರುವಂತೆ ಇದುವರೆಗೂ ಯಾವ ತಹಶಿಲ್ದಾರ ಅಥವಾ ಚೀಫ್ ಮಾರ್ಕೆಟಿಂಗ್ ಆಫೀಸರ್ ಎವರೇಜ್ ಯೀಲ್ಡ್ ಫಿಕ್ಸ್ ಮಾಡಿಲ್ಲ ಮತ್ತು ಸರಕುಗಳ ಬೆಲೆ ಜಾಹೀರ ಮಾಡಿಲ್ಲಾ ಅಂಥ ತಾಲೂಕಿನಲ್ಲಿಯ ಗೇಣಿದಾರರಿಗೆ ಸಂಬಂಧಪಟ್ಟ ಹಾಗೆ ಕೆಲವು ಕೋರ್ಟಿನ ಆರ್ಡರ್ಸ್‌ಗಳೇನೋ ಆಗಿವೆ. ಆದರೆ ಯಾವ ತಾಲೂಕಿನಲ್ಲಿಯೂ ಗೇಣಿದಾರರನ್ನು ಜಮೀನು ಬಿಡಿಸಿ ಹೊರಗೆ ಹಾಕಿಲ್ಲ. ಈ ಮಸೂದೆಯ ಮೂಲಕ ಗೇಣಿದಾರರಿಗೆ ರಕ್ಷಣೆ ಕೊಡುವಂಥ ಅವಕಾಶವೇನೋ ಇದೆ. ಆದರೆ ಗೇಣಿ ಕೊಡುವ ವಿಷಯದಲ್ಲಿ ರೈತ ಡಿಫಾಲ್ಟ್ ಆಗಿ ತಪ್ಪು ಮಾಡಿದರೆ, ಅವನಿಗೆ ಸ್ವಲ್ಪ ರಿಯಾಯ್ತಿ ಕೊಡುವ ಅವಕಾಶ ಈ ಮಸೂದೆಯಲ್ಲಿ ಇಲ್ಲ. ಹಿಂದಿನ ಮಸೂದೆಯಲ್ಲಿ ಅಂಥ ಅವಕಾಶ ಇತ್ತು. ಈ

ಮಸೂದೆಯಲ್ಲಿ ಅದು ದೊರೆಯದೇ ಇರುವುದು ಒಂದು ಅಸಮಾಧಾನಕರ ಸಂಗತಿ. ಆದ್ದರಿಂದ ಗೇಣಿ ಕೊಡುವ ವಿಷಯದಲ್ಲಿ ರೈತ ಡಿಫಾಲ್ಟ್ ಆಗಿ ತಪ್ಪು ಮಾಡಿದರೆ ಅವನಿಗೆ ರಿಯಾಯ್ತಿ ಕೊಡುವ ಅವಕಾಶವನ್ನು ಈ ಮಸೂದೆಯಲ್ಲಿ ಸೇರಿಸಿದ್ದರೆ ಚೆನ್ನಾಗಿತ್ತು. ಈ ಮಸೂದೆಯ ಪ್ರಕಾರ ಕೆಲವು ಗೇಣಿದಾರರಿಗೆ ಪರಿಹಾರ ದೊರೆತಿದೆ. ಅದಕ್ಕಾಗಿ ನಾವು ಸಂತೋಷಪಡಬೇಕಾಗಿದೆ. ಈ ಮಸೂದೆಯಲ್ಲಿ ಇರುವ ಕೆಲವು ವಿಷಯಗಳನ್ನು ಮಾನ್ಯ ಕಂದಾಯ ಮಂತ್ರಿಗಳ ಗಮನಕ್ಕೆ ತರಬಯಸುತ್ತೇನೆ. ಸೆಕ್ಷನ್ 22 (ಎ) ನಲ್ಲಿ "Orders or decrees for eviction of a tenant, made in proceedings instituted before the commencement of the Mysore Land Reforms (Amendment and Miscellaneous Provisions) Act, 1972, which are precluded by the second provisio to sub-section (1) of Section 22 of the Principal Act shall not have any effect and shall abate" ಎಂದು ಹೇಳಿದ್ದಾರೆ.

ಅಂದರೆ ಇಂಥಾ ಹುಕುಂಗಳಿಂದ ಯಾವ ಭೂಮಾಲೀಕರಿಗೆ ಯಾವುದೇ ಪರಿಹಾರ ದೊರಕುವುದಿಲ್ಲವೋ ಅಂಥ ಭೂಮಾಲೀಕರು ಪುನಃ ಮುನ್ಸೀಫ್ ಕೋರ್ಟಿನಲ್ಲಿ ಪರಿಹಾರಕ್ಕಾಗಿ ಅರ್ಜಿ ಹಾಕಬೇಕೆಂಬ ಬಗ್ಗೆ ಈ ಕಲಂದಲ್ಲಿ ಉಲ್ಲೇಖ ಇಲ್ಲ. ಕ್ರಾಪ್ ಪ್ರೊಡ್ಯೂಸ್ ಫಿಕ್ಸೇಷನ್ ಆದ ಮೇಲೆ ಭೂಮಾಲೀಕರಿಗೆ ಅರ್ಜಿ ಕೊಡುವುದಕ್ಕೆ ಸಮಯ ಇಡಬೇಕು. ಇಲ್ಲದಿದ್ದರೆ ಭೂಮಾಲೀಕನಿಗೆ ಜಸ್ಟಿಸ್ ಇಲ್ಲದಂತಾಗುತ್ತದೆ.

## 2) ಭೂ ಸುಧಾರಣಾ ಕಾಯ್ದೆಯ ಸ್ಪಷ್ಟತೆ:

ಎರಡನೆಯದಾಗಿ, ಭೂಸುಧಾರಣೆ ಕಾಯ್ದೆಯಲ್ಲಿ ಟೆನೆನ್ಸಿಯಿಯರ್ ಡಿಫೈನ್ ಮಾಡಿಲ್ಲ. ಅದಕ್ಕಾಗಿ ಮೈಸೂರು ಲ್ಯಾಂಡ್ ರೆವಿನ್ಯೂ ಆ್ಯಕ್ಟ್ ನೋಡಬೇಕಾಗುತ್ತದೆ. ಮೈಸೂರು ಲ್ಯಾಂಡ್ ರೆವಿನ್ಯೂ ಆ್ಯಕ್ಟ್ ಕಲಂ 25ರಲ್ಲಿ ರೆವಿನ್ಯೂ ಯಿಯರ್ (revenue year) ಜುಲೈ ಒಂದನೇ ತಾರೀಖಿನಿಂದ ಅಂತಾ ಉಲ್ಲೇಖ ಇದೆ. ಆದರೆ ಟೆನೆನ್ಸಿ ಯಿಯರ್ ಬಗ್ಗೆ ಈ ಕಾಯ್ದೆಯಲ್ಲಿ ಯಾವುದೇ ತರಹದ ಉಲ್ಲೇಖ ಇಲ್ಲ.

ಈಗ ಈ ಕಾಯ್ದೆಯಲ್ಲಿ ಎರ್ಡು ವರ್ಷಗಳ ಗೇಣಿ ಪಾವತಿ ಮಾಡಿದರೆ ಒಕ್ಕಲೆಬ್ಬಿಸಕೂಡದೆಂದು ಸೂಚಿಸಿದ್ದಾರೆ. ಅದು ಯಾವ ಎರ್ಡು ವರ್ಷದ ಗೇಣಿ ಎಂಬುದನ್ನು ಸ್ಪಷ್ಟ ಮಾಡಬೇಕು ಮತ್ತು ಟೆನೆನ್ಸಿ ಯಿಯರ್ ಯಾವ ತಿಂಗಳಿನಿಂದ ಪ್ರಾರಂಭವಾಗುತ್ತದೆ ಎಂಬುದನ್ನೂ ತಿಳಿಸಬೇಕು. ಈ ಎರ್ಡೂ ವಿಷಯಗಳನ್ನು ಮಾನ್ಯ ಕಂದಾಯ ಮಂತ್ರಿಗಳು ಕ್ಲಿಯರ್ ಮಾಡಬೇಕೆಂದು ವಿನಂತಿ ಮಾಡಿಕೊಳ್ಳುತ್ತೇನೆ. ಏತಕ್ಕೆಂದರೆ ಈ ಬಿಲ್ಲಿನ 4ನೇ ಕ್ಲಾಸ್‌ನಲ್ಲಿ ಈ ರೀತಿ ಇದೆ.

"Notwithstanding anything contained in the Principal Act or in any decree or order of Tribunal, no order for restoration of possession of any land to the landlord on the ground of default in paying rent by the tenant shall be executed if the tenant pays to the landlord an amount equal to the rent due for a period of two years".

ಎಂದು ಹೇಳಿದ್ದಾರೆ. ಆದರೆ ಇದರಲ್ಲಿ ಯಾವ ಎರಡು ವರ್ಷದ ಗೇಣಿಯನ್ನು ಪಾವತಿ ಮಾಡಿರಬೇಕು ಎಂಬುದನ್ನು ಸ್ಪಷ್ಟವಾಗಿ ತಿಳಿಸಿಲ್ಲ. ಅದನ್ನು ಸ್ಪಷ್ಟ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ.

**Sri D.B. Kalmankar**- "Tenant" is defined under sub-section 34 of section 2 of the Act. The Hon. Member may please refer to this section.

**Sri P. M. Bangi** - I am talking about the 'tenancy year'. There is no definition regarding "Tenancy Year" in the Mysore Land Reforms Act or Land Revenue Act or Transfer of Property Act. So I submit that the Hon. Revenue Minister should see that a clause is inserted in the

Bill regarding the Tenancy Year and he should also see that the point regarding the two year period during which the arrears are to be paid, is clarified. Otherwise, the law will be interpreted by the Courts in a different way and there will be scope for continuous litigation regarding the words used in Section 4 and also regarding the Tenancy Year. So I submit that these two amendments be made and the Bill be passed with these amendments. I support the Bill although it confers limited rights on the tenant. The Hon. Minister may also look into the matter of issuing an Ordinance for the temporary protection from eviction of tenants for the year 1972.

## ಹತ್ತಿ ಬೆಳೆಯ ಮೇಲಿನ ಚರ್ಚೆ

**(18ನೇ ಏಪ್ರಿಲ್ 1972)**

ಶ್ರೀ ಪಿ. ಎಂ. ಬಾಂಗಿ (ಜಮಖಂಡಿ) – ಮಾನ್ಯ ಅಧ್ಯಕ್ಷರೇ, ವಿಜಾಪುರ ಜಿಲ್ಲೆಯಲ್ಲಿ ಮುಖ್ಯ ಮನಿಕ್ರಾಪ್ ಅಂದರೆ ಹತ್ತಿ. ಹತ್ತಿ ಬೆಳೆಯುವ ರೈತರಿಗೆ ಈ ದಿನಗಳಲ್ಲಿ ಸಾಕಷ್ಟು ಹಣದ ತೊಂದರೆಯಾಗಿದೆ. ಪ್ರತಿಯೊಬ್ಬ ರೈತನೂ ಸೊಸೈಟಿಗಳಿಂದ ಸಾಲ ತೆಗೆದುಕೊಂಡಿದ್ದಾನೆ. ಈ ತಿಂಗಳಿನಲ್ಲಿ ಹತ್ತಿ ವ್ಯಾಪಾರ ಮಾಡಿ ಹಣವನ್ನು ವಾಪಸ ಕೊಡದಿದ್ದರೆ. ಪ್ರತಿಯೊಂದು ಸೊಸೈಟಿಗೂ ಅವರು ಡಿಫಾಲ್ಟರ್ ಆಗುತ್ತಾರೆ. ಪ್ರತಿಯೊಂದು ಸೊಸೈಟಿಯೂ ಡಿಸ್ಟ್ರಿಕ್ಟ್ ಕೊ–ಅಪರೇಟಿವ್ ಬ್ಯಾಂಕಿಗೆ ಡಿಫಾಲ್ಟ್ ಆಗಿ ಕೊನೆಗೆ ಅಪೆಕ್ಸ್ ಬ್ಯಾಂಕ್ ಡಿಫಾಲ್ಟ್ ಆಗಿ ಇಡೀ ರಾಜ್ಯದ ಸಹಕಾರ ಕ್ಷೇತ್ರದಲ್ಲಿ ಒಂದು ಆರ್ಥಿಕ ಸಮಸ್ಯೆ ಉದ್ಭವವಾಗುತ್ತದೆ. ಸರ್ಕಾರ ಈ ವಿಷಯದ ಕಡೆಗೆ ಹೆಚ್ಚು ಗಮನಕೊಟ್ಟು ಇಂಡಿಯಾ ಕಾಟನ್ ಕಾರ್ಪೊರೇಷನ್‌ನಿಂದ ಅಥವಾ ಬೇರೆ ರೀತಿಯಲ್ಲಿ ಹಣ ಪಡೆದು ರೈತರ ಕಡೆಯಿಂದ ಹತ್ತಿ ಕೊಳ್ಳುವ ವ್ಯವಸ್ಥೆ ಇದೇ ತಿಂಗಳಲ್ಲಿ ಆಗಬೇಕು.

ಇಲ್ಲದಿದ್ದರೆ ಈ ಸಮಸ್ಯೆ ಬಹಳ ಜಟಿಲವಾಗುತ್ತದೆ. ಡಿ.ಸಿ.ಸಿ. ಬ್ಯಾಂಕುಗಳು, ಇಂಡಸ್ಟ್ರೀಸ್ ಬ್ಯಾಂಕಿನವರು, ಅಪೆಕ್ಸ್ ಬ್ಯಾಂಕಿನವರು ಸಹ ಡಿಫಾಲ್ಟ್ ಆಗಿ ಲಿಕ್ವಿಡೇಷನ್‌ಗೆ ಹೋಗುವ ಸಂಭವ ಇದೆ. ಆದ್ದರಿಂದ ಇದೇ ತಿಂಗಳಲ್ಲಿ ಕೋ-ಆಪರೇಟಿವ್ ಮೂಲಕವೋ ಅಥವಾ ಬೇರೆ ಯಾವ ರೀತಿಯಲ್ಲಾಗಲಿ ಯೋಗ್ಯ ಬೆಲೆಗೆ ಹತ್ತಿಯನ್ನು ಕೊಳ್ಳುವ ವ್ಯವಸ್ಥೆ ಮಾಡಬೇಕು, ರೈತರಿಗೆ ಅದಕ್ಕಾಗಿ ಸಾಕಷ್ಟು ಹಣ ಸಹಾಯ ಕೊಡುವ ಯೋಜನೆ ಮಾಡಬೇಕೆಂದು ಹೇಳಿ ಮಾತು ಮುಗಿಸುತ್ತೇನೆ.

## ಟಿಪ್ಪಣಿ ರೂಪದ ಬಿಡಿ ಪ್ರಶ್ನೆಗಳು.

## 18th June 1972

**Sri P. M. Bangi (Jamkhandi)-** Will the Minister for Revenue be pleased to State:-

a) the number of declarations of holdings filed by landlords and landowners under Section 66 of the Mysore Land Reforms Act, 1961 in the State so far;

b) the number of declarations filed in Bijapur District;

c) the number of such declarations which were decided by the Tahasildars of the talukas in Bijapur District;

d) whether any surplus lands are available in talukas of Bijapur District;

e) if so, the extent of such surplus lands available;

f) whether the Government has taken possession of such surplus lands and distributed them among the displaced tenants and others in accordance with the provisions of Section 77 of Mysore Land Reforms Act, 1961;

g) if not, the reason for the delay in distribution;

h) whether the Tahasildars in Bijapur District have conducted enquiries to find out whether any landowners and landlords have failed to furnish declarations under Section 66 of the Mysore Land Reforms Act, 1961;

i) if so, the result of the enquiries made?

Sri Hutchamasthy Gowda (Minister for Revenue)-

a) 1,553
b) 462
c) 337
d) Yes
e) 20,055 Acres 18 Gunthas
f) No

g) Under Section 66 as contained in the original Act No. 10 of 1962, the declarations of surplus holdings were required to be furnished to the Tribunal Court on or before 21st August 1969 and under Section 73, the Court was required to notify the

surplus lands to be vested in the State Government. Whereas by the Mysore Land Reforms (Amendment) Act, 1970 this power of the court was transferred to the Tahasildar, the powers to issue vesting notification under Section 73 continued to vest with the Court. It is proposed to amend Section 73 transferring the power from the Court to the Tahasildar and the draft amendment is being finalised.

h) Yes.

i) Tahasildars issued notices to suspected surplus holders, 45 of whom have filed declarations involving 8,514 acres and 24 gunthas.

ಶ್ರೀ ಪಿ. ಎಂ. ಬಾಂಗಿ– ಸ್ವಾಮಿ ಇಡೀ ರಾಜ್ಯದಲ್ಲಿ ಭೂ ಏರಿಯಾ ಎಷ್ಟು ಡಿಕ್ಲೇರ್ ಆಗಿದೆ ಎಂಬುದನ್ನು ಹೇಳುತ್ತೀರಾ?

ಶ್ರೀ ಎನ್ ಹುಚ್ಚಮಾಸ್ತಿಗೌಡ– ಇಡೀ ರಾಜ್ಯದ್ದು ಅಷ್ಟೂ ಪೂರ್ಣವಾದ ಸಂಖ್ಯೆ ನನ್ನ ಹತ್ತಿರ ಇಲ್ಲ.

ಶ್ರೀ ಪಿ. ಎಂ. ಬಾಂಗಿ– ವಿಜಾಪೂರ ಜಿಲ್ಲೆಯಲ್ಲಿ ಪ್ರತಿಯೊಂದು ತಾಲೂಕಿನಲ್ಲಿ ಎಷ್ಟು ಭೂಮಿ ಇದೆ ಎಂಬುದನ್ನು ಹೇಳುತ್ತೀರಾ?

ಶ್ರೀ ಎನ್. ಹುಚ್ಚಮಾಸ್ತಿಗೌಡ– ಅದು ತಾಲೂಕುವಾರು ಅಂಕಿ ಅಂಶಗಳಿಲ್ಲ. ಒಟ್ಟು ಜಿಲ್ಲಾ ಅಂಕಿ ಅಂಶಗಳನ್ನು ನಾನು ಈಗಾಗಲೇ ತಮಗೆ ಕೊಟ್ಟಿದ್ದೇನೆ.

ಶ್ರೀ ಪಿ.ಎಂ. ಬಾಂಗಿ– ಪ್ರತಿಯೊಂದು ತಾಲೂಕಿನದೂ ಹೇಳುವುದಕ್ಕಾಗುತ್ತದೆಯೇ?

ಶ್ರೀ ಎಸ್. ಹುಚ್ಚಮಾಸ್ತಿಗೌಡ– ಆ ಬಗ್ಗೆ ಪ್ರತ್ಯೇಕವಾದ ಪ್ರಶ್ನೆಯನ್ನು ಕೇಳಿದರೆ ಅದನ್ನು ಕಲೆಕ್ಟ್ ಮಾಡಿಕೊಡಬಹುದು.

ಶ್ರೀ ಪಿ. ಎಂ. ಬಾಂಗಿ– ತಾವು 73ನೇ ಕಲಮಿನ ಮೇರೆಗೆ ನ್ಯಾಯಮಂಡಳಿಗಳು, ಹೆಚ್ಚುವರಿ ಜಮೀನುಗಳು ಸರ್ಕಾರಕ್ಕೆ ಸೇರಿವೆ ಎಂಬುದಾಗಿ ಅಧಿಸೂಚನೆ ಹೊರಡಿಸಬಹುದು ಎಂದು ಹೇಳಿದ್ದೀರಿ. ಈ ಕೋರ್ಟಿನಿಂದ ಸರ್ಪ್ಲಸ್ ಜಮೀನು ಬೆಲೆ ನಿಗದಿ ಮಾಡುವುದಕ್ಕೆ ಏನು ಅಡಚಣೆ ಆಯಿತು?

ಶ್ರೀ ಎಸ್. ಹುಚ್ಚಮಾಸ್ತಿಗೌಡ– ಯಾವ ಕಾರಣದಿಂದಲೋ ಈ ನ್ಯಾಯಾಲಯದ ಅಧಿಕಾರವನ್ನು ತಹಸೀಲ್ದಾರರಿಗೆ ಕೊಟ್ಟಿದ್ದಾರೆ. ಆ ಕಾರಣ ಏನೆಂದು ಈಗ ಹೇಳುವುದಕ್ಕಾಗುವುದಿಲ್ಲ. ಆದರೆ ತಹಸೀಲ್ದಾರರಿಗೆ ಅಧಿಕಾರ ಕೊಟ್ಟಿದೆ. ಉತ್ತರದಲ್ಲಿ ಹೇಳಿರುವ ಹಾಗೆ ನೋಟಿಫೈ ಮಾಡತಕ್ಕ ಅಧಿಕಾರವು ಕೋರ್ಟಿನಲ್ಲಿ ಉಳಿದಿದೆ. ಅದನ್ನೂ ತಹಸೀಲ್ದಾರರಿಗೆ ಕೊಡುವುದಕ್ಕೆ ತಕ್ಕ ತಿದ್ದುಪಡಿ ಮಾಡುವುದಕ್ಕೆ ಏರ್ಪಾಡು ಮಾಡುತ್ತೇವೆಂದು ಉತ್ತರದಲ್ಲಿ ತಿಳಿಸಿದ್ದೇವೆ.

ಶ್ರೀ ಕಾಗೋಡು ತಿಮ್ಮಪ್ಪ– ಈಗ ಹೆಚ್ಚಿದ್ದಂತಹ ಜಮೀನನ್ನು ತಾವು ತೋರಿಸಿದ್ದೀರಿ. ಆ ಜಮೀನನ್ನು ವಿತರಣೆ ಮಾಡುವ ದೃಷ್ಟಿಯಿಂದ ಯಾವ ವ್ಯವಸ್ಥೆಯನ್ನು ಮಾಡಿದ್ದೀರಿ?

ಶ್ರೀ ಎಸ್. ಹುಚ್ಚಮಾಸ್ತಿಗೌಡ– ಕಾನೂನು ಪ್ರಕಾರ ವಿತರಣೆ ಮಾಡತಕ್ಕ ವಿಧಾನವನ್ನು ಲ್ಯಾಂಡ್ ರಿಫಾರ್ಮ್ಸ್ ಮಸೂದೆಯ 77ನೆಯ ವಿಧಿಯ ಪ್ರಕಾರ ಯಾರ್ಯಾರಿಗೆ ಕೊಡಬೇಕೆಂದು ಸ್ಪಷ್ಟವಾಗಿ ಇದೆ.

ಶ್ರೀ ಪಿ. ಎಂ. ಬಾಂಗಿ– 79ನೆಯ ಕಲಮಿನ ಪ್ರಕಾರ ಸರ್ಪ್ಲಸ್ ಭೂಮಿಯನ್ನು ತಹಸೀಲ್ದಾರರು ತಮ್ಮ ವಶದಲ್ಲಿ ತೆಗೆದುಕೊಂಡು, ನಂತರ ಡಿಸ್ಟ್ರಿಬ್ಯೂಟ್ ಮಾಡುವ ವಿಧಾನ ಇದೆ. ಆದರೆ ಅದನ್ನು ತಹಸೀಲ್ದಾರರು ಇದುವರೆಗೂ ಏಕೆ ತೆಗೆದುಕೊಂಡು ಮಾಡಿಲ್ಲ ಮತ್ತು ಅದಕ್ಕೆ ಕಾರಣವೇನು?

ಶ್ರೀ ಎನ್. **ಹುಚ್ಚಮಾಸ್ತಿಗೌಡ**– ತಾವು ಕೇಳಿರತಕ್ಕ ಪ್ರಶ್ನೆಯ ಪ್ರಕಾರ ಅದಕ್ಕೆ ಉತ್ತರವನ್ನು ಕೊಟ್ಟಿದ್ದೇನೆ. ಅದಕ್ಕೆ ಮುಂಚೆ ತಹಸೀಲ್ದಾರರು ವೆಸ್ಟ್ ಮಾಡಿಕೊಂಡಿದ್ದಾರೆಂದು ಕೂಡ ಹೇಳಿಲ್ಲ. ಅಲ್ಲಿ ಯಾರ್‍ಯಾರ ಹತ್ತಿರ ಎಷ್ಟೆಷ್ಟು ಇದೆ ಎಂದು ಡಿಕ್ಲೇರ್ ಮಾಡಿಕೊಂಡಿದ್ದಾರೆ ಅಷ್ಟೆ. ಇದಾದ ಮೇಲೆ ಸರ್ಪ್ಲಸ್ ಎಷ್ಟು ಇದೆ ಎಂದು ತಿಳಿದುಕೊಂಡು, ಅದರ ಮೇಲೆ ಇಷ್ಟು ವೆಸ್ಟ್ ಆಗುತ್ತದೆ ಎಂಬ ತೀರ್ಮಾನವಾಗುತ್ತದೆ. ಆಮೇಲೆ ಅದನ್ನು ಹಂಚತಕ್ಕ ವಿಧಾನ ಬರುತ್ತದೆ. ಆದ್ದರಿಂದ ಇದರಲ್ಲಿ 3–4 ಹಂತಗಳು ಇವೆ. ಈಗ ಮೊದಲನೆ ಹಂತದಲ್ಲಿ ಇರುವುದರಿಂದ ಕಡೆಯ ಹಂತವನ್ನು ಇನ್ನೂ ತಲುಪಿಲ್ಲ. ಆದ್ದರಿಂದ ಅದನ್ನು ಇನ್ನೂ ಪರಿಶೀಲನೆ ಮಾಡಿಲ್ಲ.

## ಅಂದಾಜು ಪತ್ರಿಕೆಯ ಮೇಲಿನ ಚರ್ಚೆ

### 24ನೇ ಜೂನ್ 1972

ಶ್ರೀ ಪಿ. ಎಂ. **ಬಾಂಗಿ (ಜಮಖಂಡಿ)**– ಮಾನ್ಯ ಅಧ್ಯಕ್ಷಿಣಿಯವರೇ, ಈ ಅಧಿವೇಶನದಲ್ಲಿ ಮಾನ್ಯ ಅರ್ಥ ಮಂತ್ರಿಗಳು ಮಂಡಿಸಿದ ಅಂದಾಜು ಪತ್ರಿಕೆಯನ್ನು ಸ್ವಾಗತಿಸಿ, ನಾನು ಅದಕ್ಕೆ ಬೆಂಬಲ ಕೊಡುತ್ತೇನೆ. ಆದರೆ ಇದೇ ಸಮಯದಲ್ಲಿ ಕೆಲವು ವಿಷಯಗಳ ಬಗ್ಗೆ ನಾನು ನನ್ನ ಸೂಚನೆಗಳನ್ನು ಅರ್ಥ ಮಂತ್ರಿಗಳಿಗೆ ತಮ್ಮ ಮುಖಾಂತರ ಅರ್ಪಿಸುತ್ತೇನೆ.

**1) ಶಿಕ್ಷಣದ ಪಾವಿತ್ರ್ಯತೆ ಕಾಪಾಡಿ:**

ಮೊದಲನೆಯದಾಗಿ ವಿದ್ಯಾ ಖಾತೆಯಲ್ಲಿ ಈ ವರ್ಷ 222 ಜೂನಿಯರ್ ಕಾಲೇಜುಗಳಿಗೆ ಸರ್ಕಾರದವರು ಮಂಜೂರಾತಿ ಇತ್ತಿದ್ದಾರೆ. ಆದರೆ ಈ ಕಾಲೇಜುಗಳಿಗೆ ಯಾವುದೇ ಗ್ರ್ಯಾಂಟ್ ಕೊಡುವ ವ್ಯವಸ್ಥೆ ಬಜೆಟ್ಟಿನಲ್ಲಿಲ್ಲ. 222 ಜೂನಿಯರ್ ಕಾಲೇಜುಗಳಿಗೆ ಮಂಜೂರಾತಿಯನ್ನು ಕೊಟ್ಟಾಗ್ಯೂ ಕೂಡ ಗ್ರ್ಯಾಂಟ್ ಇಲ್ಲದೆ ಹೋದರೆ ಈ ಜೂನಿಯರ್ ಕಾಲೇಜುಗಳನ್ನು ನಡೆಸುವುದು ಕಷ್ಟವಾಗುತ್ತದೆ. ಮೇಲಾಗಿ ಈ 222 ಜೂನಿಯರ್ ಕಾಲೇಜುಗಳು ಅಪ್‌ಗ್ರೇಡೆಡ್

ಮತ್ತು ಕನ್‌ವರ್ಟೆಡ್ ಕಾಲೇಜುಗಳು ಇದ್ದ ಮೂಲಕ ಈ ಕಾಲೇಜುಗಳಲ್ಲಿ ಮೊದಲು 11ನೇ ಸ್ಟ್ಯಾಂಡರ್ಡ್ ನಡೆಸಲ್ಪಡುತ್ತಿತ್ತು. 11ನೇ ಸ್ಟ್ಯಾಂಡರ್ಡಿಗೆ ಸರ್ಕಾರದಿಂದ ಗ್ರ್ಯಾಂಟ್ ಬರುತ್ತಿತ್ತು. ಜೂನಿಯರ್ ಕಾಲೇಜುಗಳಲ್ಲಿ ಕೇವಲ 11ನೇ ಇಯತ್ತೆ ಪ್ರಾರಂಭ ಮಾಡಿದಂತಾಗುತ್ತದೆ. ಆದ್ದರಿಂದ ಈ ಜೂನಿಯರ್ ಕಾಲೇಜುಗಳಿಗೆ ಗ್ರ್ಯಾಂಟ್ ಕೊಡುವುದು ಅವಶ್ಯವಾಗಿದೆ. ಈ ದೃಷ್ಟಿಯಿಂದ ಮಾನ್ಯ ವಿದ್ಯಾ ಮಂತ್ರಿಗಳು ಮತ್ತು ಅರ್ಥ ಮಂತ್ರಿಗಳು ವಿಚಾರ ಮಾಡಿ ಜೂನಿಯರ್ ಕಾಲೇಜುಗಳಿಗೆ ಗ್ರ್ಯಾಂಟ್ ಒದಗಿಸಿಕೊಡಬೇಕೆಂದು ಪ್ರಾರ್ಥಿಸುತ್ತೇನೆ.

ವಿದ್ಯಾ ಇಲಾಖೆಯ ಬಗ್ಗೆ ಇನ್ನೊಂದು ವಿಷಯವೇನೆಂದರೆ, ನಮ್ಮ ತಾಲೂಕಿನ ಮಟ್ಟಿಗೆ ವಿಚಾರ ಮಾಡಬೇಕಾಗಿದೆ. ಹೈಸ್ಕೂಲು ಮುಂತಾದ ವಿದ್ಯಾ ಮಂದಿರಗಳ ಹತ್ತಿರ ಪ್ರಾಸ್ಟಿಟ್ಯೂಷನ್ ವೇಶ್ಯಾ ವ್ಯವಸಾಯ ನಡೆಯುತ್ತಿದೆ. ಆ ಬಗ್ಗೆ ವಿಜಾಪುರದ ಡೆಪ್ಯೂಟಿ ಕಮಿಶನರ್‌ಗೆ ಮನವಿ ಮಾಡಿಕೊಂಡೆವು. ವೇಶ್ಯಾ ನಿರೋಧ ಕಾಯ್ದೆ ಮೂಲಕ Illicit traffic in women and girl ನೋಟಿಫಿಕೇಷನ್ ತೆಗೆಯುವ ಅಧಿಕಾರ ಡೆಪ್ಯೂಟಿ ಕಮಿಶನರ್‌ಗೆ ಇದ್ದಾಗ್ಯೂ ಕೂಡ ಅವರು ಈ ವಿಷಯದ ಬಗ್ಗೆ ಲಕ್ಷ್ಯ ಪೂರೈಸಿಲ್ಲ. ಶಾಲೆಗಳಿಗೆ ಹೋಗುವ ವಿದ್ಯಾರ್ಥಿಗಳು, ವಿದ್ಯಾರ್ಥಿನಿಯರು ಶಾಲೆಗಳಿಗೆ ಹೋಗಿ ಮುಟ್ಟುವುದು ಕಷ್ಟವಾಗಿದೆ. ಆ ದೃಷ್ಟಿಯಿಂದ ಈ ಕಾಯ್ದೆ ಮೇರೆಗೆ ವಿಜಾಪುರದ ಡೆಪ್ಯೂಟಿ ಕಮಿಶನರ್ ಒಂದು ನೋಟಿಫಿಕೇಷನ್ ತೆಗೆದು ಹೈಸ್ಕೂಲು ಸಮೀಪ ಯಾವ ರೀತಿಯಿಂದಲೂ ವೇಶ್ಯಾ ವ್ಯವಹಾರ ನಡೆಯದಂತೆ ಮಾಡಬೇಕು.

## 2) ಕೈಮಗ್ಗ ಉದ್ಯಮಕ್ಕಾಗಿ ಪ್ರತ್ಯೇಕ ನಿರ್ದೇಶನಾಲಯ:

ಎರಡನೆಯದಾಗಿ ಭರತ ಭೂಮಿಯಲ್ಲಿ ಮೊದಲಿನಿಂದಲೂ ನಡೆದು ಬಂದ ಎರಡು ಉದ್ಯಮಗಳಲ್ಲಿ ಒಂದನೆಯದು ಕೃಷಿ ಮತ್ತು ಎರಡನೆಯದು ಕೈಮಗ್ಗ ಕೈಗಾರಿಕೆ. ಇವೆರ್ಡು ವಿಷಯಗಳ ಪೈಕಿ ಕೃಷಿಗೆ ಸಂಬಂಧಪಟ್ಟ ಇಲಾಖೆ ಕೆಲಸ ಮಾಡುತ್ತಿದೆ. ಸರ್ಕಾರದ ಪರವಾಗಿ ಕೃಷಿ ವ್ಯವಸಾಯ ಇಲಾಖೆ ಸಾಕಷ್ಟು ಸಹಾಯ ಮಾಡುತ್ತದೆ. ಲ್ಯಾಂಡ್ ಡೆವಲಪ್‌ಮೆಂಟ್ ಮುಂತಾದ ಬ್ಯಾಂಕುಗಳನ್ನು ತೆಗೆದು ಸರ್ಕಾರದವರು ಕೃಷಿಗೆ ಸಹಾಯ ಮಾಡುತ್ತಿದ್ದಾರೆ.

ರೈತರಿಗೆ ಬೇಕಾಗುವ ಬೀಜ, ಗೊಬ್ಬರ ಇವೆಲ್ಲ ಒದಗಿಸುತ್ತಿದ್ದಾರೆ. ಆದರೆ ಕೈಮಗ್ಗ ನೇಕಾರರ ಬಗ್ಗೆ ಯಾವ ರೀತಿಯಿಂದಲೂ ಸರ್ಕಾರ ಸಹಾಯ ಮಾಡುತ್ತಿಲ್ಲ ಮತ್ತು ಅವರಿಗೆ ಬೇಕಾದ ಕಚ್ಚಾ ಮಾಲನ್ನು ಪೂರೈಸಲು ಯಾವುದೇ ಬ್ಯಾಂಕ್‌ನ್ನು ತೆಗೆದಿಲ್ಲ. ಅದೇ ಪ್ರಕಾರ, ಬಡ ನೇಕಾರರಿಗೆ, ಬಡ ನೇಕಾರ ಕೂಲಿಕಾರರಿಗೆ ಸಾಲ ಒದಗಿಸಲಿಕ್ಕೆ ಯಾವ ರೀತಿಯಿಂದಲೂ ಒಂದು ಸ್ವತಂತ್ರ ಬ್ಯಾಂಕ್ ಇಲ್ಲ ಅಥವಾ ಅಪೆಕ್ಸ್ ಬ್ಯಾಂಕ್ ಆಗಲೀ ಬೇರೆ ಬ್ಯಾಂಕ್ ಆಗಲೀ ನೇರವಾಗಿ ಸಾಲ ಕೊಡುವ ವ್ಯವಸ್ಥೆ ಇಲ್ಲ. ಅದೇ ಪ್ರಕಾರ, ಬಡ ನೇಕಾರರು ತಯಾರಿಸಿದ ಅರಿವೆ ಮತ್ತು ಸೀರೆಗಳನ್ನು ಮಾರಾಟ ಮಾಡಲು ಯಾವುದೇ ವ್ಯವಸ್ಥೆ ಇಲ್ಲ. ಬಡ ನೇಕಾರರ ಉದ್ಯೋಗಕ್ಕೆ ಸಹಾಯಕವಾಗುವಂತೆ ಮತ್ತು ಕೈಮಗ್ಗ ಕೈಗಾರಿಕೆಯನ್ನು ಉಳಿಸುವುದಕ್ಕೋಸ್ಕರ ಕೇಂದ್ರ ಸರ್ಕಾರದ ಟೆಕ್ಸ್‌ಟೈಲ್ ಕಮಿಷನರ್ ಅವರ ಆದೇಶದಂತೆ ಎಸೆನ್ಷಿಯಲ್ ಕಮಾಡಿಟೀಸ್ ಆ್ಯಕ್ಟ್ (Essential Commodities Act) ಪ್ರಕಾರ ಒಂದು ಸರ್ಕ್ಯುಲರ್‌ಅನ್ನು ಹಿಂದೂಸ್ತಾನದಲ್ಲಿರುವ ಯಾವತ್ತೂ ರಾಜ್ಯಗಳಿಗೆ ಕಳುಹಿಸಿದ್ದರೂ. ಮೈಸೂರು ರಾಜ್ಯದಲ್ಲಿ ಟೆಕ್ಸ್‌ಟೈಲ್ ಕಮಿಷನರ್ ಅವರ ಹುಕುಂ ಇವತ್ತಿನವರೆಗೂ ಕಾರ್ಯಾಚರಣೆಯಲ್ಲಿ ಬಂದಿಲ್ಲ. ಟೆಕ್ಸ್‌ಟೈಲ್ ಕಮಿಷನರ್ ಅವರ ಹುಕುಮನ್ನು ಕಡೆಗಣಿಸಿ, ಪವರ್-ಲೂಮ್ ಫ್ಯಾಕ್ಟರಿಯವರು ಈಗಲೂ ಸರಾಗವಾಗಿ ಹಗಲಿರುಳು ತಮ್ಮ ಯಂತ್ರಚಾಲಿತ ಮಗ್ಗಗಳನ್ನು ನಡೆಸಿ ಬಣ್ಣದ ಬಟ್ಟೆಗಳನ್ನು ತಯಾರು ಮಾಡುತ್ತಿದ್ದಾರೆ ಮತ್ತು ಕೈಮಗ್ಗ ಉದ್ಯಮ ಮತ್ತು ಕೈಮಗ್ಗ ನೇಕಾರರನ್ನು ಗೋಳಿಗೆ ತಳ್ಳಿದ್ದಾರೆ. ನಮ್ಮ ರಾಜ್ಯದಲ್ಲಿ ಸುಮಾರು ಒಂದು ಲಕ್ಷ ಐವತ್ತು ಸಾವಿರ ನೇಕಾರರು ನೇಯ್ಗೆ ಉದ್ಯೋಗ ಮಾಡಿ ತಮ್ಮ ನಿರ್ವಹಣೆ ಸಾಗಿಸುತ್ತಿದ್ದಾರೆ ಮತ್ತು ಈ ನೇಕಾರರ ಮೇಲೆ ಅವಲಂಬಿಸಿದಂಥ 7 ಲಕ್ಷ ಜನರಿದ್ದು, ಅವರ ಸ್ಥಿತಿಯೂ ಬಹಳ ಕರುಣಾಜನಕವಾಗಿದೆ. ಆ ಬಗ್ಗೆ ಸರ್ಕಾರದ ಕಡೆಗೆ ಎಷ್ಟೋ ಮನವಿ ಸಲ್ಲಿಸಿದ್ದರೂ ಎಳ್ಳಷ್ಟೂ ಉಪಯೋಗವಾಗಿಲ್ಲ. ಆದ್ದರಿಂದ, ನಾನು ಸರ್ಕಾರಕ್ಕೆ ವಿನಯಪೂರ್ವಕವಾಗಿ ಬೇಡಿಕೊಳ್ಳುವುದೇನೆಂದರೆ, ಕೈಮಗ್ಗಕ್ಕೋಸ್ಕರ, ನೇಯ್ಗೆ ಉದ್ಯಮವನ್ನು ಉದ್ಧರಿಸಲು ಮತ್ತು ನೇಕಾರರ ಕಷ್ಟವನ್ನು ಪರಿಹರಿಸಲು ಮೊದಲು ಒಂದು ಸ್ವತಂತ್ರವಾದ ವ್ಯವಸ್ಥೆಯನ್ನು ಮಾಡಿ ಅದಕ್ಕೋಸ್ಕರ ಒಂದು ಡೈರೆಕ್ಟೊರೇಟ್ ಮಾಡಬೇಕೆಂದು ನಾನು ಸೂಚಿಸುತ್ತೇನೆ.

## 3) ಕ್ರಮಬದ್ಧ ಮತದಾರರ ಪಟ್ಟಿ ಸಿದ್ಧಪಡಿಸಿ:

ಮೂರನೆಯ ವಿಷಯ : ಕಳೆದ ಅಧಿವೇಶನದಲ್ಲಿ ನಾವೆಲ್ಲರು ಮತ್ತು ವಿರೋಧ ಪಕ್ಷದವರೂ ಕೂಡಿ ಎಲೆಕ್ಟೋರಲ್ ರೋಲ್ ತಿದ್ದುಪಡಿ ಮಾಡಿ ಅದನ್ನು ಕಾಯ್ದೆಬದ್ಧವಾಗಿ ಪ್ರಸಿದ್ಧಿಸಬೇಕೆಂದು ಕೇಳಿಕೊಂಡರೂ ಇವತ್ತಿನ ವರೆಗೂ ಎಲೆಕ್ಟೋರಲ್ ರೋಲ್ ದುರಸ್ತ ಮಾಡಲು ಖರ್ಚಿಗೆ ಸರ್ಕಾರ ಸಾಕಷ್ಟು ದುಡ್ಡನ್ನು ಒದಗಿಸಿಲ್ಲ. ಪರಿಣಾಮವಾಗಿ ಮುನ್ಸಿಪಾಲ್ಟಿ ಚುನಾವಣೆಗಳು ಮತ್ತು ತಾಲೂಕು ಬೋರ್ಡ್ ಚುನಾವಣೆಗಳು ಈಗಿರುವ ಎಲೆಕ್ಟೋರಲ್ ರೋಲ್ ಮುಖಾಂತರ ನಡೆಯುತ್ತವೆ. ಇದು ಸರಿಯಲ್ಲ. ಅರ್ಥ ಸಚಿವರು ಎಲೆಕ್ಟೋರಲ್ ರೋಲ್ ಮುದ್ರಿಸುವುದಕ್ಕೋಸ್ಕರ ಸಾಕಷ್ಟು ಹಣವನ್ನು ಬಜೆಟ್ಟಿನಲ್ಲಿ ಹಿಡಿದಿಟ್ಟು ಕೂಡಲೇ ಮತದಾರ ಪಟ್ಟಿ ಮುದ್ರಿಸಲು ವ್ಯವಸ್ಥೆ ಮಾಡುವುದು ಅತ್ಯವಶ್ಯವಿದೆ. ಇದು ಮತದಾರರ ಹಕ್ಕಿನ ಪ್ರಶ್ನೆ ಇದ್ದ ಮೂಲಕ, ಅವರು ಇದು ಅತ್ಯಂತ ಮಹತ್ವದ ವಿಷಯವೆಂದು ತಿಳಿದು, ಆ ಬಗ್ಗೆ ಸಾಕಷ್ಟು ಹಣವನ್ನು ಬಜೆಟ್ಟಿನಲ್ಲಿ ಇಡಬೇಕೆಂದು ನಾನು ಅವರಿಗೆ ಬಿನ್ನವಿಸುತ್ತೇನೆ.

## 4) ಸಂಚಾರಿ ನ್ಯಾಯಾಲಯಗಳ ಅಗತ್ಯತೆ:

ನನ್ನ ನಾಲ್ಕನೇ ಪ್ರಾರ್ಥನೆ ಏನೆಂದರೆ, ನ್ಯಾಯ ಮತ್ತು ಕೋರ್ಟಿನ ಬಗ್ಗೆ. ನ್ಯಾಯಾಧೀಶರಿಗೆ ಸರ್ಕಾರಿ ಕ್ವಾರ್ಟರ್ಸ್‌ಗಳನ್ನು ನಿರ್ಮಾಣ ಮಾಡಬೇಕೆಂದು ಹೋದ ಸಾರಿ ಹೇಳಿದರೂ ಆ ಬಗ್ಗೆ ಮಂತ್ರಿಗಳು ವಿಚಾರ ಮಾಡಿಲ್ಲ. ಅದರಂತೆ ಆ್ಯಡಿಷನಲ್ ಸೆಷನ್ಸ್ ಜಡ್ಜ್ ಅವರುಗಳಿಗೆ ಮನೆ ವ್ಯವಸ್ಥೆ ಇಲ್ಲ. ಆ ಮೂಲಕ ಅವರಿಗೆ ತಮ್ಮ ಕೋರ್ಟಿನಲ್ಲಿನ ಪಕ್ಷಗಾರರ ಮನೆಯಲ್ಲಿ ಇದ್ದು, ನಿಷ್ಕಳಂಕ ತೀರ್ಪು ಕೊಡುವುದು ಕಷ್ಟವಾಗುತ್ತಿದೆ. ಅವರಿಗೆ ಮನೆಗಳನ್ನು ಮಾಡಿಕೊಡಬೇಕು ಎಂದು ಸೂಚಿಸಬಯಸುತ್ತೇನೆ.

ಐದನೆಯದು, ಸಂಚಾರಿ ಕೋರ್ಟು ಸ್ಥಾಪಿಸಿ, ಪ್ರತಿಯೊಂದು ಓಣಿಗೂ ಹೋಗಿ ಮ್ಯಾಜಿಸ್ಟ್ರೇಟರು ತೀರ್ಪನ್ನು ಕೊಡುವುದು, ದಂಡ ವಸೂಲು ಮಾಡುವ ಏರ್ಪಾಡು ಬೆಂಗಳೂರು ನಗರದಲ್ಲಿದೆ. ಅದೇ ಪ್ರಕಾರ ಎಲ್ಲಾ ತಾಲೂಕುಗಳಲ್ಲಿ,

ಎಲ್ಲಾ ಜಿಲ್ಹಾ ಸ್ಥಳಗಳಲ್ಲಿ ಸಂಚಾರಿ ಕೋರ್ಟುಗಳನ್ನು ಒದಗಿಸಿ ಅಲ್ಲಿಯ ಜನರಿಗೆ "ಜಸ್ಟೀಸ್ ಆ್ಯಟ್ ದಿ ಡೋರ್" ಕಲ್ಪಿಸಿಕೊಡಬೇಕೆಂದು ನಾನು ಸೂಚಿಸುತ್ತೇನೆ.

## 5) ಜಮಖಂಡಿ-ರಬಕವಿ ಪಟ್ಟಣಗಳಿಗೆ ಕುಡಿಯುವ ನೀರನ್ನು ಒದಗಿಸಿ:

ಆರನೆಯ ವಿಷಯ ಏನೆಂದರೆ, ಕುಡಿಯುವ ನೀರಿನ ವ್ಯವಸ್ಥೆ. ನಾನು ಕಳೆದ ಅಧಿವೇಶನದಲ್ಲಿ ಕೊಯ್ನಾ ನದಿಯಿಂದ ಕೃಷ್ಣಾ ನದಿಗೆ ನೀರು ಬಿಡಿಸಿ ಕೃಷ್ಣಾ ನದಿ ದಡದಲ್ಲಿನ ಜನರಿಗೆ ಕುಡಿಯುವ ನೀರಿನ ಸೌಕರ್ಯ ಮಾಡಬೇಕೆಂದು ಕೇಳಿಕೊಂಡೆನು. ನಮ್ಮ ಮುಖ್ಯಮಂತ್ರಿಗಳು ಮಹಾರಾಷ್ಟ್ರ ಮುಖ್ಯಮಂತ್ರಿಗಳ ಜೊತೆಗೆ ಚರ್ಚೆ ಮಾಡಿ ಕುಡಿಯುವ ನೀರನ್ನು ಕೊಯ್ನಾದಿಂದ ಕೃಷ್ಣಾನದಿಗೆ ಬಿಡುವ ವ್ಯವಸ್ಥೆ ಮಾಡಿದರು. ಅದಕ್ಕೆ ಬದಲಾಗಿ ಬೆಲೆ ಬಾಳುವ 6 ಲಕ್ಷ ಕಿಲೋವ್ಯಾಟ್ ವಿದ್ಯುಚ್ಛಕ್ತಿ ಮಹಾರಾಷ್ಟ್ರಕ್ಕೆ ಮುಟ್ಟಿತು. ಆದರೆ ನೀರು ಮಹಾರಾಷ್ಟ್ರದಿಂದ ಕನ್ನಡ ಸೀಮೆಯವರೆಗೆ ಮಾತ್ರ ಬಂತು. ಅಲ್ಲಿ ಮಹಾರಾಷ್ಟ್ರದ ರೈತರು ನೀರನ್ನು ಅವರ ಗದ್ದೆಗಳಿಗೆ ಹಗಲು ರಾತ್ರಿ ಉಪಯೋಗಮಾಡಿ ಕಬ್ಬನ್ನು ಬೆಳೆದರು. ನಮ್ಮ ವಿದ್ಯುಚ್ಛಕ್ತಿ ನಿಷ್ಕಾರಣವಾಗಿ ಅವರಿಗೆ ಹೋಯಿತು. ಆದರೆ ಕೃಷ್ಣಾ ದಡದ ಮೇಲೆ ಇರುವ ನಮ್ಮ ಜನರಿಗೆ ಇವತ್ತಿನವರೆಗೂ ಕುಡಿಯುವ ನೀರಿನ ವ್ಯವಸ್ಥೆ ಆಗಲಿಲ್ಲ. ಈ ನದಿ ದಡದಲ್ಲಿರುವ ಜಮಖಂಡಿ, ರಬಕವಿ ಮುಂತಾದ ಊರುಗಳ ಜನರಿಗೆ ಕಡಿಯುವ ನೀರಿನ ತೊಂದರೆಯಾಗುತ್ತಿದೆ. ಈಗ ಮಳೆಗಾಲವಾದರೂ ಇದುವರೆಗೆ ವಿಜಾಪುರದ ದಕ್ಷಿಣ ಭಾಗದಲ್ಲಿರುವ ಕೃಷ್ಣಾ ನದಿಯ ಎಡ ಮತ್ತು ಬಲದಂಡೆಯ ಮೇಲಿರುವ ಜನರಿಗೆ ಕುಡಿಯುವ ನೀರಿನ ವ್ಯವಸ್ಥೆ ಆಗಿಲ್ಲವೆಂದು ದುಃಖದಿಂದ ಹೇಳಬೇಕಾಗಿದೆ. ಇದನ್ನು ಸರ್ಕಾರ ವಿಚಾರಮಾಡಿ ಈ ನದಿ ದಡದ ಜನರಿಗೆ ಕುಡಿಯುವ ನೀರಿನ ವ್ಯವಸ್ಥೆ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ.

## 6) ಜಮಖಂಡಿಯ ಬಡಜನರ ಮನೆಗಳನ್ನು ಪೂರ್ತಿಗೊಳಿಸಿ:

ಇನ್ನು ಕೇಂದ್ರದವರು ಆದೇಶ ಮಾಡಿರುವಂತೆ, ಸರ್ಕಾರ 2 ಲಕ್ಷ ಹೌಸ್ ಸೈಟ್‌ಗಳನ್ನು ಬಡ ಜನರಿಗೆ ಒದಗಿಸಿಕೊಡಬೇಕಾಗಿದೆ. ನಗರದಲ್ಲಿ ಮನೆ ಇಲ್ಲದ ಜನರಿಗೆ ಹೌಸ್ ಸೈಟ್ ಕೊಡುವ ವಿಚಾರ ಏನೂ ಮಾಡಿಲ್ಲ.

ನನ್ನ ತಾಲೂಕಿನ ಮಟ್ಟಿಗೆ ಮಾತನಾಡುವುದಾದರೆ, ಜಮಖಂಡಿಯಲ್ಲಿ ಕೆಲವು ಮನೆಗಳು ಕಟ್ಟಿ ತಯಾರಾದರೂ ಅಭಿವೃದ್ಧಿ ಮಂತ್ರಿಗಳು ಇಂದಿನವರೆಗೂ ಮನೆಗಳಿಗೆ ಚಪ್ಪರಹಾಕಿಸಿ ಮುಗಿಸುವ ಏರ್ಪಾಡು ಮಾಡಿಲ್ಲ. ಸಾಕಾದಷ್ಟು ಮನವಿ ಮಾಡಿಕೊಂಡಾಗ್ಯೂ ಉಪಯೋಗವಾಗಿಲ್ಲ. ಈ ಮನೆಗಳು ಸಧ್ಯಕ್ಕೆ ಬಿದ್ದುಹೋಗುವ ಸ್ಥಿತಿಯಲ್ಲಿವೆ. ಈ ಬಗ್ಗೆ ಮಾನ್ಯ ಮಂತ್ರಿಗಳು ವಿಚಾರಮಾಡಿ ಮನೆಗಳಿಗೆ ತಕ್ಷಣ ಚಪ್ಪರ ಹಾಕಿಸುವ ವ್ಯವಸ್ಥೆ ಮಾಡಬೇಕೆಂದು ನಾನು ಪ್ರಾರ್ಥನೆ ಮಾಡುತ್ತೇನೆ.

## 7) ಜಮಖಂಡಿಯ ಬೋಗಸ್ ನೇಕಾರಿಕೆ ಸೊಸೈಟಿಗಳ ಮೇಲೆ ಕ್ರಮ ತೆಗೆದುಕೊಳ್ಳಿ:

ಏಳನೆಯದಾಗಿ ಸಹಕಾರ ಇಲಾಖೆ ವಿಚಾರ. ನಮ್ಮ ತಾಲೂಕಿನಲ್ಲಿ 20 ನೇಕಾರ ಸೊಸೈಟಿಗಳು ಇದ್ದು ಒಂದು ಸೊಸೈಟಿಯೂ ಇವತ್ತಿನ ವರೆಗೂ ಕೆಲಸ ಮಾಡುತ್ತಿಲ್ಲ. ಅವು ಬೋಗಸ್ ಸೊಸೈಟಿಗಳು. ಸರ್ಕಾರದಿಂದ ಬಂದ ರಿಬೇಟ್ ಹಣವನ್ನು ತಮ್ಮಲ್ಲಿ ಹಂಚಿಕೊಂಡು ತಿನ್ನುತ್ತಿದ್ದಾರೆ. ಈ ವಿಷಯವನ್ನು ಸರ್ಕಾರದ ಗಮನಕ್ಕೆ ತರಬಯಸುತ್ತೇನೆ. ಇನ್ನು ಭೂಸುಧಾರಣೆ ಕಾಯ್ದೆ ಏನು ಇದೆ, ಆ ಬಗ್ಗೆ ಕೂಡಲೇ ಕ್ರಮ ತೆಗೆದುಕೊಂಡು, "ಉಳುವವನೇ ಭೂಮಿಯ ಮಾಲೀಕ" ಆಗುವಂತೆ ಮಾಡಿ ಮೊದಲಿನ ಮಾಲೀಕನಿಗೆ ಕೊಡಬೇಕಾದ ಕೋಟ್ಯಾಂತರ ರೂಪಾಯಿ ಪರಿಹಾರಧನ ಕೊಡುವ ವ್ಯವಸ್ಥೆಯನ್ನು ಆರ್ಥಿಕ ಮಂತ್ರಿಗಳು ಮಾಡಬೇಕು ಎಂದು ವಿನಯಪೂರ್ವಕವಾಗಿ ಬೇಡಿಕೊಳ್ಳುತ್ತೇನೆ. ಇಲ್ಲಿ ರಾಜ್ಯದ ಸರ್ಕಾರಿ ಸಿಬ್ಬಂದಿ ನಿರ್ಮಲವಾಗಿ ಇರಬೇಕು ಎನ್ನುವ ಬಗ್ಗೆ ಯಾವ ಭಿನಾಭಿಪ್ರಾಯ ಇಲ್ಲ. ಆದರೆ ಇವತ್ತಿನ ದಿವಸ ಎಲ್ಲಾ ಖಾತೆಗಳಲ್ಲಿ ಸಾಕಷ್ಟು ಲಂಚಗುಳಿತನ ನಡೆಯುತ್ತಿರುವುದು ದುರ್ದೈವದ ಸಂಗತಿ. ಆದ್ದರಿಂದ ಎಲ್ಲಾ ಮಂತ್ರಿಗಳು ತಮ್ಮ ನೀತಿಯನ್ನು above suspicion ಎಂದರೆ ಸಂಶಯಾತೀತವಾಗಿ ಇಟ್ಟುಕೊಂಡು ಆಡಳಿತದಲ್ಲಿ ಇರತಕ್ಕ ಯಂತ್ರವನ್ನು ಸ್ವಚ್ಛಮಾಡಿ ನಿರ್ಮಲಗೊಳಿಸಬೇಕೆಂದು ಪ್ರಾರ್ಥಿಸಿ ನನ್ನ ಭಾಷಣವನ್ನು ಮುಗಿಸುತ್ತೇನೆ.

# ಗುಣಮಟ್ಟದ ಶಿಕ್ಷಣಕ್ಕೆ ಆಧ್ಯತೆ ನೀಡಿ

## (30ನೇ ಜೂನ್ 1972)

ಶ್ರೀ ಪಿ. ಎಂ. ಬಾಂಗಿ (ಜಮಖಂಡಿ) – ಮಾನ್ಯ ಅಧ್ಯಕ್ಷಿಣಿಯವರೇ, ಇವತ್ತಿನ ದಿವಸ ವಿದ್ಯಾ ಇಲಾಖೆಗೋಸ್ಕರ ಬಜೆಟ್ಟಿನಲ್ಲಿ ಏನು ಮಂಜೂರಾತಿ ಕೇಳಿದ್ದಾರೆಯೋ ಅದಕ್ಕೆ ಸಂಪೂರ್ಣ ಬೆಂಬಲ ಕೊಡಲು ನಾನು ನಿಂತಿದ್ದೇನೆ. ಜಗತ್ತಿನಲ್ಲಿ ಯಾವುದಾದರೂ ಒಂದು ವಸ್ತು ಪವಿತ್ರವಾಗಿದ್ದರೆ, ಅದು ಜ್ಞಾನ. "ಜ್ಞಾನೇನ ಸದೃಶಂ ಪವಿತ್ರಂ ಇಹ ವಿದ್ಯತೆ" ಈ ಪ್ರಕಾರ ಸಂಸ್ಕೃತ ಪಂಡಿತರು ಹೇಳುತ್ತಾರೆ. ಇಂಥಾ ಜ್ಞಾನ ಕೊಡುವುದರಲ್ಲಿ ಸರ್ಕಾರದವರು ಹೆಚ್ಚು ಪ್ರಯತ್ನ ಮಾಡಬೇಕು. ಸರ್ಕಾರ ಕೇವಲ ನಾಲ್ಕೈದು ಕೋಟಿ ರೂಪಾಯಿಗಳನ್ನು ಈ ಇಲಾಖೆಯ ಪ್ರಗತಿಗೋಸ್ಕರ ಒದಗಿಸಿ ಪ್ರಯತ್ನ ಮಾಡಿದರೆ ಮುಗಿಯಲಿಲ್ಲ. ಪರೀಕ್ಷೆಗಳಲ್ಲಿ ಪಾಸಾದವರಿಗೆ ಉದ್ಯೋಗ ಒದಗಿಸುವುದು ಬಹಳ ಮುಖ್ಯ. ಈಗ ವಿದ್ಯಾವಂತರ ಸಂಖ್ಯೆ ಜಾಸ್ತಿ ಆದ ಹಾಗೆಲ್ಲಾ ಅವರ ನಿರುದ್ಯೋಗ ಸಮಸ್ಯೆಯು ಕೂಡ ಜಾಸ್ತಿ ಆಗುತ್ತಿದೆ. ಆದ್ದರಿಂದ ಈ ಸಮಸ್ಯೆಯನ್ನು ಬಿಡಿಸುವುದಕ್ಕೋಸ್ಕರ ಸರ್ಕಾರ ಬೇರೆ ಬೇರೆ ಯೋಜನೆಗಳನ್ನು ಕೈಗೊಳ್ಳಲು ಪ್ರಯತ್ನ ಮಾಡುತ್ತಿದೆ. ವಿದ್ಯಾ ಇಲಾಖೆಯಲ್ಲಿ ಏನೇನು ಮಾಡಬೇಕೋ ಅಷ್ಟೂ ಒಳ್ಳೆಯ ರೀತಿಯಲ್ಲಿ ಪ್ರಗತಿ ಸಾಧಿಸಲಾಗಿದೆ. ಈ ವಿಚಾರದಲ್ಲಿ ವಿದ್ಯಾ ಮಂತ್ರಿಗಳು ಸಾಕಷ್ಟು ಪ್ರಯತ್ನಮಾಡುತ್ತಿದ್ದಾರೆ. ಈ ವರ್ಷ 222 ಜೂನಿಯರ್ ಕಾಲೇಜುಗಳನ್ನು ತೆರೆಯಲು ಮಂಜೂರಾತಿ ಕೊಟ್ಟು ಅವರು ಒಂದು ದೊಡ್ಡ ಹೆಜ್ಜೆಯನ್ನು ಇಟ್ಟಿದ್ದಾರೆ. ಆ ಬಗ್ಗೆ ಅವರಿಗೆ ಎಷ್ಟು ಅಭಿನಂದನೆಗಳನ್ನು ಸಲ್ಲಿಸಿದರೂ ಅದು ಕಡಿಮೆ.

ಪಿ.ಯು.ಸಿ. ಬೋರ್ಡಿನವರು ಶಿಫಾರಸು ಮಾಡಿದ ಪ್ರಕಾರ ಮಾನ್ಯ ವಿದ್ಯಾ ಮಂತ್ರಿಗಳು ಮೊದಲು 145 ಸಂಸ್ಥೆಗಳಿಗೆ ಮಂಜೂರಾತಿ ನೀಡಿದರು. ಅದರ ನಂತರ ರಾಜ್ಯದಲ್ಲಿರತಕ್ಕ ಇತರ ಸಂಸ್ಥೆಗಳವರು ವಿದ್ಯಾ ಮಂತ್ರಿಗಳಿಗೆ ಪ್ರಾರ್ಥನೆ ಮಾಡಿ, ಕಾಲೇಜು ನಡೆಸುವ ಶಕ್ತಿ ತಂತಮ್ಮ ಸಂಸ್ಥೆಯಲ್ಲಿದೆಯೆಂದು ಸಿದ್ಧಮಾಡಿ ತೋರಿಸಿದ ನಂತರ ವಿದ್ಯಾ ಮಂತ್ರಿಗಳು ಮತ್ತೆ 77 ಜೂನಿಯರ್

ಕಾಲೇಜುಗಳಿಗೆ ಮಂಜೂರಾತಿ ನೀಡಿದ್ದಾರೆ. ಈಗ 222 ಕಾಲೇಜುಗಳಿಗೆ ಬೇಕಾಗುವ ಲೆಕ್ಚರರ್ಸ್ ಬಗ್ಗೆ ಅರ್ಜಿಗಳನ್ನು ಆಯಾ ಸಂಸ್ಥೆಗಳವರು ವರ್ತಮಾನ ಪತ್ರಿಕೆಗಳ ಮೂಲಕ ಕರೆದಿದ್ದಾರೆ. ಪ್ರತಿಯೊಂದು ಸಂಸ್ಥೆಗೂ ಇವತ್ತು ನೂರಾರು ಅರ್ಜಿಗಳು ಎಂ.ಎ. ಪಾಸ್ ಆಗಿರುವ ಕ್ಯಾಂಡಿಡೇಟ್ಸ್ ಕಡೆಯಿಂದ ಬಂದಿವೆ. ಪಿ.ಯು.ಸಿ. ಅಂದರೆ ಜೂನಿಯರ್ ಕಾಲೇಜಿಗೆ ಐದು ವರ್ಷಗಳ ಅನುಭವ ಪಡೆದಿರುವ, ಎಂ.ಎ. ಇಲ್ಲವೆ ಎಂ.ಎಸ್ಸಿ. ಡಿಗ್ರಿ ಪಡೆದಿರುವ ಒಬ್ಬ ಪ್ರಿನ್ಸಿಪಾಲ್ ಇರಬೇಕೆಂದು ಒಂದು ಕಟ್ಟುನಿಟ್ಟಿನ ನಿಯಮವನ್ನು ಮಾಡಿದ್ದಾರೆ. ಸರ್ಕಾರ ಜೂನಿಯರ್ ಕಾಲೇಜು ಬಗ್ಗೆ ಸರಿಯಾದ ಕಂಡೀಷನ್ಸ್ ಏನೇನು ಇರಬೇಕೆಂಬ ಬಗ್ಗೆ ನಿಗದಿಮಾಡಿ ಆ ಪ್ರಕಾರ ಜೂನಿಯರ್ ಕಾಲೇಜಿಗೆ ಮಂಜೂರಾತಿ ನೀಡಿದ್ದಾರೆ. ಜೂನಿಯರ್ ಕಾಲೇಜಿಗೆ 15 ಸಾವಿರ ರೂಪಾಯಿಗಳ ಠೇವಣಿ ಇಡಬೇಕೆಂದು ಕಟ್ಟಪ್ಪಣೆ ಮಾಡಿದ್ದಾರೆ. ಆದರೆ ಈ ಬಜೆಟ್ಟಿನಲ್ಲಿ ಜೂನಿಯರ್ ಕಾಲೇಜುಗಳಿಗೆ ಗ್ರ್ಯಾಂಟ್ ಕೊಡುವ ವಿಷಯದಲ್ಲಿ ಆಶ್ವಾಸನೆ ಕೊಟ್ಟಿದ್ದರೂ ಯಾವುದೇ ವ್ಯವಸ್ಥೆ ಇಲ್ಲ. ಈ ದೃಷ್ಟಿಯಿಂದ ನಾನು ವಿದ್ಯಾಮಂತ್ರಿಗಳಿಗೆ ಕೇಳಿಕೊಳ್ಳುವುದೇನೆಂದರೆ ಈ 222 ಕಾಲೇಜುಗಳಿಗೆ ಮೇಂಟೆನನ್ಸ್ ಗ್ರ್ಯಾಂಟ್ ಏನು ಇದೆ, ಅದನ್ನು ಕೊಟ್ಟು ಪ್ರಾರಂಭಿಸಬೇಕು. ಆಗ ಸರಿಯಾದ ವಿದ್ಯೆ ಕೊಡತಕ್ಕಂಥ ವ್ಯವಸ್ಥೆಯಾಗುತ್ತದೆಂದು ನಾನು ಹೇಳಬಯಸುತ್ತೇನೆ.

ಇನ್ನು ಮುಂದೆ ಹೊಸ ಸೆಕೆಂಡರಿ ಸ್ಕೂಲುಗಳನ್ನು ಪ್ರಾರಂಭ ಮಾಡಬೇಕಾದರೆ ಸರ್ಕಾರ 5 ವರ್ಷಗಳವರೆಗೆ ಗ್ರ್ಯಾಂಟು ಕೊಡುವುದಿಲ್ಲ. ಐದು ವರ್ಷಗಳವರೆಗೆ ಯಾವ್ಯಾವ ಸಂಸ್ಥೆಗಳವರು ಸೆಕೆಂಡರಿ ಶಾಲೆಗಳನ್ನು ಸರಿಯಾಗಿ ನಡೆಸುತ್ತಾರೋ ಅಂಥಾ ಶಾಲೆಗಳಿಗೆ ಮಾತ್ರ ಮಂಜೂರಾತಿ ಕೊಡುತ್ತೇವೆಂದೂ, ಅವುಗಳಿಗೆ ಗ್ರ್ಯಾಂಟ್ ಕೊಡುತ್ತೇವೆಂದು ಕೆಲವು ಕಂಡೀಷನ್‌ಗಳನ್ನು ಹಾಕಿದ್ದಾರೆ. ಸರಿಯಾಗಿ ನಡೆದರೆ ಅವುಗಳಿಗೆ ಗ್ರ್ಯಾಂಟ್ ಸಿಗುವಂತೆ ಸರ್ಕಾರ ವ್ಯವಸ್ಥೆ ಮಾಡಿದೆ. ಇನ್ನು ಸರ್ಕಾರಿ ಶಾಲೆಗಳಲ್ಲಿ ಪರೀಕ್ಷೆಗಳ ಫಲಿತಾಂಶ ಕಡಿಮೆ ಪ್ರಮಾಣದಲ್ಲಿ ಬರುತ್ತದೆ. ಆದರೆ ಪ್ರೈವೇಟ್ ಸ್ಕೂಲುಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ವಿದ್ಯಾರ್ಥಿಗಳು ಯಶಸ್ವಿಯಾದ ಫಲಿತಾಂಶ ಬರುತ್ತದೆಂಬ ಬಗ್ಗೆ ಮಾನ್ಯ ಶ್ರೀ ದೇವೇಗೌಡರು ಹೇಳಿದ ಸಂಗತಿ ನಿಜವಿದೆ. ಏಕೆಂದರೆ, ಪ್ರೈವೇಟ್ ಶಾಲೆಗಳಲ್ಲಿ ಶಿಕ್ಷಕರು ಪರ್ಸನಲ್ ಅಟೆನ್ಷನ್ ಅಂದರೆ ಪ್ರತಿಯೊಬ್ಬ ವಿದ್ಯಾರ್ಥಿಗೂ

ಗಮನಕೊಡುವ ವ್ಯವಸ್ಥೆ ಇದೆ. ಆ ಪ್ರಕಾರ ಸರ್ಕಾರಿ ಶಾಲೆಗಳಲ್ಲಿ ವ್ಯವಸ್ಥೆ ಇಲ್ಲದೇ ಇರುವುದರಿಂದ ಸಾಕಷ್ಟು ಪ್ರಮಾಣದಲ್ಲಿ ವಿದ್ಯಾರ್ಥಿಗಳು ಪಾಸ್ ಆಗುವುದಿಲ್ಲ. ಈ ದೃಷ್ಟಿಯಿಂದ ವಿದ್ಯಾಮಂತ್ರಿಗಳು ಸರ್ಕಾರಿ ಶಾಲೆಗಳಲ್ಲಿ ಪ್ರಿನ್ಸಿಪಾಲ್ ಮತ್ತು ಟೀಚರ್ಸ್‌ಗೆ ಹುಕುಂ ಮಾಡಿ ಪ್ರತಿಯೊಬ್ಬ ವಿದ್ಯಾರ್ಥಿಗೆ ಪರ್ಸನಲ್ ಹಾಗೂ ವೈಯಕ್ತಿಕವಾಗಿ ಲಕ್ಷ್ಯ ಕೊಟ್ಟು ಶಿಕ್ಷಣ ಕೊಟ್ಟರೆ ಸರ್ಕಾರಿ ಶಾಲೆಗಳಲ್ಲಿಯೂ ಓದುವ ವಿದ್ಯಾರ್ಥಿಗಳು ಯಶಸ್ವಿಯಾಗುತ್ತಾರೆಂದು ನನಗೆ ಸಂಪೂರ್ಣ ವಿಶ್ವಾಸವಿದೆ.

ಇನ್ನು ಲೈಬ್ರರಿ ವಿಷಯಗಳ ಬಗ್ಗೆ ಮಾನ್ಯ ಶ್ರೀ ದೇವೇಗೌಡರು ಹೇಳಿದ್ದು ಸರಿ ಇದೆ. ಅದನ್ನು ಇನ್ನೂ ಸರಿಪಡಿಸಲು ಸರ್ಕಾರದವರು ಗಮನಕೊಡಬೇಕೆಂದು ಹೇಳುತ್ತೇನೆ.

## ತಾನು ಎಲ್ಲರಿಗಾಗಿ, ಎಲ್ಲರೂ ತನಗಾಗಿ

### (5ನೇ ಜುಲೈ 1972)

ಶ್ರೀ ಪಿ. ಎಂ. ಬಾಂಗಿ (ಜಮಖಂಡಿ)– ಮಾನ್ಯ ಅಧ್ಯಕ್ಷರೇ, ಇವತ್ತಿನ ದಿವಸ ಕೋ–ಆಪರೇಟಿವ್ (ಸಹಕಾರ) ಇಲಾಖೆಗೆ ಸಂಬಂಧಪಟ್ಟಂತೆ ಇಟ್ಟಿರುವ ಡಿಮ್ಯಾಂಡ್ ನಂ. 23ನ್ನು ಅನುಮೋದಿಸುತ್ತಾ, ಈ ಸಹಕಾರಿ ಆಂದೋಲನದ ಬಗ್ಗೆ ಕೆಲವು ಸಲಹೆಗಳನ್ನು ನೀಡಬಯಸುತ್ತೇನೆ. ಈ ಆಂದೋಲನವು ಜಗತ್ತಿನಲ್ಲಿ ಮೊದಲು ಲಂಡನ್ನಿನಲ್ಲಿ ರೋಕ್‌ಡೇಲ್ ಸೊಸೈಟಿ ಎಂಬ ಸಂಸ್ಥೆಯೊಂದಿಗೆ ಪ್ರಾರಂಭವಾಯಿತು. ಆ ಸಂಸ್ಥೆಯವರು ಜಗತ್ತಿನಲ್ಲಿಯೇ ಪ್ರಸಿದ್ಧಿಯಾಗಿ ಅಜರಾಮರವಾಗಿ ಉಳಿದಿದ್ದಾರೆ ಮತ್ತು ರೋಕ್‌ಡೇಲ್ ಪಯನಿಯರ್ಸ್ ಎಂದು ಜಗತ್ತಿನಲ್ಲಿ ಹೆಸರುಗಳಿಸಿದ್ದಾರೆ. ಜಗತ್ತಿನ ಈ ಮೊದಲ ಆಂದೋಲನ, ಜನರಿಂದ ಪ್ರಾರಂಭವಾದ ಆಂದೋಲನ. ಮೊದಲು ಲಂಡನ್ ಶಹರದಲ್ಲಿ 27 ಜನರು ಸೇರಿಕೊಂಡು ಒಂದೊಂದು ಪೌಂಡ್ ಹಾಕಿ ರೋಕ್‌ಡೇಲ್ ಸೊಸೈಟಿಯನ್ನು ಪ್ರಾರಂಭ ಮಾಡಿದರು. ತದನಂತರ ಈ ಆಂದೋಲನವು

ಡೆನ್‌ಮಾರ್ಕ್ ಮತ್ತಿತರ ರಾಷ್ಟ್ರಗಳ ಕಡೆಗೆ ಸಾಗಿತು. ಆದರೆ ಹಿಂದುಸ್ತಾನದಲ್ಲಿ ಇದು ಜನತೆಯಿಂದ ಆರಂಭವಾಗಿಲ್ಲ. ಭಾರತ ದೇಶದಲ್ಲಿ ಮೊದಲು ಸರ್ಕಾರ ಈ ಆಂದೋಳನವನ್ನು ಪ್ರಾರಂಭ ಮಾಡಿತು. ಮೊಟ್ಟಮೊದಲನೆಯದಾಗಿ ಭಾರತದಲ್ಲಿ ಕೇಂದ್ರ ಸರ್ಕಾರ ಒಂದು ಸಹಕಾರಿ ಕಾಯ್ದೆ ತಂದು ಸಹಕಾರಿ ಆಂದೋಳನ ಪ್ರಾರಂಭ ಮಾಡಿತು. ತದನಂತರ, ಬೇರೆ ಬೇರೆ ರಾಜ್ಯಗಳಲ್ಲಿ ಬೇರೆ ಬೇರೆ ಕಾಯ್ದೆಗಳನ್ನು ಮಾಡಿ ಸರ್ಕಾರದವರು ತಮ್ಮ ಸಿಬ್ಬಂದಿ ವರ್ಗಗಳ ಮುಖಾಂತರ ಇದನ್ನು ಜಾರಿಗೆ ತಂದರು. ಈ ಆಂದೋಳನವು ನಿಜವಾಗಿಯೂ ಪ್ರಾರಂಭವಾಗಬೇಕಾದುದು ಜನರಿಂದ. "ಗೌರ್ನಮೆಂಟ್ ಆಫ್ ದಿ ಪೀಪಲ್, ಬೈ ದಿ ಪೀಪಲ್ ಆ್ಯಂಡ್ ಫಾರ್ ದಿ ಪೀಪಲ್" ಎಂಬ ಪ್ರಜಾಪ್ರಭುತ್ವದ ತತ್ವ ಏನು ಇದೆ, ಅದೇ ತತ್ವ ಸಹಕಾರೀ ಆಂದೋಳನದಲ್ಲೂ ಇದೆ. ಆದರೆ ನಮ್ಮ ಭಾರತದಲ್ಲಿ ನಡೆಸುತ್ತಿರುವ ಆಂದೋಳನ ಸರಿಯಾದುದಲ್ಲ. ಬೇರೆ ಬೇರೆ ರಾಜ್ಯಗಳಲ್ಲಿ ಬೇರೆ ಬೇರೆ ರೀತಿಯ ಕಾಯ್ದೆಗಳಿವೆ. ಮೊದಲು ಬಾಂಬೆದಲ್ಲಿ 1925ರ ಕೋ-ಆಪರೇಟಿವ್ ಕಾಯ್ದೆ ಇತ್ತು. ಮೈಸೂರು ರಾಜ್ಯದಲ್ಲಿ ಬೇರೆ ಒಂದು ಕಾಯ್ದೆ, ಮದ್ರಾಸಿನಲ್ಲಿ ಒಂದು ಕಾಯ್ದೆ ಮತ್ತು ಕೊಡಗಿನಲ್ಲಿ ಮತ್ತೊಂದು ಕಾಯ್ದೆ ಇದ್ದವು. ಇವೆಲ್ಲವನ್ನೂ ಸೇರಿಸಿ 1959ರಲ್ಲಿ ಮೈಸೂರು ಕೋ-ಆಪರೇಟಿವ್ ಕಾಯ್ದೆ ಮಾಡಿ ಜಾರಿಗೆ ತಂದರು. ಆ ನಂತರ ಸಾಕಷ್ಟು ಪ್ರಗತಿ ಈ ಆಂದೋಳನದಲ್ಲಿ ಆಗಿದೆ. ಈಗ ನಮ್ಮ ಮಾನ್ಯ ಮಂತ್ರಿಗಳು ಈ ಕಾಯ್ದೆಯನ್ನು ವಿಮರ್ಶೆ ಮಾಡಿ ಇದರಲ್ಲಿದ್ದಂಥಾ ಲೋಪದೋಷ ತಿದ್ದಿ ನಮ್ಮ ಮೈಸೂರು ರಾಜ್ಯಕ್ಕೆ ಒಂದು ಹೊಸ ಕಾಯ್ದೆಯನ್ನು ಮಾಡುವುದು ಅತ್ಯಗತ್ಯವಾಗಿದೆ. ಆ ಬಗ್ಗೆ ನಾನು ಕೆಲವು ಇತರ ಸಲಹೆಗಳನ್ನೂ ಕೊಡುತ್ತೇನೆ. ಈ ಕಾಯ್ದೆ ಪ್ರಕಾರ ಆರ್ಬಿಟ್ರೇಟರನ್ನು ನೇಮಿಸುವ ಅಧಿಕಾರ ರಿಜಿಸ್ಟ್ರಾರ್ ಆಫ್ ಕೋ-ಆಪರೇಟಿವ್ ಸೊಸೈಟಿಯವರಿಗೆ ಇದೆ. ನಮ್ಮ ಮಾನ್ಯ ಮಿತ್ರರಾದ ಬಣಕಾರ್‌ರವರು ಹೇಳಿದ ಹಾಗೆ ಈ ಆರ್ಬಿಟ್ರೇಟರ್‌ಗಳಿಗೆ ಸರಿಯಾಗಿ ಕಾಯ್ದೆ ತಿಳಿದಿರುವುದಿಲ್ಲ. ಆದ್ದರಿಂದ ಅವರು ಸರಿಯಾಗಿ ಇತ್ಯರ್ಥ ಮಾಡುವುದಕ್ಕಾಗುವುದಿಲ್ಲ. ಆದ್ದರಿಂದ ನಾನು ಸೂಚನೆ ಮಾಡುವುದೇನೆಂದರೆ ಈ ಕಾಯ್ದೆಯ 118 ಸೆಕ್ಷನ್ ಪ್ರಕಾರ ಮುನ್ಸಿಫ್ ಕೋರ್ಟಿನ ಅವಾರ್ಡ್ ಮಾಡುವ ಅಧಿಕಾರ ತೆಗೆಯಲ್ಪಟ್ಟಿದ್ದು, ಅದನ್ನು ಪುನಃ ಮುನ್ಸಿಫ್ ಕೋರ್ಟಿಗೆ ಕೊಡಬೇಕೆಂದು ಹೇಳುತ್ತೇನೆ.

**ಶ್ರೀ ಕೆ.ಎಚ್. ಪಾಟೀಲ**– ಈ ಆರ್ಬಿಟ್ರೇಟರ್ಸ್ ನೇಮಕ ಮಾಡಿದ್ದು, ಸಿವಿಲ್ ಕೋರ್ಟುಗಳಲ್ಲಿ ವ್ಯಾಜ್ಯ ಹೆಚ್ಚಾಗಿ ಇದ್ದುದರಿಂದ ಅಲ್ಲಿ ಕೇಸ್ ಇತ್ಯರ್ಥ ಮಾಡುವಾಗ ಬಹಳ ನಿಧಾನವಾಗುತ್ತದೆ. ಅದಕ್ಕೋಸ್ಕರ ಪಂಚಾಯತಿ ತೀರ್ಮಾನದ ಹಾಗೆ ಮಾಡಲು ಇದನ್ನು ಮಾಡಿದ್ದಾರೆ.

**ಶ್ರೀ ಪಿ. ಎಂ. ಬಾಂಗಿ**– ಯಾವುದಾದರೂ ಒಂದು ನಿರ್ಣಯ ಮಾಡಬೇಕಾದರೆ, ಕಾಯ್ದೆಯಲ್ಲಿ ಸಾಕಷ್ಟು ಅನುಭವ ಇದ್ದ ಜನರು ಬೇಕೇ ಹೊರತು, ಅನುಭವ ಇಲ್ಲದವರು ಅಷ್ಟು ಸಮರ್ಪಕವಾಗಿ ನಿರ್ಣಯ ಮಾಡುವುದಿಲ್ಲ. ಇವತ್ತು ಮುನ್ಸೀಫರನ್ನು ನೇಮಿಸುವಾಗ ಮೂರು ವರ್ಷ ವಕಾಲತ್ತಿನಲ್ಲಿ ಅನುಭವ ಇದ್ದರೆ ಮಾತ್ರ ನೇಮಿಸುತ್ತಾರೆ. ಅದೇ ರೀತಿ ಸಿವಿಲ್ ಜಜ್ ಅವರನ್ನು ನೇಮಕ ಮಾಡುವಾಗ 10 ವರ್ಷ ಮುನ್ಸೀಫ ಕೆಲಸ ಮಾಡಿದಂಥವರನ್ನು ನೇಮಿಸುತ್ತಾರೆ. ಆದರೆ ಕೋ–ಆಪರೇಟಿವ್ ಸೊಸೈಟಿಗಳ ರಜಿಸ್ಟ್ರಾರ್ ಅವರಿಂದ ನೇಮಕ ಮಾಡಲ್ಪಟ್ಟಂಥ ಆರ್ಬಿಟ್ರೇಟರ್ಸಗಳು ಯಾವುದೇ ಅನುಭವ ಇಲ್ಲದವರು ಮತ್ತು ಕಾಯ್ದೆ ಜ್ಞಾನ ಇಲ್ಲದವರು. ಇಂಥವರನ್ನು ನೇಮಿಸಿದರೆ ಜನರಿಗೆ ಹೇಗೆ ಸರಿಯಾದ ನ್ಯಾಯ ಸಿಗಬೇಕು? ಕೋರ್ಟುಗಳಿಗೆ ಹೆಚ್ಚಿನ ಕೆಲಸ ಇದ್ದರೆ, ಕೋ–ಆಪರೇಟಿವ್ ವಿಚಾರದಲ್ಲಿ ತೀರ್ಮಾನ ಕೊಡುವುದಕ್ಕೆ ಸ್ಪೆಷಲ್ ಆಗಿ ಮುನ್ಸಿಫ್ ದರ್ಜೆಯ ಒಬ್ಬ ನ್ಯಾಯಾದೀಶರನ್ನು ನೇಮಿಸಿದರೆ ಒಳ್ಳೆಯದು. ಸಿವಿಲ್ ಪ್ರೊಸೀಜರ್ ಕೋಡ್ ಪ್ರಕಾರ ತೀವ್ರ ನ್ಯಾಯ ದೊರಕಿಸಿಕೊಡಬೇಕಾದರೆ, ಸ್ಮಾಲ್‌ಕಾಸ್ ಕೋರ್ಟಿನ ಅಧಿಕಾರವನ್ನು ಮುನ್ಸೀಫರಿಗೆ ಕೊಟ್ಟು, ಅವರ ತೀರ್ಮಾನದ ಮೇಲೆ ಟ್ರಿಬ್ಯೂನಲ್ಲಿಗೆ ಹೋಗದೆ ನೇರವಾಗಿ ಹೈಕೋರ್ಟಿನಲ್ಲಿ ರಿವಿಜನ್ ಪಿಟಿಶನ್ ಹಾಕುವ ಸಾಧ್ಯತೆ ಇದೆ. ನನ್ನ ಸೂಚನೆ ಏನೆಂದರೆ, ಮುನ್ಸೀಫ್ ಕೋರ್ಟಿನ ಅಧಿಕಾರವನ್ನು ಏನು ತೆಗೆದುಹಾಕಲ್ಪಟ್ಟಿದೆ, ಅದನ್ನು ಪುನಃ ಮುನ್ಸೀಫ್ ಕೋರ್ಟಿಗೆ ಕೊಡಬೇಕು. ಮುನ್ಸೀಫ್ ಕೋರ್ಟುಗಳ ಕಡೆಯಿಂದ ತೀರ್ಮಾನವಾಗಬೇಕು ಮತ್ತು ಕೋರ್ಟ ಡಿಕ್ರಿಯನ್ನು ಅಮಲಿನಲ್ಲಿ ತರಬೇಕಾದರೆ ಅದಕ್ಕೆ ಸ್ವತಂತ್ರ ಸಿಬ್ಬಂದಿಯನ್ನು ಇಟ್ಟು ಇದರಿಂದ ಎಲ್ಲಾ ಸೊಸೈಟಿಗಳಿಗೆ ಪರಿಹಾರ ಮಾಡಿಕೊಡಬೇಕೆಂದು ಕೇಳಿಕೊಳ್ಳುತ್ತೇನೆ.

ನಾನು ಮೊದಲು ಹೇಳಿದಂತೆ, ಸರಕಾರಿ ಸಿಬ್ಬಂದಿಯ ಮುಖಾಂತರ ಈ ಆಂದೋಳನವನ್ನು ಕಾಯ್ದೆ ಮಾಡಿ ಜಾರಿಯಲ್ಲಿ ತಂದಿದ್ದಾರೆ. ಸಿಬ್ಬಂದಿ ಮುಖಾಂತರ ಬೇರೆ ಬೇರೆ ಕೋ-ಆಪರೇಟಿವ್ ಸೊಸೈಟಿಗಳು ಅನೇಕ ಸಂದರ್ಭಗಳಲ್ಲಿ ಸ್ಥಾಪನೆ ಆಗುತ್ತವೆ, ಬೆಳೆಯುತ್ತವೆ. ತದನಂತರ ಪುನಃ ಅಧಿಕಾರಿಗಳ ಮುಖಾಂತರ ಆ ಸಂಸ್ಥೆಗಳು ನಷ್ಟವಾಗುತ್ತಿವೆ. ಆದ್ದರಿಂದ ಈ ಸಂಸ್ಥೆಗಳಲ್ಲಿ ಸರ್ಕಾರಿ ಅಧಿಕಾರಿಗಳ ಕೈವಾಡ ಹೆಚ್ಚಿಗೆ ಇರಬಾರದು. ಈ ರೀತಿ ಈ ಕಾಯ್ದೆಯಲ್ಲಿ ತಿದ್ದುಪಡಿ ಮಾಡಬೇಕು. ಈ ಕಾಯ್ದೆಯನ್ವಯ ಹೆಚ್ಚಿನ ಡಿವಿಡೆಂಡ್ ಕೊಡಬೇಕಾದರೆ, ಅಧಿಕಾರಿಗಳನ್ನು ನೇಮಿಸಬೇಕಾದರೆ ಮತ್ತು ಟ್ರಸ್ಟ್ ಫಂಡ್ಸ್‌ನ ಠೇವಣಿ ಇಟ್ಟುಕೊಳ್ಳಬೇಕಾದರೆ ರಜಿಸ್ಟ್ರಾರ್ ಅವರ ಮಂಜೂರಾತಿ ಬೇಕೆಂದು ಕಾಯ್ದೆಯೊಳಗೆ ನಿರ್ಬಂಧನೆಗಳನ್ನು ಹಾಕಿದ್ದೀರಿ. ಅವನ್ನು ತೆಗೆದುಹಾಕಬೇಕು. ಕಾಮನ್ ಮ್ಯಾನ್ ಮತ್ತು ಸ್ಮಾಲ್ ಸ್ಕೇಲ್ ಇಂಡಸ್ಟ್ರೀಸ್‌ಗೆ ಸಹಾಯ ಮಾಡುವ ದೃಷ್ಟಿಯಿಂದ ಕಾಯ್ದೆಯಲ್ಲಿ ದುರಸ್ತಿ ಮಾಡಬೇಕು. ಹಿಂದುಸ್ತಾನದಲ್ಲಿ ಎಲ್ಲೆಲ್ಲೂ ಈಗ ಸಹಕಾರಿ ಆಂದೋಳನ ಹಬ್ಬಿದೆ. ಸೊಸೈಟಿಗಳಿಂದ ಹಣವನ್ನು ಸಾಲದ ರೂಪವಾಗಿ ಸರಿಯಾಗಿ ಹಂಚುವುದಕ್ಕೆ ಆಗುತ್ತಾ ಇಲ್ಲ. ಈ ಸಂಘಗಳಲ್ಲಿ ಸಹಕಾರ ಭಾವನೆ ಇಲ್ಲ. ಆದ್ದರಿಂದ ಸೊಸೈಟಿಗಳಲ್ಲಿರತಕ್ಕ ಲೋಪದೋಷಗಳನ್ನು ಚೆನ್ನಾಗಿ ತಿದ್ದಿ ಅವನ್ನು ಇನ್ನು ಮುಂದೆ ಸರಿಯಾಗಿ ಸಾಗಿಸಲು ಪ್ರಯತ್ನಮಾಡಬೇಕೆಂದು ಸೂಚಿಸಬಯಸುತ್ತೇನೆ.

ಇನ್ನು ವಿಜಾಪೂರ ಜಿಲ್ಲೆಯ ಮಟ್ಟಿಗೆ ಹೇಳುವುದಾದರೆ, ಅಲ್ಲಿರತಕ್ಕ ಡಿಸ್ಟ್ರಿಕ್ಟ್ ಕೋ-ಆಪರೇಟಿವ್ ಬ್ಯಾಂಕಿನಲ್ಲಿ ವಿಶೇಷವಾದಂಥ ಅಕ್ರಮಗಳಿವೆ. ಭಾರಿ ಭಾರಿ ಪಂಪುಸೆಟ್‌ಗಳ ಲೈಸೆನ್ಸ್ ಪಡೆದು, ಅಲ್ಲಿ ಲೈಸೆನ್ಸ್ ಕಮಿಷನ್ ಏಜೆನ್ಸಿ ಮಾಡಿ, ಅಲ್ಲಿರುವ ಕೆಲವು ಡೈರೆಕ್ಟರುಗಳು ಹೆಚ್ಚಿಗೆ ಲಾಭ ಪಡೆಯುತ್ತಿದ್ದಾರೆ. ಇದೇ ಪ್ರಕಾರ ವಿಜಾಪೂರ ಜಿಲ್ಲೆಯಲ್ಲಿರುವ ಅರ್ಬನ್ ಬ್ಯಾಂಕ್‌ಗಳ ಡೈರೆಕ್ಟರಗಳು ತಮ್ಮ ಇಷ್ಟವುಳ್ಳವರ ಅಥವಾ ಗೆಳೆಯರ ಹೆಸರಿನಲ್ಲಿ ತೆಗೆದುಕೊಳ್ಳುವ ಸಾಲವನ್ನು ಪೂರ್ತಿಯಾಗಿ ತಾವೇ ತೆಗೆದುಕೊಳ್ಳುತ್ತಿದ್ದಾರೆ. ಇದರಿಂದ ಸಾಮಾನ್ಯ ಜನರಿಗೆ ಏನೇನೂ ಪ್ರಯೋಜನವಿಲ್ಲ. ಈ ಲೋಪದೋಷಗಳನ್ನು ತಿದ್ದಬೇಕು. ಅದರ ಪ್ರಕಾರ ಇಂಡಸ್ಟ್ರೀಸ್‌ಗಳಿಗೆ ಸಾಲ ಕೊಡತಕ್ಕ ಅನೇಕ ಸಹಕಾರ ಸಂಘಗಳಿವೆ.

ಸಹಕಾರ ಬ್ಯಾಂಕುಗಳೂ ಇವೆ. ಅವುಗಳಲ್ಲಿ ಅನೇಕ ಬೋಗಸ್ ಸಂಘಗಳು ಸಹ ಇವೆ. ಅವು ಸರ್ಕಾರದ ಕಡೆಯಿಂದ ದೊರೆಯುವ ಸಬ್ಸಿಡಿಯನ್ನು ಪಡೆದಿದ್ದರೂ ಇದುವರೆಗೆ ಯಾವ ಭಾಗೀದಾರರಿಗೆ ಯಾವುದೇ ಲಾಭವಾಗಿಲ್ಲ. ಅವು ಯಾವುದೋ ಸೊಸೈಟಿಯ ಹೆಸರನ್ನಿಟ್ಟುಕೊಂಡು, ವ್ಯವಹಾರ ಮಾಡದೇ, ಪೋಕಳ ಲೆಖ್ಖ ಬರೆದು ರಿಬೇಟದ ಲಾಭ ಪಡೆಯುತ್ತಿವೆ. ಅವುಗಳನ್ನು ಲಿಕ್ವಿಡೇಟ್ ಮಾಡಬೇಕು. "ತಾನು ಎಲ್ಲರಿಗಾಗಿ, ಎಲ್ಲರೂ ತನಗಾಗಿ" ಎನ್ನತಕ್ಕ ಕೋ-ಆಪರೇಟಿವ್ ಉದ್ದೇಶ ಏನಿದೆಯೋ ಅದನ್ನು ಅತಿ ಜಾಗ್ರತೆಯಾಗಿ ಸಾಧಿಸಬೇಕು. ಈ ಸೊಸೈಟಿಗಳ ಕೆಲಸ ಏನಿದೆಯೋ, ಅದನ್ನು ಸರಿಯಾಗಿ ತಿದ್ದಿ, ಆ ಸೊಸೈಟಿಗಳು ಚೆನ್ನಾಗಿ ಕೆಲಸಮಾಡುವುದಕ್ಕೆ ಯೋಗ್ಯ ವ್ಯವಸ್ಥೆಮಾಡಬೇಕೆಂದು ಮಂತ್ರಿಗಳನ್ನು ಕೇಳಿಕೊಂಡು ನನ್ನ ಮಾತು ಮುಗಿಸುತ್ತೇನೆ.

## ಅರ್ಥಮಂತ್ರಿಗಳ ಬೇಡಿಕೆಯ ಮೇಲಿನ ಚರ್ಚೆ

### 18ನೇ ಜುಲೈ 1972

### 1) ಭ್ರಷ್ಟ ಅಧಿಕಾರಿಗಳಿಗೆ ಶಿಕ್ಷೆ ವಿಧಿಸಿ:

**ಶ್ರೀ ಪಿ. ಎಂ. ಬಾಂಗಿ (ಜಮಖಂಡಿ)**– ಮಾನ್ಯ ಅಧ್ಯಕ್ಷರೇ, ನಮ್ಮ ಅರ್ಥ ಮಂತ್ರಿಗಳು ಇವತ್ತಿನ ದಿವಸ ಮಂಡಿಸಿರತಕ್ಕ 9 ಬೇಡಿಕೆಗಳನ್ನು ಬೆಂಬಲಿಸುತ್ತಾ ಅದರಲ್ಲಿ ಕೆಲವು ಸಲಹೆಗಳನ್ನು ಸೂಚಿಸಬಯಸುತ್ತೇನೆ. ಮೊಟ್ಟಮೊದಲನೆಯದಾಗಿ ಸೇಲ್ಸ್‌ಟ್ಯಾಕ್ಸ್ ವಿಚಾರದಲ್ಲಿ ಹೇಳುವುದಾದರೆ, ನಮ್ಮ ಜಿಲ್ಹೆಯಲ್ಲಿ ಹಲಕೆಲವು ದೊಡ್ಡ ವ್ಯಾಪಾರಿಗಳು ಡುಪ್ಲಿಕೇಟ್ ಲೆಖ್ಖದ ಪುಸ್ತಕ ಇಟ್ಟಿದ್ದಾರೆ. ಸೇಲ್ಸ್‌ಟ್ಯಾಕ್ಸ್ ಅಧಿಕಾರಿಗಳಿಗೆ ತೋರಿಸುವ ಪುಸ್ತಕಗಳೇ ಬೇರೆ ಮತ್ತು ತಮ್ಮ ಸ್ವಂತದ ಮಾಹಿತಿಗೋಸ್ಕರ ಇಟ್ಟ ಪುಸ್ತಕಗಳೇ ಬೇರೆ. ಇಂಥ ಅಂಗಡಿಕಾರರ ಮೇಲೆ ಪೋಲೀಸ್ ಅಧಿಕಾರಿಗಳು ರೇಡ್ ಮಾಡಿ ಅವುಗಳನ್ನು ಪತ್ತೆ ಹಚ್ಚಿ ಅಂಥಾ ವ್ಯಾಪಾರಸ್ಥರನ್ನು ಶಿಕ್ಷೆಗೆ ಗುರಿ ಮಾಡಬೇಕೆಂದು ಹೇಳಬಯಸುತ್ತೇನೆ. ಸೇಲ್ಸ್‌ಟ್ಯಾಕ್ಸ್ ಅಧಿಕಾರಿಗಳು, ನಮ್ಮ ಜಿಲ್ಲೆಯಲ್ಲಿ ಸಾಕಷ್ಟು ಲಂಚದ ಅಧಿಕಾರಿಗಳು ಇರುವುದರಿಂದ ಅವರು ವ್ಯಾಪಾರಸ್ಥರಿಗೆ ಕಿರುಕುಳ ಕೊಡುತ್ತಾರೆ. ಅವರಿಗೆ ತ್ರಾಸ

ಕೊಟ್ಟು ಅವರ ಕಡೆಯಿಂದ ಲಂಚ ತೆಗೆದುಕೊಳ್ಳುತ್ತಾರೆ. ನಮ್ಮ ಜಮಖಂಡಿ ತಾಲೂಕಿನ ಬಗ್ಗೆ ಮಾತನಾಡಬೇಕಾದರೆ, ಅಲ್ಲಿನ ಅಧಿಕಾರಿಗಳು ಸಾಕಷ್ಟು ಲಂಚ ಸ್ವೀಕರಿಸಿ ಪ್ರತಿದಿನ 100–200 ರೂಪಾಯಿ ತೆಗೆದುಕೊಳ್ಳುತ್ತಿದ್ದಾರೆಂದು ತಿಳಿದುಬಂದಿದೆ. ಆದ್ದರಿಂದ ಅಂಥ ಅಧಿಕಾರಿಗಳ ಮೇಲೆ ಉಗ್ರವಾದ ಕ್ರಮ ತೆಗೆದುಕೊಂಡು ಇದಕ್ಕೆ ಒಂದು ಕಾನೂನು ಮಾಡಿ ಆ ಶಾಸನಕ್ಕೆ ಅವರನ್ನು ಗುರಿಮಾಡಿದರೆ ಅನುಕೂಲವಾಗುತ್ತದೆ. ಇಲ್ಲದಿದ್ದರೆ ಲಂಚಗುಳಿತನವನ್ನು ತಪ್ಪಿಸುವುದು ಸಾಧ್ಯವಿಲ್ಲ.

## 2) ನಿವೃತ್ತಿ ವೇತನ ಕುರಿತು:

ಇನ್ನು ಎರಡನೆಯದಾಗಿ ರಾಮದುರ್ಗ, ಮುಧೋಳ, ಜಮಖಂಡಿ ಈ ಸಂಸ್ಥಾನಗಳ ನಿವೃತ್ತಿಹೊಂದಿದ ಪ್ರಾಥಮಿಕ ಶಾಲಾ ಶಿಕ್ಷಕರ ಪೆನ್ಷನ್ ಹಣ ಇನ್ನೂ ಫೈನಲೈಸ್ ಆಗಿಲ್ಲ. ಇಂಥಾ ಶಿಕ್ಷಕರು ಇವತ್ತಿನ ದಿವಸ ಪೆನ್‌ಷನ್, ಪಗಾರ ಏನೂ ಇಲ್ಲದೇ ಬಹಳ ತ್ರಾಸದಲ್ಲಿದ್ದಾರೆ. ಆದುದರಿಂದ ಇದರ ಬಗ್ಗೆ ಆರ್ಥಿಕ ಮಂತ್ರಿಗಳು ತನಿಖೆ ಮಾಡಿ ಕಾನೂನಿನ ಪ್ರಕಾರ ಅವರಿಗೆ ಪೆನ್‌ಷನ್ ದೊರೆಯುವಂತೆ ವ್ಯವಸ್ಥೆ ಮಾಡಬೇಕೆಂದು ಸೂಚಿಸಬಯಸುತ್ತೇನೆ.

ರಾಜಕೀಯ ಸಂತ್ರಸ್ತರಿಗೆ ಪೆನ್‌ಷನ್ ಏನಿದೆ ನಮ್ಮ ಕಡೆ ಜಮಖಂಡಿಯ ಕೆಲವರಿಗೆ ಅದನ್ನು ಎರ್ಡು ವರ್ಷಗಳವರೆಗೆ ಕೊಡಲಾಗಿತ್ತು. ಈಗ ಆ ಹಣವನ್ನು ತಪ್ಪಿ ಕೊಡಲಾಗಿದೆಯೆಂದು ಹೇಳಿ ವಾಪಸ್ಸು ಕೊಡಬೇಕೆಂದು ಕೇಳಿದ್ದಾರೆ. ಅವರು ಆ ಹಣವನ್ನು ಖರ್ಚು ಮಾಡಿದ್ದಾರೆ. ಇವತ್ತಿನ ದಿವಸ ಅದನ್ನು ವಾಪಸ್ಸು ಕೊಡಲಿಕ್ಕೆ ಅವರಿಗೆ ಶಕ್ಯವಿಲ್ಲ. ಆದುದರಿಂದ ಅವರಿಗೆ ಕೊಟ್ಟಿರುವ ಹಣವನ್ನು ವಸೂಲು ಮಾಡಬಾರದೆಂದು ತಿಳಿಸಬೇಕೆಂದು ಈ ಸಮಯದಲ್ಲಿ ತಮಗೆ ಸೂಚಿಸಬಯಸುತ್ತೇನೆ.

## 3) ರಾಜಧನ ಹಾಗೂ ಪ್ಯಾಕೇಜುಗಳ ಕುರಿತು:

ರಾಜಧನದ ವಿಚಾರದಲ್ಲಿ ಹೇಳುವುದಾದರೆ ಜಮಖಂಡಿಯ ರಾಜರಿಗೆ ಮರ್ಜರ್ ಅಗ್ರಿಮೆಂಟ್ ಪ್ರಕಾರ 98 ಸಾವಿರ ರೂಪಾಯಿ ದೊರೆಯುತ್ತಿತ್ತು.

ಅನಂತರ ಸ್ಟೇಟ್ ರೀಆರ್ಗನೈಸೇಷನ್ ಆ್ಯಕ್ಟ್ ಬಂದಮೇಲೆ, ಈ ಹಣ ಜಮಖಂಡಿ ರಾಜರಿಗೆ ಮಹಾರಾಷ್ಟ್ರ ಸರ್ಕಾರದ ಮುಖಾಂತರ ತಲುಪುತ್ತಿತ್ತು. ಆದರೆ ರಾಜಧನ ರದ್ಧತಿ ಕಾಯ್ದೆ ಪಾರ್ಲಿಮೆಂಟಿನಲ್ಲಿ ಪಾಸಾದ ಮೇಲೆ ಈ ರಾಜರಿಗೆ ರಾಜಧನ ಮತ್ತು ಬೇರೆ ಬೇರೆ ಸೌಕರ್ಯಗಳನ್ನು ಕೊಡುವುದು ಅವಶ್ಯಕವಿಲ್ಲ ಎಂದು ಮಾಡಿದ್ದಾರೆ. ಆ ಬಗ್ಗೆ ವಿಚಾರ ಮಾಡಬೇಕೆಂದು ಹೇಳುತ್ತೇನೆ. ಜಮಖಂಡಿ ರಾಜರಿಗೆ ಇದ್ದ 10 ಲಕ್ಷ ರೂಪಾಯಿ ಬೆಲೆ ಬಾಳುವಂಥ ಸುಮಾರು 8–10 ಸಾವಿರ ಎಕರೆ ಜಮೀನುಗಳನ್ನು, ಗೇಣಿದಾರರಿಂದ ತಮಗೆ ಬರತಕ್ಕ ಪರಿಹಾರ ಧನವನ್ನು ಮೈಸೂರು ಸರ್ಕಾರಕ್ಕೆ ದಾನ ರೂಪವಾಗಿ ಕೊಡಮಾಡಿದ್ದರು. ಆ ಬಗ್ಗೆ ಇನ್ನೂವರೆಗೆ ಜಮಖಂಡಿ ರಾಜರಿಗೆ ಉತ್ತರ ದೊರಕಲಿಲ್ಲ. ಇದನ್ನು ವಿಚಾರಮಾಡಿ ಜಮಖಂಡಿ ರಾಜರಿಗೆ ಕೊಡತಕ್ಕ ಪರಿಹಾರ ಧನ ಏನು ಇದೆಯೋ, ಆ ಹಣ ಮೈಸೂರು ಸರ್ಕಾರಕ್ಕೆ ದಾನರೂಪವಾಗಿ ಬರುತ್ತಿತ್ತು. ಜಮಖಂಡಿ ರಾಜರು ಇದರ ಬಗ್ಗೆ ಮೈಸೂರು ರಾಜ್ಯಕ್ಕೆ ಬರೆದುಕೊಟ್ಟಿದ್ದಾರೆ. ಈಗಿನ ಸರ್ಕಾರ ಇದನ್ನು ಸ್ವೀಕರಿಸಿ, ಮೈಸೂರು ಸರ್ಕಾರದ ಬೊಕ್ಕಸಕ್ಕೆ ಜಮಾ ಮಾಡಿಕೊಳ್ಳಬೇಕೆಂದು ಹೇಳಬಯಸುತ್ತೇನೆ.

ಇನ್ನು ಮುಧೋಳ, ಜಮಖಂಡಿ, ರಾಮದುರ್ಗ ರಾಜರುಗಳ ಪ್ಯಾಲೇಸುಗಳು ಖಾಲಿಯಾಗಿವೆ ಎಂದು ತಿಳಿದಿರುತ್ತೇನೆ. ಅವರು ಪ್ಯಾಲೇಸ್‌ಗಳನ್ನು ಶಿಕ್ಷಣ ಸಂಸ್ಥೆಯವರಿಗೆ ಇಲ್ಲವೆ ಸರ್ಕಾರದವರಿಗೆ ಬಿಟ್ಟುಕೊಡಲು ಸಿದ್ಧವಾಗಿದ್ದಾರೆ. ಈ ಕಟ್ಟಡಗಳನ್ನು ತೆಗೆದುಕೊಂಡರೆ ಅವನ್ನು ದುರಸ್ತಿ ಮಾಡಲು ಮತ್ತು ಟ್ಯಾಕ್ಸ್ ಇವುಗಳಿಗೆ ಸುಮಾರು ಹಣ ಖರ್ಚಾಗುತ್ತದೆ. ಆದುದರಿಂದ ರಾಜರು ತಮ್ಮ ರಾಜಭವನಗಳನ್ನು ಮೈಸೂರು ಸರ್ಕಾರಕ್ಕೆ ಮುಫತ್ತಾಗಿ ಕೊಡಲು ಸಿದ್ಧವಾಗಿದ್ದಾರೆ. ಅಂಥಾ ಪ್ಯಾಲೇಸ್‌ಗಳನ್ನು ತೆಗೆದುಕೊಂಡು ನಮ್ಮ ಸರ್ಕಾರದವರು ಬೇರೆ ಯಾವುದಾದರೂ ಸಾರ್ವಜನಿಕ ಕಾರ್ಯಗಳಿಗೆ ಉಪಯೋಗಿಸಬೇಕೆಂದು ಸೂಚಿಸಬಯಸುತ್ತೇನೆ. ಇಷ್ಟು ನನ್ನ ಸಲಹೆಗಳನ್ನು ನೀಡಿ ಇವತ್ತಿನ ದಿವಸ ಮಂಡಿಸಿರತಕ್ಕ 9 ಬೇಡಿಕೆಗಳನ್ನು ಸಮರ್ಥಿಸಿ ನನ್ನ ಭಾಷಣವನ್ನು ಮುಗಿಸುತ್ತೇನೆ.

**ಶ್ರೀ ಎಂ.ವೈ. ಘೋರ್ಪಡೆ–** ಶ್ರೀಮಾನ್ ಬಾಂಗಿಯವರು ಜಮಖಂಡಿ ರಾಜರಿಗೆ ಕೊಡುತ್ತಿರುವ ರಾಜಧನವನ್ನು ರದ್ದು ಮಾಡಿರುವ ವಿಷಯ ಪ್ರಸ್ತಾಪ

ಮಾಡಿದರು. ಅದರ ವಿಚಾರ ನನಗೆ ಗೊತ್ತಿಲ್ಲ. ಹಿಂದೆ ಸೊಂಡೂರು ಸಂಸ್ಥಾನ ಮರ್ಜರ್ ಆಗುವ ಕಾಲಕ್ಕೆ ಕೇಂದ್ರ ಸರ್ಕಾರದೊಡನೆ ಕೆಲವೊಂದು ಅಗ್ರಿಮೆಂಟ್‌ಗಳನ್ನು ಮಾಡಿಕೊಳ್ಳಲಾಗಿತ್ತು. ಅದರ ಪ್ರಕಾರ ರಾಜಧನ ಸಿಗುತ್ತಿತ್ತು. ಅದರಂತೆ ಜಮಖಂಡಿ ರಾಜರು ಸಹ ಕೇಂದ್ರ ಸರ್ಕಾರದೊಡನೆ ಅಗ್ರಿಮೆಂಟ್ ಮಾಡಿಕೊಂಡಿರಬಹುದೆಂದು ಕಾಣುತ್ತದೆ. ಇದು ಹಳೆಯ ಪ್ರಶ್ನೆಯಾಗುತ್ತದೆ. ಇದನ್ನು ಮತ್ತೆ ಕೇಂದ್ರ ಸರ್ಕಾರದೊಡನೆ ಪ್ರಸ್ತಾಪ ಮಾಡುವುದಕ್ಕೆ ಸಾಧ್ಯವಾಗುವುದಿಲ್ಲ. ಏಕೆಂದರೆ ರಾಜಧನ ಕೊಡಬಾರದೆಂಬ ಬಗ್ಗೆ ಈಗಾಗಲೇ ಪಾರ್ಲಿಮೆಂಟ್‌ನಲ್ಲಿ ಅದಕ್ಕೆ ಸಂಬಂಧಪಟ್ಟ ಕಾಯ್ದೆ ಪಾಸಾಗಿದೆ.

## 21ನೇ ಜುಲೈ 1972

**ಶ್ರೀ ಪಿ.ಎಂ. ಬಾಂಗಿ (ಜಮಖಂಡಿ)**– ಸನ್ಮಾನ್ಯ ಅಧ್ಯಕ್ಷರೇ, ಮಾನ್ಯ ಶಾಸಕರಾದ ಶ್ರೀ ಕರಿಯಪ್ಪನವರು ತಂದ ಗೊತ್ತುವಳಿಗೆ ಬೆಂಬಲ ಕೊಟ್ಟು ನನ್ನ ಸಲಹೆ ಸೂಚನೆಗಳನ್ನು ಈ ವಿಷಯದ ಬಗ್ಗೆ ಹೇಳಬಯಸುತ್ತೇನೆ.

ಸಹಕಾರ ಆಂದೋಳನ ಇದು ಜನತೆಯ ಆಂದೋಳನ. ಇದರಲ್ಲಿ ಪ್ರಜಾಪ್ರಭುತ್ವದ ತತ್ವ ಅಡಕವಾಗಿದೆ. ಒಬ್ಬ ಮೆಂಬರ್‌ನಿಗೆ ಒಂದು ವೋಟ್ ಎಂಬ ತತ್ವಕ್ಕೆ ಅನುಸಾರವಾಗಿ, ಸಹಕಾರ ಸಂಸ್ಥೆಗಳ ಡೈರಕ್ಟರ್ ಚುನಾವಣೆ ಆಗತಕ್ಕದ್ದಿರುತ್ತದೆ. 'ನಾನು ಎಲ್ಲರಿಗಾಗಿ, ಎಲ್ಲರೂ ನನಗಾಗಿ' ಈ ತತ್ವದ ಮೇಲೆ ಸಹಕಾರ ಆಂದೋಳನ ರಚಿತವಾಗಿದೆ. 'ವೊವೆನ್' ಎಂಬ ಓರ್ವ ಸಹಕಾರಿಯು, ಈ ಮೂಲಭೂತ ತತ್ವಗಳ ಜನಕನಾಗಿದ್ದಾನೆ. ಸದಸ್ಯರಿಂದ ಆರಿಸಿ ಬಂದ ಡೈರೆಕ್ಟರ್‌ಗಳು ಸದಸ್ಯರಿಗೋಸ್ಕರ ಸಹಕಾರ ಸಂಸ್ಥೆಗಳನ್ನು ನಡೆಸುತ್ತಾರೆ. ಆದರೆ ಹಿಂದುಸ್ತಾನದಲ್ಲಿ ಇದರ ವಿರುದ್ಧವಾಗಿ ಈ ಆಂದೋಳನವು ಸರಕಾರದಿಂದ ಪ್ರಾರಂಭವಾಗಿದೆ. ಮೊಟ್ಟಮೊದಲು ಕೇಂದ್ರ ಸರ್ಕಾರದವರು ಇಡೀ ಭಾರತ ದೇಶಕ್ಕೋಸ್ಕರ ಒಂದು ಸಹಕಾರ ಕಾಯ್ದೆಯನ್ನು ರಚಿಸಿ ಅಖಂಡ ಹಿಂದುಸ್ತಾನದಲ್ಲಿ ಅದನ್ನು ಜಾರಿಯಲ್ಲಿ ತಂದರು. ತದನಂತರ 1925 ರಲ್ಲಿ ಸಹಕಾರ ವಿಷಯವನ್ನು ಪ್ರಾಂತೀಯ ವಿಷಯ ಮಾಡಲಾಯಿತು. ಅದಕ್ಕನುಸಾರವಾಗಿ ಮುಂಬೈ ಸರ್ಕಾರದವರು 1925ರಲ್ಲಿ ಮುಂಬೈ ಸಹಕಾರ

ಕಾಯ್ದೆ ರಚಿಸಿ ಅದನ್ನು ಮುಂಬೈ ರಾಜ್ಯಕ್ಕೆ ಅನ್ವಯಿಸಿದರು. ಅನಂತರ ಇಡೀ ಮೈಸೂರು ರಾಜ್ಯಕ್ಕೆ ಅನ್ವಯಿಸುವುದಕ್ಕೋಸ್ಕರ ಮೈಸೂರು ಸರ್ಕಾರದವರು ಮೈಸೂರು ಸಹಕಾರಿ ಕಾಯ್ದೆ ಮಾಡಿ ಜಾರಿಯಲ್ಲಿ ತಂದಿದ್ದಾರೆ. ಈ ಕಾಯ್ದೆ ದೋಷವಿದ್ದು, ಅದರಲ್ಲಿ ತಿದ್ದುಪಡಿ ಮಾಡಲು ನನ್ನ ಸೂಚನೆಗಳು ಹೀಗಿವೆ.

1. ಏಕತ್ರ ಕುಟುಂಬದ ಮ್ಯಾನೇಜರನಿಗೆ ಮ್ಯಾನೇಜರ್ ನಾಳೆಯಿಂದ ಸಹಕಾರ ಸಂಸ್ಥೆಗಳ ಸದಸ್ಯನಾಗಲು ಈ ಕಾಯ್ದೆ ಮೇರೆಗೆ ಬರುವುದಿಲ್ಲ. ಕುಟುಂಬದ ಯಾವುದೇ ಸದಸ್ಯನು ವೈಯಕ್ತಿಕವಾಗಿ ಈ ಕಾಯ್ದೆ ಮೇರೆಗೆ ಸದಸ್ಯನಾಗಲು ಅರ್ಹನಾಗುತ್ತಾನೆ. ಆತನು ತನ್ನ ಏಕತ್ರ ಕುಟುಂಬಕ್ಕೋಸ್ಕರ ಸೊಸೈಟಿ ಕಡೆಯಿಂದ ಸಾಲವನ್ನು ತೆಗೆದುಕೊಂಡರೂ ಆ ಸಾಲಕ್ಕೆ ಏಕತ್ರ ಕುಟುಂಬದ ಆಸ್ತಿಯು ಅದಕ್ಕೆ ಹೊಣೆಗಾರನಾಗುವುದಿಲ್ಲ. ಅಂಥ ಆಸ್ತಿಯೊಳಗಿನ ಆ ಸದಸ್ಯನ ಹಿಸ್ಸೆ ಮಾತ್ರ ಆತನ ಸಾಲಕ್ಕೆ ಹೊಣೆಗಾರನಾಗುತ್ತದೆ. ಆದ್ದರಿಂದ ಸೊಸೈಟಿಗೆ ಬರತಕ್ಕ ಹಣ ವಸೂಲ್ಮಾಡುವುದಕ್ಕೆ ಕಷ್ಟವಾಗುತ್ತದೆ. ಸಹಕಾರ ಕಾಯ್ದೆಯಲ್ಲಿ ಉಚಿತವಾಗಿ ಅಮೆಂಡ್‌ಮೆಂಟ್ ಮಾಡಿ ಏಕತ್ರ ಕುಟುಂಬದ ಮ್ಯಾನೇಜರ್‌ನಿಗೆ ಮ್ಯಾನೇಜರ್ ನಾಳೆಯಿಂದ ಸದಸ್ಯನಾಗಲು ಅವಕಾಶ ಮಾಡಿಕೊಡಬೇಕು.

2. ಈ ಕಾಯ್ದೆ ಮೇರೆಗೆ, ಭಾಗಿದಾರರ ಅಂಗಡಿಗಳಿಗೆ ಸದಸ್ಯನಾಗಲು ಬರುವುದಿಲ್ಲ. ಒಬ್ಬ ಪಾಲುದಾರನು ತನ್ನ ಪರವಾಗಿ ಮಾಡಿದ ಸಾಲಕ್ಕೆ ಭಾಗಿದಾರಿ ಅಂಗಡಿಯ ಆಸ್ತಿ ಹೊಣೆಗಾರನಾಗುವುದಿಲ್ಲ. ಆದ್ದರಿಂದ ಈ ಕಾಯ್ದೆಯಲ್ಲಿ ಸೂಕ್ತ ತಿದ್ದುಪಡಿ ಮಾಡಿ, ಪಾಲುಗಾರಿಕೆ ಫರ್ಮಗಳಿಗೆ ಸದಸ್ಯರನ್ನು ಮಾಡಿಕೊಡಲು ಅವಕಾಶ ಮಾಡಿಕೊಡಬೇಕು.

3. ಭೂಕಂದಾಯ (ಲ್ಯಾಂಡ್ ರೆವಿನ್ಯೂ) ವಸೂಲು ಮಾಡಿಕೊಳ್ಳಲು ಯಾವ ಪ್ರಕಾರವಾಗಿ ಲಿಮಿಟೇಷನ್ (limitation) ಕಾಯ್ದೆಯ ತೊಂದರೆ ಇರುವುದಿಲ್ಲ, ಅದೇ ಪ್ರಕಾರ ಸೊಸೈಟಿಗಳ ಬಾಕಿ ಹಣವನ್ನು

ಸದಸ್ಯರ ಖಾತೆಯಿಂದ ವಸೂಲು ಮಾಡಲು ಲಿಮಿಟೇಷನ್ ಕಾಯ್ದೆ ಅನ್ವಯಿಸಬಾರದೆಂದು ಸಹಕಾರ ಕಾಯ್ದೆಯಲ್ಲಿ ತಿದ್ದುಪಡಿ ಮಾಡಬೇಕೆಂದು ಸೂಚಿಸುತ್ತೇನೆ. 1925ರ ಮುಂಬೈ ಸಹಕಾರಿ ಕಾಯ್ದೆಯಲ್ಲಿ ಹಣ ವಸೂಲು ಮೊದಲು ಲಿಮಿಟೇಷನ್ ಇದ್ದಿದ್ದಿಲ್ಲ. ಆದ್ದರಿಂದ ನಮ್ಮ ಮೈಸೂರು ಸಹಕಾರ ಕಾಯ್ದೆಯಲ್ಲಿ ಮುದ್ದತ ಅಂದರೆ ಲಿಮಿಟೇಷನ್ ಬಗ್ಗೆ ಇದ್ದ ಕಲಮನ್ನು ತೆಗೆದುಹಾಕಬೇಕೆಂದು ನಾನು ಸೂಚಿಸಬಯಸುತ್ತೇನೆ.

4. ಮೈಸೂರು ರಾಜ್ಯದಲ್ಲಿರುವ ಅರ್ಬನ್ ಕೋ-ಆಪರೇಟಿವ್ ಬ್ಯಾಂಕುಗಳ ಡೈರೆಕ್ಟರ್‌ಗಳು ತಮ್ಮ ಹೆಸರಿನಿಂದ ತಮ್ಮ ಆಪ್ತರು ಮತ್ತು ಸ್ನೇಹಿತರ ಹೆಸರಿನಿಂದ ಬ್ಯಾಂಕಿನಲ್ಲಿರುವ ಯಾವತ್ತೂ ಹಣವನ್ನು ಸಾಲದ ರೂಪವಾಗಿ ತೆಗೆದುಕೊಂಡು ಹೋಗುತ್ತಾರೆ. ಇದರಿಂದಾಗಿ ಬಡ ಷೇರುದಾರರಿಗೆ ಆಯಾ ಬ್ಯಾಂಕುಗಳ ಕಡೆಯಿಂದ ಸಾಲ ಸಿಗುವುದಿಲ್ಲ. ಆದ್ದರಿಂದ ಮೈಸೂರು ಸಹಕಾರಿ ಕಾನೂನಿನಲ್ಲಿ ಯೋಗ್ಯ ಬದಲಾವಣೆ ಮಾಡಿ, ಡೈರೆಕ್ಟರ್ ಆಗ ಬಯಸುವವನು ಯಾವ ರೀತಿಯಿಂದಲೂ ತನ್ನ ಹೆಸರಿನಿಂದಾಗಲಿ, ತನ್ನ ಆಪ್ತರ ಹೆಸರಿನಿಂದಾಗಲಿ ಇಲ್ಲವೇ ಸ್ನೇಹಿತರ ಹೆಸರಿನಿಂದಾಗಲಿ ತಮ್ಮ ಬ್ಯಾಂಕಿನಿಂದ ಸಾಲ ತೆಗೆದುಕೊಳ್ಳಬಾರದೆಂದು ವಿಧಿಸಬೇಕು.

5. ನಮ್ಮ ಜಮಖಿಂಡಿ ತಾಲೂಕಿನಲ್ಲಿ ನೇಕಾರ ಸಹಕಾರ ಸಂಘಗಳಲ್ಲಿ ಕೆಲವು ಬೋಗಸ್ ಮತ್ತು ಕೆಲವು ರೋಗಗ್ರಸ್ತ ಸೊಸೈಟಿಗಳಿವೆ. ಇಂಥಾ ಸೊಸೈಟಿಗಳು ಖೊಟ್ಟಿ ಲೆಖ್ಖ-ಪತ್ರ ತೋರಿಸಿ ರಿಬೇಟ್ ರೂಪವಾಗಿ ಹಣ ಪಡೆಯುತ್ತಾರೆ. ಮೊದಲು ಬಡವನಾಗಿದ್ದವನು ಇಂಥ ಖೊಟ್ಟಿ ಸಂಘಗಳ ಚಾಲಕನಾಗಿ ದುರ್ಲಾಭ ಪಡೆದು ಇವತ್ತು ಹೊಲಗಳನ್ನು ಕೊಂಡು ಮನೆಗಳನ್ನು ಕಟ್ಟಿ ಲಕ್ಷಾಧೀಶನಾಗಿರುತ್ತಾನೆ. ಇಂಥವುಗಳ ತನಿಖೆ ಮಾಡಿ ಅವನ್ನು ಲಿಕ್ವಿಡೇಟ ಮಾಡಬೇಕು ಮತ್ತು ಕೆಲಸ ಮಾಡುವಂಥ ಸೊಸೈಟಿಗಳಿಗೆ ಧನ ಸಹಾಯ ಮಾಡಬೇಕೆಂದು ಸೂಚಿಸುತ್ತೇನೆ.

6. ಸಹಕಾರ ಆಂದೋಳನ ಯಶಸ್ವಿಯಾಗಬೇಕಾದರೆ ವಿಚಾರಣಾ ಕಮಿಟಿ ನೇಮಿಸಿ ರಾಜ್ಯದಲ್ಲಿರುವ ನೂರಾವತ್ತೂ ಸೊಸೈಟಿಗಳ ನಡವಳಿಕೆಗಳ ತನಿಖೆ ಮಾಡಿಸಬೇಕು ಮತ್ತು ಬೋಗಸ್ ಸೊಸೈಟಿಗಳನ್ನು ತೆಗೆದು ಹಾಕಿ ನಿಜವಾದ ಸಹಕಾರ ಸಂಘಗಳಿಗೆ ಸಹಾಯಗಳನ್ನು ಸರ್ಕಾರ ಕೊಡಬೇಕು. ನಮ್ಮ ಕಡೆಗೆ ಕೈಚೀಲದಲ್ಲಿ ಲೆಖ್ಖದ ವಹೀ ಮತ್ತು ರಿಜಿಸ್ಟರ್ ಪುಸ್ತಕಗಳನ್ನು ಹಾಕಿಕೊಂಡು ಅಲಂಕಾರ ಸೊಸೈಟಿ ಮುಂತಾದ ಹೆಸರಿಟ್ಟುಕೊಂಡು ದುರ್ಲಾಭ ಗಳಿಸುತ್ತಿದ್ದಾರೆ. ಅದನ್ನು ನಿಲ್ಲಿಸಬೇಕು. ಸಹಕಾರ ಆಂದೋಳನದ ಯಶಸ್ವಿಗೆ ಮಾನ್ಯ ಕರಿಯಪ್ಪನವರು ತಂದ ಗೊತ್ತುವಳಿಗೆ ನನ್ನ ಬೆಂಬಲವಿದೆಯೆಂದು ಹೇಳಿ ಭಾಷಣ ಮುಗಿಸುತ್ತೇನೆ.

## ಟಿಪ್ಪಣಿ ರೂಪದ ಪ್ರಶ್ನೆಗಳು

(25th July 1972)

437 **Sri P.M. Bangi (Jamkhandi)** –

Will the Minister for Labour **be** pleased to state-

1. the total number of licences issued to private luxury, Contract and Stage carriage buses;

2. whether the Government is aware that all licence holders of stage carriages and luxury buses are regularly carrying paid passengers and thus contravene the conditions of licence;

3. whether there is any proposal before the Government to discontinue issue of licences to such luxury and contract and Stage Carriage buses after the current licences expire?

Sri V.S. Koujalgi (Minister of State for Youth Services) [on behalf of Sri Azeez Sait (Minister for Labour)-

(a) Total number of permits which are current, issued in the State are as detailed below-

| (1) | Private Luxury | No such category of vehicles |
|---|---|---|
| (2) | Contract Carriages | 187 |
| (3) | Stage carriages | 1,375 |

(b) Instances of Contract Carriages running clandestinely as stage carriage service violating the conditions of the permit have come to the notice of Government.

(b) No

**ಶ್ರೀ ಪಿ. ಎಂ. ಬಾಂಗಿ**– ನನ್ನ ಪ್ರಶ್ನೆಯ (ಆ) ಗೆ ಉತ್ತರವಾಗಿ ಕಾಂಟ್ರಾಕ್ಟ್ ಬಸ್ಸುಗಳನ್ನು ಕಳ್ಳತನದಲ್ಲಿ ಪ್ರಯಾಣಿಕರ ಬಸ್ಸುಗಳಾಗಿ ಓಡಿಸುತ್ತಿರುವ ಸಂದರ್ಭಗಳು ಸರ್ಕಾರದ ಗಮನಕ್ಕೆ ಬಂದಿದೆ ಎಂದು ಹೇಳಿದ್ದೀರಿ. ಈಗ ಓಪನ್ ಆಗಿ ಖಾಸಗೀಯವರು ಬೆಂಗಳೂರು, ಧಾರವಾಡ, ಹುಬ್ಬಳ್ಳಿ ಮುಂತಾದ ಪಟ್ಟಣಗಳಲ್ಲಿ ಪ್ರಮುಖ ಅಂಗಡಿಗಳ ಮುಂದೆ ಬೋರ್ಡ್ ಇಟ್ಟು ಪ್ರಯಾಣಿಕರಿಗೆ ಟಿಕೇಟ್ ಮಾರಾಟ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? ಇದರ ಬಗ್ಗೆ ಏನು ಕ್ರಮ ತೆಗೆದುಕೊಂಡಿದ್ದೀರಾ?

**ಶ್ರೀ ಡಿ. ದೇವರಾಜ ಅರಸ್**– ಕ್ಯಾರೇಜಸ್‌ಗೆ ಪರ್ಮಿಟ್ ಕೊಡುವುದು ಸರ್ಕಾರವಲ್ಲ. ಅದಕ್ಕೆ ಜಿಲ್ಲಾ ಮಟ್ಟದಲ್ಲಿ ಬೇರೆ ಕಮಿಟಿಗಳಿವೆ. ಅವು ಇರತಕ್ಕದ್ದು ಆ್ಯಕ್ಟ್ ಪ್ರಕಾರ. ಮಾನ್ಯ ಸದಸ್ಯರು ಹೇಳಿದ ಹಾಗೆ ಖಾಸಗಿಯವರು ಪರ್ಮಿಟ್‌ನ್ನು ಮಿಸ್‌ಯೂಸ್ ಮಾಡಿದರೆ ಅದನ್ನು ತಪ್ಪಿಸುವುದು ಸರ್ಕಾರದ

ಕರ್ತವ್ಯವಾಗಿದೆ. ಬಹುಮಟ್ಟಿಗೆ ಅನೇಕ ಸಂದರ್ಭಗಳಲ್ಲಿ ಅವನ್ನು ಹಿಡಿದರೂ ಕೂಡ, ಇರುವ ಕಾನೂನಿನ ಚೌಕಟ್ಟಿನಲ್ಲಿಯೇ ಅವರು ಒಂದು ಲೀಸ್ಟನ್ನು ಪ್ರೊಡ್ಯೂಸ್ ಮಾಡುತ್ತಾರೆ. ಆ ಲೀಸ್ಟ್ ಪ್ರಕಾರ ಜನರು ಇದ್ದಾರೆಯೇ ಎಂಬುದನ್ನು ಕಂಡುಹಿಡಿಯಬೇಕಾದರೆ ಅವರ ಮನೆಯ ಅಡ್ರೆಸ್ಸನ್ನು ಹುಡುಕಿ ಕಂಡುಹಿಡಿಯಬೇಕು. ಇದರಲ್ಲಿ ಕಾರ್ಯತಃ ಅನೇಕ ತೊಂದರೆಗಳಿವೆ. ನಾವು ಎಲ್ಲವನ್ನೂ ಸರಿಯಾಗಿ ನೋಡುವುದಕ್ಕಾಗುತ್ತದೆ ಎಂದು ಹೇಳುವುದಿಲ್ಲ. ಇದರಲ್ಲಿ ಲೀಗಲ್ ಡಿಫಿಕಲ್ಟೀಸ್ ಇವೆ, ಪ್ರ್ಯಾಕ್ಟಿಕಲ್ ಡಿಫಿಕಲ್ಟೀಸ್ ಇವೆ, ಈ ರೀತಿ ಅನೇಕ ಡಿಫಿಕಲ್ಟೀಸ್ ಇರುತ್ತವೆ. ಇದರಲ್ಲಿ ಏನಾಗುತ್ತದೆ ಅಂದರೆ, Even one man can enter into a contract with any person who holds a permit on a contract carriage to take the bµ. ಆದರೂ ಈ ಸಂದರ್ಭದಲ್ಲಿ ನಾನು ಮಾನ್ಯ ಸಭೆಗೆ ತಿಳಿಸುವುದು ಇಷ್ಟೆ. ಈಗಿರುವ ಕಾನೂನನ್ನು ಇನ್ನೂ ಬಿಗಿ ಮಾಡುವುದಕ್ಕೆ ಸಾಧ್ಯವೇ ಎಂಬುದನ್ನು ನಾವು ಪರೀಕ್ಷೆ ಮಾಡಿಸುತ್ತೇವೆ.

**ಶ್ರೀ ಪಿ. ಎಂ. ಬಾಂಗಿ**– ಆ ರೀತಿ ಬಿಗಿಯಾದ ಕಾನೂನುಗಳನ್ನು ಮಾಡಿದ ಮೇಲೆ ಅವನ್ನು ಈ ಸದನದ ಮುಂದೆ ಇಡುತ್ತೀರಾ?

**ಶ್ರೀ ಡಿ. ದೇವರಾಜ ಅರಸ್ (ಮುಖ್ಯಮಂತ್ರಿಗಳು)**– ಮೇನ್ ಆ್ಯಕ್ಟ್‌ಗೆ ತಿದ್ದುಪಡಿ ಮಾಡಿದರೂ ಸಹ ಅದು ಸಭೆಯ ಮುಂದೆ ಬರಬೇಕಾಗುತ್ತದೆ. ಇನ್ನೊಂದು ವಿಚಾರ ಏನೆಂದರೆ, ಈ ತಿದ್ದುಪಡಿಯನ್ನು ಬೇಕಾದರೆ ನಾವೂ ಮಾಡಬಹುದು. ಕೇಂದ್ರ ಸರ್ಕಾರದವರೂ ಮಾಡಬಹುದು. ಈಗ ಈ ವಿಷಯ ಕನ್‌ಕರೆಂಟ್ ಲೀಸ್ಟ್‌ನಲ್ಲಿದೆ ಎಂದು ತಿಳಿದಿದ್ದೇನೆ. ಹಿಂದೆ ನಾವು ಇದರ ಬಗ್ಗೆ ತಿದ್ದುಪಡಿ ಮಾಡಬೇಕೆಂದಿದ್ದಾಗ ಕೇಂದ್ರ ಸರ್ಕಾರದವರು ನಾವೇ ಮಾಡುತ್ತೇವೆ, ನೀವು ಮಾಡುವುದು ಬೇಡ ಎಂದು ಹೇಳಿದ್ದರು. ಅಲ್ಲಿಂದೀಚೆಗೆ ಅವರು ಯಾವ ತಿದ್ದುಪಡಿಯನ್ನೂ ಮಾಡಿದ ಹಾಗೆ ಕಾಣುವುದಿಲ್ಲ. Either we will take the permission of the Government of India to make amendments our selves or prevail upon them suitably. ಇದರ ಬಗ್ಗೆ ಯಾವುದೇ ತಿದ್ದುಪಡಿ ಮಾಡಿದರು ಸಹ ಅದನ್ನು ಈ ಸಭೆಯ ಮುಂದೆ ಇಡಬೇಕಾಗುತ್ತದೆ. ಅದಕ್ಕೆ ಕಾನೂನು ಇದೆ. ಅದರಂತೆ ಮಾಡುತ್ತೇವೆ.

# "ಕರ್ನಾಟಕ ರಾಜ್ಯ" ನಾಮಕರಣ ಮೇಲಿನ ಚರ್ಚೆ

## (25ನೇ ಜುಲೈ 1972)

ಶ್ರೀ ಪಿ. ಎಂ. ಬಾಂಗಿ (ಜಮಖಂಡಿ) – ಮಾನ್ಯ ಅಧ್ಯಕ್ಷಣಿಯರೇ, ಈ ದಿವಸ ನಮ್ಮ ಮಾನ್ಯ ಮುಖ್ಯ ಮಂತ್ರಿಗಳು ಈ ಗೊತ್ತುವಳಿಯನ್ನು ಸಭೆಯ ಮುಂದೆ ಮಂಡಿಸಿದುದಕ್ಕಾಗಿ ಅವರಿಗೆ ನನ್ನ ಹೃತ್ಪೂರ್ವಕ ಅಭಿನಂದನೆಗಳನ್ನರ್ಪಿಸುತ್ತೇನೆ ಹಾಗೂ ಇದನ್ನು ಬಹಳ ಸಂತೋಷದಿಂದ ಸ್ವಾಗತಿಸುತ್ತೇನೆ. ಈ ಗೊತ್ತುವಳಿಯಿಂದ ಇಡೀ ಡೆಕ್ಕನ್ ಸಂಸ್ಥಾನಗಳಲ್ಲಿರತಕ್ಕ ಜನರಿಗೆಲ್ಲಾ ಬಹಳ ಆನಂದವಾಗಿದೆ. ಹಿಂದೆ ದಕ್ಷಿಣ ಭಾರತದ ಸಣ್ಣ ಸಣ್ಣ ಸಂಸ್ಥಾನಗಳ ಆಡಳಿತಕ್ಕೊಳಪಟ್ಟಿದ್ದ ಜನರೇನಿದ್ದರು ಅವರು ಒಂದು ಕಡೆ ಮರಾಠಿಯವರು ಮತ್ತು ಮರಾಠಿ ಭಾಷೆಯಿಂದಲೂ, ಇನ್ನೊಂದು ಕಡೆ ಇಂಗ್ರೇಜಿ ಭಾಷೆಯುವರಿಂದಲೂ ಹೀಗೆ ಇವರಿಬ್ಬರ ತುಳಿತದಲ್ಲಿ ಸಿಕ್ಕಿಕೊಂಡು ಕನ್ನಡ ಭಾಷೆ ಹಾಗೂ ಕನ್ನಡಿಗರ ಭವಿಷ್ಯ ನಶಿಸಿಹೋಗಿತ್ತು.

ಹಿಂದೊಂದು ಕಾಲದಲ್ಲಿ ಹರಿದು ಹಂಚಿ ಹೋಗಿದ್ದ ಕರ್ನಾಟಕದ ಕನ್ನಡ ಭಾಗಗಳು ಏನಿದ್ದವು ಅವುಗಳನ್ನು ಒಂದುಗೂಡಿಸಿ ಮತ್ತೆ ಅವುಗಳಿಗೆ ಒಂದು ಜೀವಕಳೆಯನ್ನು ಕೊಡಲು ಹೊರಟಿರತಕ್ಕ ಮಾನ್ಯ ಮುಖ್ಯಮಂತ್ರಿಗಳ ಕಾರ್ಯವನ್ನು ಸುವರ್ಣಾಕ್ಷರಗಳಲ್ಲಿ ಬರೆದಿಡಬೇಕಾಗಿದೆ. ಹಿಂದೆ ಜಮಖಂಡಿ ಸಂಸ್ಥಾನದ ಭಾಗವಾಗಿದ್ದ ಕಾಲಕ್ಕೆ ನಾವು ಸ್ಲೇವರಿಯಲ್ಲಿ ತಲೆ ಎತ್ತುವುದಕ್ಕಾಗುತ್ತಿರಲಿಲ್ಲ. ಅಂಥ ಒಂದು ಕಷ್ಟ ಕಾಲದಲ್ಲಿ ಆ ಸಂಕೋಲೆಯನ್ನು ತಪ್ಪಿಸಿ ನಮಗೆ ಸ್ವಾತಂತ್ರ್ಯ ದೊರಕಿಸಿಕೊಡಲು ಬಹಳ ಶ್ರಮಿಸಿದಂಥ ಅಂದಾನಪ್ಪ ದೊಡ್ಡಮೇಟಿ ಅವರನ್ನು ನಾನು ಸ್ಮರಿಸಬೇಕಾಗಿದೆ. ಅಷ್ಟೇ ಅಲ್ಲದೆ ಅವರು ರಾಜ್ಯಕ್ಕೆ 'ಕರ್ನಾಟಕ' ಎಂಬ ಹೆಸರನ್ನು ಇಡಬೇಕೆಂದು ಸತತ ಒತ್ತಾಯಪಡಿಸುತ್ತಿದ್ದರು. ಅವರ ಆ ಶ್ರಮದ ಜಯಭೇರಿ ಇಂದು ಸಭೆಯಲ್ಲಿ ಮೊಳಗುತ್ತಿದೆ. ಇಂಥ ಒಂದು ಶುಭ ವೇಳೆಯಲ್ಲಿ ನಾನು ವೀರ ದೊಡ್ಡಮೇಟಿಯನ್ನು ಸ್ಮರಿಸಲೇಬೇಕಾಗಿದೆ.

ಹರಿದು ಹಂಚಿಹೋಗಿದ್ದ ಕರ್ನಾಟಕ 1 ನವಂಬರ್ 1956 ರಂದು

ಒಂದುಗೂಡಿದಾಗ ರಾಜ್ಯದ ಹೆಸರನ್ನು ಕರ್ನಾಟಕ ಎಂದು ಇಡಲಿಲ್ಲ. ಅಂದು ಒಂದುಗೂಡಿದ ನಮ್ಮಲ್ಲಿ ಇನ್ನೂ ಭಾವೈಕ್ಯತೆ ಉಂಟಾಗಿದ್ದಿಲ್ಲ ಎಂದು ಅದನ್ನು ಹಿಂದೂಡಿದ್ದರು. ಕರ್ನಾಟಕ ಎಂದು ಹೆಸರಿಡಲು ಸಮಯ ಸನ್ನಿಹಿತವಾಗಿರುವುದನ್ನು ಅರಿತ ನಮ್ಮ ಮಾನ್ಯ ಮುಖ್ಯಮಂತ್ರಿಗಳು ದಿಟ್ಟ ಹೆಜ್ಜೆಯನ್ನು ಇಟ್ಟಿದ್ದಾರೆ. ಇದರ ಶ್ರೇಯಸ್ಸು ಕೀರ್ತಿ ಮಾನ್ಯ ಮುಖ್ಯಮಂತ್ರಿಗಳಿಗೆ ಸಲ್ಲುತ್ತದೆ.

ಕೆಲವರು ಈ ಸಂದರ್ಭದಲ್ಲಿ, ಹೆಸರಿನಲ್ಲಿ ಏನಿದೆ ಎಂದು ಕೇಳುತ್ತಿದ್ದಾರೆ? ನಾಮ ಮತ್ತು ರೂಪ ಈ ಎರಡಕ್ಕೂ ಬಹಳ ಪ್ರಾಮುಖ್ಯತೆ ಮತ್ತು ಹತ್ತಿರದ ಸಂಬಂಧವಿದೆ. 1956 ರಲ್ಲಿ ರಾಜ್ಯಗಳ ಪುನರ್ವಿಂಗಡಣೆಯಿಂದ ನಮ್ಮ ರಾಜ್ಯಕ್ಕೆ ಹಿಂದಿನ ರೂಪು ಬಂದಿತ್ತು. ಆದರೆ ಅದಕ್ಕೆ ತಕ್ಕ ಹೆಸರು ಮಾತ್ರ ಬಂದಿರಲಿಲ್ಲ. ಆ ಹೆಸರು ಈಗ ಬರುತ್ತಿದೆ. ಈ ದಿವಸ ಸಭಾಧ್ಯಕ್ಷತೆ ವಹಿಸಿರತಕ್ಕ ಮಾನ್ಯ ಅಧ್ಯಕ್ಷಣೀಯರು ಸಾಕ್ಷಾತ್ 'ಅಕ್ಕಮಹಾದೇವಿಯಂತೆ' ಅಧ್ಯಕ್ಷ ಪೀಠದಲ್ಲಿ ವಿರಾಜಿಸುತ್ತಿದ್ದಾರೆ. ಅವರು ಈ ಸಂದರ್ಭದಲ್ಲಿ ನನಗೆ ನಾಲ್ಕು ಮಾತುಗಳನ್ನಾಡುವುದಕ್ಕೆ ಅವಕಾಶ ಮಾಡಿಕೊಟ್ಟಿದ್ದಕ್ಕೆ ಅವರಿಗೆ ನನ್ನ ಧನ್ಯವಾದಗಳನ್ನರ್ಪಿಸಿ ನಾಲ್ಕು ಮಾತುಗಳನ್ನು ಮುಗಿಸುತ್ತೇನೆ.

**2nd August, 1972**

**Sri P. M. Bangi (Jamakhandi)-** Will the Minister for Education be pleased to State:-

a) whether Government is aware that pension orders to the retired primary school teachers of all the merged Deccan States, including Mudhol, Jamkhandi, Sangli have not been passed so far;

b) if so, the reasons for the same;

c) whether there is any proposal before Government to issue orders for the payment of pensions to the above teachers?

**Sri A.R. Badarinarayana (Minister for Education)**

a) Yes.

b) The service condition of teachers of ex-princely States of Mudhol, Jamkhandi, Sangli, etc., were governed by Bombay Civil Service Rules. Subsequently these schools were taken over by District School Boards and again all the schools run by the District School Boards/Municipal School Boards have been taken over by Government. The pension case of these teachers are held up for want of verification of C.P.F. contributed by the former District School Board and crediting the recovery of the same to Government.

Yes.

**ಶ್ರೀ ಪಿ. ಎಂ. ಬಾಂಗಿ**– ಮುಧೋಳ, ಜಮಖಂಡಿ, ಸಾಂಗ್ಲಿ ಮುಂತಾದ ಸಂಸ್ಥಾನಗಳ ಪೆನ್ಷನ್ ಹೊಂದಿದ ಶಿಕ್ಷಕರು ಎಷ್ಟು? ಆ ಬಗ್ಗೆ ಪರಿಶೀಲನೆ ಮಾಡಿದ್ದೀರಾ ಹೇಗೆ? ಮತ್ತು ಅವರ ಅಪ್ಲಿಕೇಷನ್ಸ್ ನಾಲ್ಕು ವರ್ಷವಾದರೂ ಇನ್ನೂ ಹಾಗೆಯೇ ಇರುವುದು ತಮ್ಮ ಗಮನಕ್ಕೆ ಬಂದಿದೆಯೋ ಹೇಗೆ?

**ಶ್ರೀ ಎ.ಆರ್. ಬದರಿನಾರಾಯಣ**– ಎಷ್ಟು ಜನರಿದ್ದಾರೆ ಎನ್ನುವ ಅಂಕಿ ನನ್ನ ಹತ್ತಿರ ಇಲ್ಲ. ಕೆಲವು ಸಂದರ್ಭಗಳಲ್ಲಿ ನಿಧಾನವಾಗಿರುವುದಕ್ಕೆ ಕಾರಣವೇನೆಂದರೆ ಪ್ರಾವಿಡೆಂಟ್ ಫಂಡ್ ಹಣವನ್ನು ಹಿಂದಿನ ಡಿಸ್ಟ್ರಿಕ್ಟ್ ಸ್ಕೂಲ್ ಬೋರ್ಡ್‌ನವರು ಕೊಡಬೇಕು. ಆ ವರೆಗೆ ಏನೂ ಮಾಡುವುದಕ್ಕಾಗುವುದಿಲ್ಲ.

ಶ್ರೀ ಪಿ. ಎಂ. ಬಾಂಗಿ– ಸುಮಾರು ನಾಲ್ಕು ವರ್ಷವಾಯಿತು. ಇನ್ನೂವರೆಗೆ ತೀರ್ಮಾನವಾಗದೇ ಇರುವುದರಿಂದ ಅವರ ಮೇಂಟೆನೆನ್ಸ್ ಬಹಳ ಕಠಿಣವಾಗಿದೆ. ಆದುದರಿಂದ ತಾವು ಕೂಡಲೇ ಅವರ ಪೆನ್ಷನ್ ಫಿಕ್ಸ್ ಮಾಡಿ ಕೊಡುತ್ತೀರೋ ಹೇಗೆ? ಆ ವರೆಗೆ ಅಡಹಾಕ್ ಪೇಮೆಂಟ್ ಕೊಡುತ್ತೀರಾ?

ಶ್ರೀ ಎ.ಆರ್. ಬದರಿನಾರಾಯಣ– ಡಿಸ್ಟ್ರಿಕ್ಟ್ ಸ್ಕೂಲ್ ಬೋರ್ಡ್‌ನಿಂದ ಬರಬೇಕಾದ್ದು ಬರದೆ ಇರುವುದರಿಂದ ನಿಧಾನವಾಗಿದೆ. ಅದನ್ನು ಆದಷ್ಟು ಬೇಗ ಮಾಡುವುದಕ್ಕೆ ಪ್ರಯತ್ನ ಮಾಡುತ್ತೇವೆ.

ಶ್ರೀ ಪಿ. ಎಂ. ಬಾಂಗಿ– ತಾವು ಅವರಿಗೆ ಏನಾದರೂ ಅಡ್ವಾನ್ಸ್ ಪೇಮೆಂಟ್ ಮಾಡುತ್ತೀರಾ?

## ಮತಕ್ಷೇತ್ರ ಸಂಬಂಧಿತ ಬಿಡಿ ಪ್ರಶ್ನೆಗಳು

### 5ನೇ ಆಗಸ್ಟ್ 1972

**Sri P. M. Bangi (Jamkhandi)-** Will the Minister for Labour be pleased to State-

a) whether the sites for bus stands at Banahatti, Teradal, Mahalingapur and Lokapur in Bijapur District were acquired and teken posession of by M.S.R.T.C. since long;

b) if so, the reasons for not taking up construction of these bus stands so far;

c) the reasons for not issuing orders for constructing these bus stands through contractors or by taking up the work departmentally;

d) whether the Government is aware that the foundation stone at Lokapur Bus Stand site was laid more than 5 years ago by Sri D. Devaraj Urs, the then Transport Minister?

**Sri S.M. Krisnha (Minister for Industries) on behalf of Sri Azeez Sait (Minister for Labour)**

a) Yes.

b) (i) Banahatti - A permanent shelter is already constructed during 1961 and it is in use since then.

ii) Teradal - An estimate was sanctioned for Rs. 1,12,000 during 1967-68. The Contractor to whom the work was entrusted absconded. His agency is terminated. The estimate is since recast and fresh tenders have been invited.

iii) Mahlingapur - An estimate was sanctioned for Rs. 1,11,200 during 1967-68, The contractor to whom the work was entrusted absconded. His agency is terminated. The estimate is since recast and work is recently taken up.

iv) Lokapur - The work could not be taken up owing to paucity of funds.

c) As replies to para (b) above.

d) Yes.

ಶ್ರೀ ಪಿ. ಎಂ. ಬಾಂಗಿ– ಬನಹಟ್ಟಿಯಲ್ಲಿರುವ ಸೆಡ್ ಪ್ರವಾಸಿಗರು ಬಂದು ಇಳಿದುಕೊಳ್ಳುವುದಕ್ಕೆ ಸಾಕಾಗುತ್ತಿಲ್ಲವಾದ್ದರಿಂದ ಹೊಸ ಬಸ್‌ಸ್ಟ್ಯಾಂಡ್ ಕಟ್ಟಲು ಸೈಟ್ ತೆಗೆದುಕೊಂಡಿದ್ದೀರಿ. ಆದರೂ ಇನ್ನೂ ಏತಕ್ಕೆ ಇದುವರೆಗೆ ಬಸ್‌ಸ್ಟ್ಯಾಂಡ್ ಕಟ್ಟಿಸಿಲ್ಲ?

ತೇರದಾಳದಲ್ಲಿ ಬಸ್‌ಸ್ಟ್ಯಾಂಡ್ ಕಟ್ಟಿಸಲು ಎಸ್ಟಿಮೇಟ್ ಮಂಜೂರು ಮಾಡಿದ ನಂತರ ಪುನಃ ರಿವೈಸ್ಡ್ ಎಸ್ಟಿಮೇಟನ್ನು ಕಡಿಮೆ ಅಂದಾಜಿಗೆ ಮಾಡುವುದಕ್ಕೆ ಕಾರಣವೇನು?

ಮಹಾಲಿಂಗಪುರದಲ್ಲಿ ಬಸ್‌ಸ್ಟ್ಯಾಂಡ್ ಕಟ್ಟಲು ರಿವೈಸ್ಡ್ ಎಸ್ಟಿಮೇಟ್ ಮಾಡಿದ್ದರೆ ಅದರ ಅಂದಾಜು ಮೊಬಲಗು ಎಷ್ಟು ಎಂದು ಹೇಳಬೇಕು?

ರೋಕಾಪುರದಲ್ಲಿ ಬಸ್‌ಸ್ಟ್ಯಾಂಡ್ ಕಟ್ಟಲು ಆಸ್ಥಿಭಾರ ಶಿಲೆಯನ್ನು ಹಿಂದೆ ಟ್ರಾನ್ಸ್‌ಪೋರ್ಟ್ ಮಂತ್ರಿಗಳಾಗಿದ್ದ ಶ್ರೀ ದೇವರಾಜ ಅರಸ್ ಅವರು ಹಾಕಿದ್ದರು. ಆ ಕಾರಣದಿಂದ ಅಲ್ಲಿ ಬಸ್‌ಸ್ಟ್ಯಾಂಡ್ ಬರುತ್ತದೆಂದು ಜನರು ಆಶೆಪಟ್ಟಿದ್ದರು. ಅದು ಒಂದು ಸೆಂಟರ್ ಜಾಗವಾಗಿರುವುದರಿಂದ ಅಲ್ಲಿ ಇನ್ನೂ ಕಟ್ಟದಿರುವುದಕ್ಕೆ ಕಾರಣವೇನು?

ಶ್ರೀ ಎಸ್.ಎಂ. ಕೃಷ್ಣ– ಬನಹಟ್ಟಿಯಲ್ಲಿ 1961ನೆ ಇಸವಿಯಲ್ಲಿ ಒಂದು ಶಾಶ್ವತ ಷೆಲ್ಟರನ್ನು ಕಟ್ಟಿಸಿದೆ. ಅದರ ಉಪಯೋಗವನ್ನು ಜನರು ಪಡೆಯುತ್ತಿದ್ದಾರೆ. ಅಲ್ಲಿಗೆ ಒಂದು ಬಸ್‌ಸ್ಟ್ಯಾಂಡ್ ಬೇಕು ಎಂದು ತಾವು ಸರ್ಕಾರದ ಮುಂದೆ ಒತ್ತಾಯಪೂರ್ವಕವಾಗಿ ಪ್ರತಿಪಾದಿಸಿದ್ದೀರಿ.

ತೇರದಾಳದಲ್ಲಿ 1,12,000 ರೂಪಾಯಿಗಳ ಅಂದಾಜೊಂದನ್ನು 1967–68 ರಲ್ಲಿ ಮಂಜೂರ್ಮಾಡಲಾಗಿತ್ತು. ಆ ಕೆಲಸವನ್ನು ವಹಿಸಿದ್ದ ಕಾಂಟ್ರಾಕ್ಟರ್ ದುರಾದೃಷ್ಟವಶಾತ್ ಕಣ್ಮರೆಯಾಗಿದ್ದಾರೆ. ಈ ಎಸ್ಟಿಮೇಟನ್ನು ರೀಕಾಸ್ಟ್ ಮಾಡಿ ಟೆಂಡರ್ ಕರೆದಿದ್ದಾರೆ. ಟೆಂಡರ್ ಬಂದಮೇಲೆ ಕೆಲಸ ವಹಿಸಿಕೊಟ್ಟು ಕೆಲಸ ಮಾಡಿಸುತ್ತೇವೆ.

ಮಹಾಲಿಂಗಪುರದಲ್ಲಿ 1967-68 ರಲ್ಲಿ 1,11,200 ರೂಪಾಯಿಗಳ ಅಂದಾಜನ್ನು ಬಸ್‌ಸ್ಟ್ಯಾಂಡ್ ಕಟ್ಟಲು ಮಂಜೂರು ಮಾಡಿ ಕೆಲಸ ವಹಿಸಲಾಗಿದ್ದಿತು. ಆದರೆ ಇಲ್ಲಿಯೂ ಕಾಂಟ್ರಾಕ್ಟರ್ ಕಣ್ಮರೆಯಾಗಿದ್ದಾರೆ. ಇವೆರ್ಡೂ ಕೆಲಸದ ಕಾಂಟ್ರಾಕ್ಟರ್ ಒಬ್ಬರೇ ಇರಬಹುದೆಂದು ನಾನು ಊಹೆ ಮಾಡುತ್ತೇನೆ. ಈಗ ಎಸ್ಟಿಮೇಟ್ ರೀಕಾಸ್ಟ್ ಮಾಡಿ ಕೆಲಸವನ್ನು ಪ್ರಾರಂಭ ಮಾಡಿದ್ದೇವೆ.

ಇನ್ನು ನಮ್ಮ ರಾಜ್ಯದಲ್ಲಿ ಬಸ್‌ಸ್ಟ್ಯಾಂಡ್‌ಗಳನ್ನು ಕಟ್ಟಿಸಲು ಆದ್ಯತೆ ಕೊಡುವುದಕ್ಕೋಸ್ಕರ ಒಂದು ಉಪಸಮಿತಿಯನ್ನು ಸಾರಿಗೆ ಇಲಾಖೆಯವರು ನೇಮಕ ಮಾಡಿದ್ದಾರೆ. ನಮ್ಮ ರಾಜ್ಯದಲ್ಲಿ ಎಲ್ಲೆಲ್ಲಿ ಬಸ್‌ಸ್ಟ್ಯಾಂಡ್‌ಗಳನ್ನು ಕಟ್ಟಲು ಮೊದಲು ಆದ್ಯತೆ ಕೊಡಬೇಕೆಂದು ಅವರು ತೀರ್ಮಾನ ಮಾಡುತ್ತಿದ್ದಾರೆ. ಆ ರೀತಿ ತೀರ್ಮಾನ ಮಾಡತಕ್ಕಂಥ ಸಮಯದಲ್ಲಿ ಬನಹಟ್ಟಿ, ಲೋಕಾಪುರ ಪ್ರದೇಶಗಳನ್ನು ಅವರು ಗಮನದಲ್ಲಿ ಇಟ್ಟುಕೊಂಡು ತೀರ್ಮಾನ ಮಾಡುತ್ತಾರೆ.

## ಟಿಪ್ಪಣಿ ರೂಪದ ಬಿಡಿ ಪ್ರಶ್ನೆಗಳು

### 14ನೇ ಆಗಸ್ಟ್ 1972

**Sri P. M. Bangi (Jamkhandi)-** Will the Minister for Industries be pleased to State-

a) whether the licences for all powerlooms in Bijapur District are issued on the condition that only white cloths should be produced on powerlooms;

b) whether the Government is aware that about 1,300 powerlooms owned by Master Weavers and Co-operative societies in Jamkhandi taluka are producing coloured sarees

and are thus contravening the order No. CER/10/66 dated 9th November 1966 issued by Textile Commissioner under Essential Commodities Act, 1955.

c) the reasons for not taking penal or other action against the powerloom owners and the office bearers of those Societies for contravening the orders of Government?

Sri S.M. Krishna (Minister for Industries)-

a) No. The restriction is that coloured sarees should not be manufactured on powerlooms.

b) Yes.

c) Instructions have been issued to the officers concerned to take effective steps to prohibit, if necessary by invoking the provisions of penal action under law.

ಶ್ರೀ ಪಿ. ಎಂ. ಬಾಂಗಿ– (ಇ) ಗೆ ಉತ್ತರವಾಗಿ, ಸಂಬಂಧಪಟ್ಟ ಅಧಿಕಾರಿಗಳಿಗೆ ಸೂಚನೆಗಳನ್ನು ನೀಡಲಾಗಿದೆ ಎಂದು ಹೇಳಿದ್ದೀರಿ. ಯಾವ ಯಾವ ಅಧಿಕಾರಿಗಳಿಗೆ ಮತ್ತು ಯಾವಾಗ ಸೂಚನೆಗಳನ್ನು ಕಳುಹಿಸಿದ್ದೀರಿ ಮತ್ತು ಸಂಬಂಧಪಟ್ಟ ಅಧಿಕಾರಿಗಳು ಇದುವರೆಗೆ ಕ್ರಮ ಏತಕ್ಕೆ ಕೈಗೊಂಡಿಲ್ಲ?

ಶ್ರೀ ಎಸ್.ಎಂ. ಕೃಷ್ಣ– ಟೆಕ್ಸ್‌ಟೈಲ್ ಕಮೀಷನರ್ ಅವರ ಆಜ್ಞೆ ಏನಿದೆ ಅದನ್ನು ಜಾರಿಗೆ ತರಬೇಕು ಎಂಬ ನಿರ್ದೇಶನವನ್ನು ಬಿಜಾಪುರ ಜಿಲ್ಲಾಧಿಕಾರಿಯವರಿಗೆ ತಾ. 17.4.1972 ರಂದು ಕಳುಹಿಸಿಕೊಟ್ಟಿದ್ದೇವೆ.

ಶ್ರೀ ಪಿ. ಎಂ. ಬಾಂಗಿ– ಆ ಆಜ್ಞೆ ಆಗಿ 4 ತಿಂಗಳು ಆಯಿತು. ಹೀಗಿದ್ದರು ಕೂಡ ಆಜ್ಞೆಯನ್ನು ಉಲ್ಲಂಘನೆ ಮಾಡಿದವರ ಮೇಲೆ ಏತಕ್ಕೆ ಕ್ರಮ

ತೆಗೆದುಕೊಳ್ಳಲಿಲ್ಲ? ಇದರಿಂದಾಗಿ ಅಲ್ಲಿ ಸಾವಿರಾರು ಜನರು ನಿರುದ್ಯೋಗಿಗಳಾಗಿ ಸಾಯುತ್ತಿರುವುದು ತಮ್ಮ ಗಮನಕ್ಕೆ ಬಂದಿದೆಯೇ?

**ಶ್ರೀ ಎಸ್.ಎಂ. ಕೃಷ್ಣ–** ಹೈಕೋರ್ಟಿನವರಿಂದ ಸ್ಟೇ ಆರ್ಡರು ಬಂದಿದೆ. ಆದ್ದರಿಂದ ಆ ಆಜ್ಞೆಯನ್ನು ಸಂಪೂರ್ಣವಾಗಿ ಜಾರಿಗೆ ತರುವುದಕ್ಕೆ ಸಾಧ್ಯವಾಗಿಲ್ಲ.

**ಶ್ರೀ ಪಿ.ಎಂ. ಬಾಂಗಿ–** ಹೈಕೋಟಿನಲ್ಲಿ ಪಿಟಿಷನ್ ನಂಬರು 1102 ಮತ್ತು 1115 ಈ ಎರಡು ಪಿಟಿಷನ್‌ಗಳ ಬಗ್ಗೆ ಮಾತ್ರ ಕ್ರಮ ತೆಗೆದುಕೊಂಡಿದ್ದಾರೆ. ಉಳಿದವುಗಳ ಬಗ್ಗೆ ಏತಕ್ಕೆ ಕ್ರಮ ತೆಗೆದುಕೊಂಡಿಲ್ಲ ?

**ಶ್ರೀ ಎಸ್.ಎಂ. ಕೃಷ್ಣ–** ಹೈಕೋರ್ಟಿನ ಸ್ಟೇ ಆರ್ಡರ್ ಈ ಎರಡು ಪಿಟಿಷನ್‌ದಾರರಿಗೆ ಮಾತ್ರ ಅನ್ವಯವಾಗುತ್ತದೆಯೇ ಅಥವಾ ಸಾರ್ವತ್ರಿಕವಾಗಿ ಎಲ್ಲರಿಗೂ ಅನ್ವಯಿಸುತ್ತದೆಯೇ ಎನ್ನುವ ಬಗ್ಗೆ ಸರ್ಕಾರ ಲಾ ಡಿಪಾರ್ಟಮೆಂಟಿನ ಅಭಿಪ್ರಾಯ ಕೇಳಿತ್ತು. ಅದಕ್ಕೆ ಲಾ ಡಿಪಾರ್ಟಮೆಂಟು ಸ್ಟೇ ಆರ್ಡರು ಸಾರ್ವಜನಿಕವಾಗಿದೆ ಎಂದು ಅಭಿಪ್ರಾಯ ಕೊಟ್ಟಿದೆ. ಈಗಾಗಲೇ ಸ್ಟೇ ಆರ್ಡರನ್ನು ವೆಕೇಟ್ ಮಾಡುವುದಕ್ಕೆ ಸರ್ಕಾರ ಕೌಂಟರ್ ಅಫಿಡವಿಟ್ ಹಾಕಿದೆ. ಇದಕ್ಕೆ ಕೇಂದ್ರ ಸರ್ಕಾರದ ಟೆಕ್ಸ್‌ಟೈಲ್ ಕಮೀಷನರೂ ಪಾರ್ಟಿ ಆಗಿದ್ದಾರೆ. ಹೈಕೋರ್ಟ್ ರಿಟ್ ಪಿಟಿಷನ್ನಿಗೆ ನೀವೂ ಅಫಿಡವಿಟ್ ಹಾಕಬೇಕು ಎಂದು ನಾವು ಅವರನ್ನು ಕೇಳಿದ್ದೇವೆ. ಅವರು ಕೌಂಟರ್ ಅಫಿಡವಿಟ್ ಕಳುಹಿಸಿಕೊಟ್ಟಿದ್ದಾರೆ. ಆದಷ್ಟು ತೀವ್ರವಾಗಿ ಸ್ಟೇ ಆರ್ಡರ್ ವೆಕೇಟ್ ಮಾಡಿಸಬೇಕೆಂದು ನಾವು ಸರ್ಕಾರಿ ವಕೀಲರಿಗೆ ತಿಳಿಸಿದ್ದೇವೆ.

## ಬರಗಾಲದ ಮೇಲಿನ ಚರ್ಚೆ

## 16ನೇ ಆಗಸ್ಟ್ 1972

**ಶ್ರೀ ಪಿ. ಎಂ. ಬಾಂಗಿ (ಜಮಖಂಡಿ)–** ಮಾನ್ಯ ಅಧ್ಯಕ್ಷಿಣಿಯವರೇ, ಶ್ರೀಯುತರುಗಳಾದ ಎಸ್.ವೈ. ಪಾಟೀಲ, ಆರ್.ಎಸ್. ಪಾಟೀಲ, ಜೆ.ಎಲ್.

ಕಬಾಡಿಯವರು ಅವರ ಕ್ಷೇತ್ರದ, ತಾಲೂಕಿನ ಕ್ಷಾಮ ಪರಿಸ್ಥಿತಿ ಬಗ್ಗೆ ಹೇಳಿದರೇ ವಿನಃ ನನ್ನ ಜಮಖಂಡಿ ಕ್ಷೇತ್ರದ 3 ತಾಲೂಕಿನಲ್ಲಿ ಕ್ಷಾಮ ಪರಿಸ್ಥಿತಿ ಏನು ಇದೆ ಎಂದು ಅವರು ಗಮನಿಸಿಲ್ಲ ಎಂದು ಕಾಣುತ್ತದೆ. ನಮ್ಮ ಕ್ಷೇತ್ರದಲ್ಲಿ ಜನಗಳಿಗೆ ಸರಿಯಾದ ಕಾಳು ಕಡಿ ದೊರೆಯುತ್ತಿಲ್ಲ. ಅಲ್ಲಿ ಸೊಸೈಟಿಗಳೆಲ್ಲಾ ಅವ್ಯವಸ್ಥೆಯಾಗಿ ನಿರ್ನಾಮವಾಗಿವೆ. ಆದುದರಿಂದ ಸರ್ಕಾರಿ ಅಧಿಕಾರಿಗಳನ್ನು ನೇಮಿಸಿ ಸರ್ಕಾರದ ವತಿಯಿಂದ ಜನರಿಗೆ ಕಾಳುಕಡಿ ಸರಿಯಾಗಿ ಸಿಗುವಂತೆ ಫೇರ್‌ಪ್ರೈಸ್ ಷಾಪ್ ತೆರೆಯಬೇಕೆಂದು ವಿನಂತಿ ಮಾಡಿಕೊಳ್ಳುತ್ತೇನೆ.

ಇನ್ನು ನಮ್ಮ ಕಡೆ ಬರಗಾಲ ಪರಿಸ್ಥಿತಿ ಇರುವುದರಿಂದ ಅಲ್ಲಿ ರಿಲೀಫ್ ಫಂಡಿನಲ್ಲಿ ಕೂಲಿ ಕೆಲಸ ಮಾಡಿಸುತ್ತಿದ್ದಾರೆ. ಅಲ್ಲಿ ಮಣ್ಣು ಅಗೆಯುವ ಕೆಲಸ ಮಾಡಿಸಬೇಕಾದರೆ 10 ಅಡಿ ಉದ್ದ, 10 ಅಡಿ ಅಗಲ, 1 ಅಡಿ ಮಣ್ಣು ತೆಗೆದರೆ ಎಡರ್ೂವರಿ ರೂಪಾಯಿ ಕೂಲಿ ಕೊಡುತ್ತಾರೆ, ಇದು ಬಹಳ ಕಡಿಮೆ. ಏತಕ್ಕೆಂದರೆ ಈ ಕೆಲಸ ಎಲ್ಲರ ಕೈಯಲ್ಲೂ ಮಾಡುವುದಕ್ಕಾಗುವುದಿಲ್ಲ. ಅಲ್ಲಿ ನೇಕಾರರು ತಮ್ಮ ಮನೆಯ ಕೆಲಸ ಮಾಡಿಕೊಂಡು ಅದರ ಜೊತೆಗೆ ಈ ಕೆಲಸವನ್ನೂ ಮಾಡಿಕೊಂಡು ಹೋಗುವುದು ಕಷ್ಟ. ಆದುದರಿಂದ ಈ ಕೂಲಿ ಬಹಳ ಕಡಿಮೆ ಇರುವುದರಿಂದ ಇದನ್ನು ಎಡರ್ೂವರಿ ರೂಪಾಯಿಯಿಂದ 3 ರೂಪಾಯಿಗೆ ಏರಿಸಬೇಕೆಂದು ಹೇಳುತ್ತೇನೆ. ನೀವು ವಿಜಾಪೂರ ಮತ್ತು ಗುಲ್ಬರ್ಗಾಕ್ಕೆ ಯಾವರೀತಿ ಗಮನ ಕೊಟ್ಟಿರೋ ಅದೇರೀತಿ ನಮ್ಮ ಕ್ಷೇತ್ರಕ್ಕೂ ಬಂದು ಅಲ್ಲಿನ ಜನಗಳ ಪರಿಸ್ಥಿತಿ ನೋಡಿಕೊಂಡು ತಕ್ಕ ಪರಿಹಾರ ಕೊಡುವಂತೆ ಮಾಡಬೇಕು ಎಂದು ನಾನು ತಮ್ಮಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ.

## ಕಂದಾಯ ಇಲಾಖೆಯ ಮೇಲಿನ ಚರ್ಚೆ

### 18ನೇ ಆಗಸ್ಟ್ 1972

ಶ್ರೀ ಪಿ. ಎಂ. ಬಾಂಗಿ (ಜಮಖಂಡಿ)– ಮಾನ್ಯ ಅಧ್ಯಕ್ಷಿಣಿಯವರೇ, ಈ ಸದನದ ಮುಂದೆ ಕಂದಾಯ ಮಂತ್ರಿಗಳು ಇಟ್ಟಿರತಕ್ಕ ಈ ಕ್ರಾಂತಿಕರ ಬಿಲ್ಲಿನಲ್ಲಿ

ಹಲಕೆಲವು ದೋಷಗಳಿದ್ದು, ಅವನ್ನು ತಿದ್ದಿ, ಸರಿಪಡಿಸಿ ಪುನರಪಿ ಈ ಸದನದ ಮುಂದೆ ಈ ಬಿಲ್ಲನ್ನು ಇಟ್ಟರೆ ಬಡ ಜನರಿಗೂ ಸಹ ಕಲ್ಯಾಣವಾಗಬಹುದು.

ಇಲ್ಲಿ (2) ನೇ ಕಲಂಗೆ ಸೂಚಿಸಿರತಕ್ಕ ತಿದ್ದುಪಡಿಯಲ್ಲಿ 11 ನೇ ಕಲಂ ಬಗ್ಗೆ ಹೇಳಿರತಕ್ಕ ವಿಷಯ. ರೈತನು ವ್ಯವಸಾಯ ಮಾಡುವ ಭೂಮಿ ಅವನು ವಾಸಿಸುವ ಊರಿಗೆ 16 ಕಿಲೋ ಮೀಟರ್ ಅಥವಾ 10 ಮೈಲುಗಳೊಳಗೇ ಇರಬೇಕೆಂದು ಎಂದು ಏನು ಹೇಳಿದ್ದಾರೆ, ಇದು ಹಿಂದೆ 1961 ರಲ್ಲಿ ಖಾಯಂ ಮಾಡಿದ ಶಾಸನದಲ್ಲಿ ಇರಲಿಲ್ಲ. ಹಾಗೇ ಮುಂಬೈ ಅಗ್ರಿಕಲ್ಚರ್ ಆ್ಯಂಡ್ ಟೆನನ್ಸಿ ಆ್ಯಕ್ಟ್ 1948ರ ಕಾಯ್ದೆಯಲ್ಲೂ ಇಂಥ ನಿರ್ಬಂಧವಿರಲಿಲ್ಲ. ಆದುದರಿಂದ ಈ ಕಾಯ್ದೆಯಿಂದ, ಈ ನಿರ್ಬಂಧವನ್ನು ತೆಗೆದು ಹಾಕಬೇಕು. ಈ ನಿರ್ಬಂಧ ಇದ್ದರೆ ಮಾನ್ಯ ಲೋಕೋಪಯೋಗಿ ಸಚಿವರಾದ ಶ್ರೀ ಎಚ್.ಎಂ. ಚನ್ನಬಸಪ್ಪನವರು ಗ್ರಾಮಾಂತರ ಪ್ರದೇಶಗಳಿಗೆ ಒದಗಿಸಿರತಕ್ಕ ರೂರಲ್ ಕಮ್ಯುನಿಕೇಷನ್ ವ್ಯವಸ್ಥೆ ನಿರುಪಯುಕ್ತವಾಗುತ್ತದೆ. ಪ್ರತಿಯೊಂದು ತಾಲೂಕಿನಲ್ಲಿ ಈ ದೂರವನ್ನು ಗಮನಕ್ಕೆ ತೆಗೆದುಕೊಳ್ಳದೆ, ಭೂಮಿ ಎಲ್ಲೇ ಇರಲಿ, ಅದು ಮನೆಗೆ ಎಷ್ಟೇ ದೂರದಲ್ಲಿರಲಿ ಆ ವ್ಯವಸಾಯವನ್ನು ಪರ್ಸನಲ್ ಕಲ್ಟಿವೇಷನ್ ಎಂತಲೇ ಬಾವಿಸತಕ್ಕದ್ದು.

ಇನ್ನು ಇದೇ (2) ನೇ ಕಲಂಗೆ ಮಾಡಿರತಕ್ಕ ತಿದ್ದುಪಡಿಯಲ್ಲಿ ಕ್ಲಾಜ್ 12 ರಲ್ಲಿ "ಫ್ಯಾಮಿಲಿ" ಎಂದರೇನು ಎಂಬುದರ ವ್ಯಾಖ್ಯಾನ ಇದೆ. ಅದರಲ್ಲಿ ಒಂದು ಕುಟುಂಬ ಎಂದರೆ ಗಂಡ ಹೆಂಡತಿ ಮತ್ತು ಮೂರು ಜನ ಮೈನರ್ ಮಕ್ಕಳು ಅಂದರೆ ಅಪ್ರಾಪ್ತ ವಯಸ್ಕರು ಇಲ್ಲವೇ ಅಜ್ಞಾನ ವಯಸ್ಸಿನವರು. ಇಂಥ ಕುಟುಂಬಕ್ಕೆ ಇರತಕ್ಕ ಪರಮಾವಧಿ ಭೂಮಿಯ ವಿಸ್ತೀರ್ಣ 10 ಎಕರೆಗಳೆಂದು ನಿರ್ಧಾರ ಮಾಡಲಾಗಿದೆ. ಆದರೆ ಕಲಂ 6 ರಲ್ಲಿ ಸೀಲಿಂಗಿನ ಪರಮಾವಧಿ ವಿಸ್ತೀರ್ಣವನ್ನು ಹೆಳುತ್ತಾ ಒಂದು ಕುಟುಂಬದಲ್ಲಿ ಐದಕ್ಕಿಂತ ಹೆಚ್ಚು ಜನರಿದ್ದರೆ ಪ್ರತಿಯೊಬ್ಬನೂ ಎರ್ಡು ಯೂನಿಟ್‌ಗಳ ಭೂಮಿಯನ್ನು ಅಂದರೆ ಎರಡು ಎಕರೆಗಳನ್ನು ಇಟ್ಟುಕೊಳ್ಳಬಹುದು. ಹಾಗೆ ಅದರ ಪರಮಾವಧಿ 10 ಎಕರೆಗಳಿಗಿಂತ ಜಾಸ್ತಿ ಇರಕೂಡದೆಂದು ಹೇಳಿದೆ. ಆದರೆ ಫ್ಯಾಮಿಲಿ ಎಂಬ ವ್ಯಾಖ್ಯೆಯಲ್ಲಿ ಇದೇ ವಿಚಾರವನ್ನು ವಿವರವಾಗಿ ತಿಳಿಸಿಲ್ಲ. ಇಲ್ಲಿ ಐದು ಜನರಿಗಿಂತ ಹೆಚ್ಚಾಗಿದ್ದಲ್ಲಿ ಪ್ರತಿಯೊಬ್ಬರೂ ಎರ್ಡು ಯುನಿಟ್ ಭೂಮಿಯನ್ನು

ಇಟ್ಟುಕೊಳ್ಳಬಹುದೆಂಬುದನ್ನು ಸೆಪರೇಟಾಗಿ ತಿಳಿಸಿಲ್ಲ. ಆದ್ದರಿಂದ ಇಲ್ಲಿ ಒಂದೊಂದು ಕಲಂನಲ್ಲಿ ಒಂದೊಂದು ರೀತಿ ಅರ್ಥವಾಗುತ್ತದೆ. ಆದ್ದರಿಂದ ಈ ಕಲಂನಲ್ಲಿ ಒಂದು ಕುಟುಂಬದಲ್ಲಿ ಐದಕ್ಕಿಂತ ಹೆಚ್ಚು ಅಪ್ರಾಪ್ತ ವಯಸ್ಕರಿದ್ದರೆ ಇಲ್ಲವೆ ಅಜ್ಞಾನ ವಯಸ್ಸಿನವರಿದ್ದರೆ ಅವರಿಗೂ ಒಬ್ಬೊಬ್ಬರಿಗೆ ಎರ್ಡಸ್ಟರ್ ಯುನಿಟ್ ಭೂಮಿಯನ್ನು ಇಟ್ಟುಕೊಳ್ಳುವುದಕ್ಕೆ ಅವಕಾಶವಿದೆ ಎಂಬುದನ್ನು ಖುಲ್ಲಾ ತಿಳಿಸಬೇಕು. ಈ ಕಾಯ್ದೆದಲ್ಲಿ ಅದನ್ನು ಸೇರಿಸಬೇಕು ಇಲ್ಲವಾದರೆ ಮುಂದೆ ಇದರಿಂದ ಅನೇಕ ತೊಂದರೆಗಳಾಗುತ್ತವೆ.

ಭೂಮಾಲೀಕರಿಗೂ ಮತ್ತು ಕುಳಗಳಿಗೂ ಇನ್ನು ಮುಂದೆ ಏನು ಸಂಬಂಧ ಇರಬೇಕು ಅನ್ನುವುದನ್ನು ಇಲ್ಲಿ ಸ್ಪಷ್ಟವಾಗಿ ತಿಳಿಸಿ ಉಳುವವನೇ ಭೂಮಾಲಿಕನಾಗಬೇಕು ಎಂದು ಹೇಳಿದ್ದರೂ, ಆ ಬಗ್ಗೆ 44 ಕಲಂನಲ್ಲಿ ಸ್ವಲ್ಪ ದುರಸ್ತಿಮಾಡಬೇಕು. ಹಾಗೆ ದುರಸ್ತಿ ಮಾಡದಿದ್ದರೆ ಇದರಿಂದೇನೇನೂ ಉಪಯೋಗವಿಲ್ಲ. ಇಲ್ಲಿ 44ನೇ ಕಲಂಗೆ ಮಾಡಿರತಕ್ಕ ನಂಬರ್ 26ನೇ ತಿದ್ದುಪಡಿಯಲ್ಲಿ ಡೆಪ್ಯೂಟಿ ಕಮೀಷನರು ನೋಟಿಫಿಕೇಶನ್ ಹೊರಡಿಸಿದ ನಂತರ ಜಮೀನ್ದಾರನ ಕಬ್ಜಾದಲ್ಲಿದ್ದ ಭೂಮಿಯು ಸರ್ಕಾರದ ಕಬ್ಜಾಕ್ಕೆ ಬರುತ್ತದೆಂದು ಸ್ಪಷ್ಟವಾಗಿ ತಿಳಿಸಿದೆ. ಅಂದರೆ ಭೂಮಾಲಿಕನ ಕಬ್ಜಾದಲ್ಲಿದ್ದ ಜಮೀನಿಗೆ ಗೇಣಿದಾರ ಮಾಲೀಕನಾಗುವುದಿಲ್ಲ. ಆ ಜಮೀನು ಸರ್ಕಾರದ ಕಬ್ಜಾಕ್ಕೆ ಬರುತ್ತದೆ ಮತ್ತು ಗೇಣಿದಾರನು ಖಾಸಗೀ ಭೂಮಾಲೀಕನ ಬದಲು ಸರ್ಕಾರದ ಗೇಣಿದಾರನಾಗುತ್ತಾನೆ. ಗೇಣಿದಾರನು ಭೂಮಾಲೀಕನಾಗಬೇಕಾದರೆ ತಾಶೀಲ್ದಾರ ಅವನಿಗೆ ಆಕ್ಯುಪನ್ಸಿ ರೈಟ್ ಕೊಡಬೇಕಾಗಿದ್ದರೆ ಅದಕ್ಕೆ ಒಂದು ಮೊಬಲಗನ್ನು ಫಿಕ್ಸ್ ಮಾಡಬೇಕು. ಗೇಣಿದಾರನು ಆ ಹಣವನ್ನು ಕೊಟ್ಟ ಮೇಲೆ ಭೂಮಾಲಿಕನಾಗುವನು. ಆ 44ನೇ ಕಲಂ ಹೀಗೆ ಹೇಳುತ್ತಿದೆ.

"He is entitled to be registered as an occupant". Entitled to be registered is quite different from being the owner of the soil.

ಇಲ್ಲಿ ಹೀಗೆ ಹೇಳಿರುವ ತತ್ವವನ್ನು ನಾವು ಮಾನ್ಯ ಮಾಡಿದರೆ ಈ ಕಲಮಿನಲ್ಲಿ ಹೇಳಿರತಕ್ಕ ಗೇಣಿದಾರ ಭೂಮಾಲೀಕನಾಗುತ್ತಾನೆ ಎನ್ನುವುದಕ್ಕೆ

ಭರವಸೆ ಇಲ್ಲ. ಮೊದಲು ಮುಂಬೈದಲ್ಲಿ 1948ರಲ್ಲಿ ಭೂಸುಧಾರಣೆಯ ಹೊಸ ಒಂದು ಕಾನೂನನ್ನು ಜಾರಿಗೆ ತಂದ ಕಾಲಕ್ಕೆ ಅದರಲ್ಲೂ ಅನೇಕ ನ್ಯೂನತೆಗಳಿದ್ದವು. ಅವುಗಳನ್ನೆಲ್ಲ ಬರುಬರುತ್ತಾ ತಿದ್ದುಪಡಿ ಮಾಡುತ್ತ ಕಡೆಗೆ 1956 ರಲ್ಲಿ ಇದರ ಬಗ್ಗೆ ಪ್ರತ್ಯೇಕವಾದ ಕಲಂ 32 ನ್ನು ಸೇರಿಸಿ ಅದನ್ನು ದುರಸ್ತಿ ಮಾಡಿದ್ದಾರೆ. ಅದರಲ್ಲಿ ಹೀಗೆ ಹೇಳಿದೆ:-

"Every tenant shall be deemed to have purchased from the land lord, the land held by him as a tenant".

ಈ ಪ್ರಕಾರವಾಗಿ ಮುಂಬೈದಲ್ಲಿ ತಾರೀಖು 1ನೇ ಏಪ್ರಿಲ್ 1957ರಲ್ಲಿ ಟೆನನ್ಸಿ ಆ್ಯಂಡ್ ಅಗ್ರಿಕಲ್ಚರಲ್ ಆ್ಯಕ್ಟ್ ಜಾರಿಗೆ ಬಂದಾಗ ಅಂದು ಪ್ರತಿಯೊಬ್ಬ ಗೇಣಿದಾರನೂ ಭೂಮಾಲೀಕನಾದನು. ಅಂದು ಆ ರಾಜ್ಯದಾದ್ಯಂತ ಬಹಳ ವಿಜೃಂಭಣೆಯಿಂದ ಟಿಲರ್ಸ ಡೇ ಆಚರಣೆ ಮಾಡಲಾಯಿತು. ಹಿಂದೆ 1957ರಲ್ಲಿ ಮುಂಬೈ ರಾಜ್ಯದಲ್ಲಿ ಟಿಲರ್ಸ ಡೇ ಆಚರಣೆ ನಡೆದಾಗ ನಾವು ಅಲ್ಲಿ ಇದ್ದಿದ್ದರೆ ನಮಗೂ ಆ ಪ್ರತಿಫಲ ದೊರೆಯುತ್ತಿತ್ತು. ಆದರೆ 1956ರಲ್ಲಿ ರಾಜ್ಯಗಳ ಪುನರ್ವಿಂಗಡಣೆ ಆದುದರಿಂದ ನಮಗೆ ಆ ಅನುಕೂಲ ದೊರೆಯಲಿಲ್ಲ. ಆದರೆ ಆ ಮುಂಬೈ ಆ್ಯಕ್ಟಿನಲ್ಲಿ ಸೇರಿಸಿದಂಥ 32ನೇ ಕಲಮನ್ನು ನಮ್ಮ ರಾಜ್ಯದ ಕಾನೂನಿನಲ್ಲಿ ಸೇರಿಸಬೇಕಾಗಿತ್ತು. ಹೊಸ ಆ್ಯಕ್ಟ್ 1965ರಲ್ಲಿ ಜಾರಿಗೆ ಬಂದಾಗಲೂ ಸೇರಿಸಲಿಲ್ಲ. ಮುಂಬೈದಲ್ಲಿ ಗೇಣಿದಾರರಾಗಿದ್ದವರೆಲ್ಲರೂ ಭೂಮಾಲೀಕರಾದರೂ ನಮಗೆ ಇಲ್ಲಿ ಅವಕಾಶ ಸಿಗದೇ ನಾವು ಗೇಣಿದಾರರಾಗೇ ಉಳಿಯಬೇಕಾಯಿತು. ಈಗಲಾದರೂ ಮುಂಬೈ ರಾಜ್ಯದ ಗೇಣಿದಾರರ ಆ ಪ್ರತಿಫಲ ನಮಗೂ ಸಿಗುವಂತೆ ಮಾಡಲು ಈ ಮಸೂದೆಯನ್ನು ಸೂಕ್ತ ರೀತಿ ತಿದ್ದುಪಡಿ ಮಾಡಬೇಕು. ಇಲ್ಲಿ ಕೂಡ ಬೇಗ ಟಿಲರ್ಸ ಡೇ ಆಚರಣೆಗೆ ಸರ್ಕಾರ ವ್ಯವಸ್ಥೆ ಮಾಡಬೇಕು.

ಇನ್ನು ಎರಡನೇಯದಾಗಿ ಗೇಣಿದಾರ ಮೂಲ ಭೂಮಾಲಿಕನಾಗಲು ಅವನು ಏನು ಪರಿಹಾರ ಕೊಡಬೇಕೆಂಬುದನ್ನು ಸ್ಪಷ್ಟವಾಗಿ ತಿಳಿಸಿದ್ದಾರೆ. ಕಲಂ 48 ರಲ್ಲಿ ಕಂದಾಯದ 10ರಷ್ಟು ಹಣವನ್ನು ಬೆಲೆಯಾಗಿ ಕೊಡಬೇಕೆಂದು

ಹೇಳಿದೆ. ಇತ್ತೀಚೆಗೆ 15 ಪಟ್ಟು ಅಂದರೆ ಒಂದು ರೂಪಾಯಿ ಕಂದಾಯ ಇದ್ದರೆ 15 ರೂಪಾಯಿ ಕೊಡಬೇಕಾಗುವುದು. ಇದರಿಂದ ಗೇಣಿದಾರನಿಗೆ ಬಹಳ ತೊಂದರೆ ಆಗುತ್ತದೆ. ಇದನ್ನು ಐದುಪಟ್ಟು ಮಾಡಿದರೆ ಬಹಳ ಅನುಕೂಲ.

ಆನಂತರ ಗೇಣಿದಾರರ ವಿಷಯದಲ್ಲಿ ಮತ್ತು ಪರಮಾವಧಿ ಹಿಡುವಳಿ ವಿಷಯದಲ್ಲಿ ಮುಂಬೈ ಸರ್ಕಾರ ಗೇಣಿದಾರರು ಮತ್ತು ಭೂಮಾಲೀಕರ ನಡುವಿನ ಸಂಬಂಧ ಕಡಿದು ಹಾಕಲು ಸ್ವತಂತ್ರವಾದ ಸೀಲಿಂಗ್ ಆ್ಯಕ್ಟ್ ಮಾಡಿದ್ದಾರೆ. ಆ ಪ್ರಕಾರ ಮೈಸೂರು ಸರಕಾರ ಕೂಡ ಸ್ವತಂತ್ರ ಸೀಲಿಂಗ್ ಆ್ಯಕ್ಟ ಮಾಡಿ ಭೂ ಸುಧಾರಣೆ ಕಾಯ್ದೆಯ ಕೆಲಸವನ್ನು ಅದರಿಂದ ಬೇರ್ಪಡಿಸಿದರೆ ಹೆಚ್ಚು ಒಳ್ಳೆಯದಾಗುತ್ತದೆ.

ಪರಮಾವಧಿ ಹಿಡುವಳಿಗಿಂತಲೂ ಹೆಚ್ಚು ಜಮೀನು ಏನಿದೆ ಅದನ್ನು ಯಾವ ರೀತಿ ಹಂಚಬೇಕೆಂಬ ಬಗ್ಗೆ ಒಂದು ಕಲಂನಲ್ಲಿ ನಿರ್ದಿಷ್ಟವಾಗಿ ಹೇಳಿದೆ. ಅದರ ಪ್ರಕಾರ ಜಮೀನಿಲ್ಲದವರಿಗೆ ಅಥವಾ ಡಿಸ್‌ಪ್ಲೆಸ್ಡ್ ರೈತರಿಗೆ ಒಬ್ಬರಿಗೆ ಒಂದು ಯೂನಿಟ್‌ನಂತೆ ಕೊಡಲು ಅವಕಾಶವಿದೆ. ಒಂದು ಯೂನಿಟ್‌ನಿಂದ ಸರಿಯಾಗಿ ವ್ಯವಸಾಯ ಮಾಡಲು ಶಕ್ಯವೇ ಇಲ್ಲ. ಕನಿಷ್ಟ ಪಕ್ಷ ಪ್ರತಿಯೊಬ್ಬರಿಗೂ 6 ಎಕರೆ ಅಥವಾ 6 ಯೂನಿಟ್‌ನಂತೆ ವಿತರಣೆ ಮಾಡಬೇಕು. ಜಮೀನಿಲ್ಲದವರು ಕೂಡಿಕೊಂಡು ಒಂದು ಫಾರ್ಮಿಂಗ್ ಸೊಸೈಟಿ ಮಾಡಿಕೊಂಡರೆ 6 ಜನರಿಗೆ ಕೊಡುವುದಾದರೆ 6 ಯೂನಿಟ್ ಕೊಡಬೇಕು. ಅವರೆ ಪ್ರತಿಯೊಬ್ಬ ಗೇಣಿದಾರನಿಗೂ ಒಂದೊಂದು ಯೂನಿಟ್ ಹಂಚಬಾರದು ಎಂಬ ಅಭಿಪ್ರಾಯವಿದೆ.

ಭೂಮಿ ಇಲ್ಲದಿರುವವರಿಗೆ ಒಂದು ಯೂನಿಟ್ ಕೊಟ್ಟರೆ ಅಥವಾ ಅದಕ್ಕಿಂತ ಹೆಚ್ಚಿಗೆ ಕೊಟ್ಟರೂ ಫ್ರ್ಯಾಂಗ್ಮೆಂಟೇಶನ್ ಆ್ಯಕ್ಟ್‌ಗೆ ವಿರುದ್ಧವಾಗುವುದು. ಆದುದರಿಂದ ಫ್ರ್ಯಾಂಗ್ಮೆಂಟೇಶನ್ ಆ್ಯಕ್ಟ್‌ಗೆ ದುರಸ್ತಿ ಮಾಡಬೇಕು. ಇಲ್ಲದಿದ್ದರೆ 4 ಎಕರೆಗಳಿಗಿಂತ ಹೆಚ್ಚು ಭೂಮಿ ಕೊಡಬೇಕು.

ಬೇರೆ ರೀತಿಯಲ್ಲಿ 12 ಸಾವಿರ ರೂಪಾಯಿಗಳಿಗಿಂತ ಹೆಚ್ಚು ಉತ್ಪನ್ನವಿದ್ದರೆ ಅಂಥವರು ಭೂಮಿ ಪಡೆಯುವಂತಿಲ್ಲವೆಂದು 79(ಎ) ಕಲಂ ಹೇಳಿದೆ. ಇಲ್ಲಿ ಸಂವಿಧಾನದಲ್ಲಿ ಪ್ರತಿಯೊಬ್ಬರಿಗೂ ಇರುವ ಆಸ್ತಿಯ ಹಕ್ಕಿನ ಬಗ್ಗೆ ವಿಚಾರ ಮಾಡಬೇಕಾಗುತ್ತದೆ. ಆ ಹಕ್ಕನ್ನು ಕಸಿದುಕೊಳ್ಳಲು ಸಕಾರಣಬೇಕು. ಒಕ್ಕಲತನದ ಉತ್ಪನ್ನವಲ್ಲದೆ ಇತರ ಉತ್ಪನ್ನ 12 ಸಾವಿರ ರೂಪಾಯಿ ಇದ್ದರೆ ಆತನು ಭೂಮಿ ಪಡೆಯುವಂತಿಲ್ಲ ಮತ್ತು ಸರ್ಪ್ಲಸ್ ಭೂಮಿಯನ್ನು ವಿತರಣೆ ಮಾಡಬೇಕೆಂದಿದೆ. ಇಂಥ ನಿರ್ಬಂಧ ಸರಿಯಲ್ಲ ಮತ್ತು ಇದನ್ನು ತೆಗೆದುಹಾಕಬೇಕು. ಇನ್ನು ಮುಂದೆ ಒಕ್ಕಲುತನದ ಉತ್ಪನ್ನ ಬಿಟ್ಟು ಉಳಿದ ಉತ್ಪನ್ನ 12 ಸಾವಿರ ರೂಪಾಯಿಗಳಿಗಿಂತ ಹೆಚ್ಚು ಇದ್ದರೆ ಅಂಥವರು ಹೊಸದಾಗಿ ಭೂಮಿ ತೆಗೆದುಕೊಳ್ಳಲು ಸಾಧ್ಯವಾಗಬಾರದು ಎಂಬ ಷರ್ತು ಹಾಕಿದರೆ ಅಭ್ಯಂತರವಿಲ್ಲ. ಇಂಥ ಒಂದು ಷರ್ತು ಮಹಾರಾಷ್ಟ್ರದಲ್ಲಿದೆ. ಅದೇ ರೀತಿ ನಮ್ಮ ಕಾಯ್ದೆಯಲ್ಲೂ ಷರ್ತು ಹಾಕಿ, 12 ಸಾವಿರ ರೂಪಾಯಿಗಿಂತ ಹೆಚ್ಚು ಉತ್ಪನ್ನವಿದ್ದರೆ ಅಂಥವರು ಇನ್ನು ಮುಂದೆ ಭೂಮಿಯ ಆಸ್ತಿಮಾಡದಂತೆ ನಿರ್ಬಂಧ ಹಾಕಬೇಕು.

ಈಗಿದ್ದ ಕಾಯ್ದೆಯ 63ನೇ ಕಲಮು ಫಾರೆಸ್ಟ್ ಲ್ಯಾಂಡ್ ಹಿಡುವಳಿ ಮೇಲೆ ಕೂಡಾ ಸೀಲಿಂಗ್ ಇರಬೇಕೆಂದು ಹೇಳಿದೆ. ಆದರೆ ಫಾರೆಸ್ಟ್ ಲ್ಯಾಂಡ್‌ನಲ್ಲಿ ಗುಡ್ಡ–ಕಾಡು ಇದ್ದರೆ, ಅದರಲ್ಲಿ ವ್ಯವಸಾಯ– ಯೋಗ್ಯ ಜಮೀನು ಇರದಿದ್ದರೆ ಅದನ್ನು ಅರಣ್ಯಕ್ಕೇ ಬಿಡಬೇಕು. ಭೂಸುಧಾರಣಾ ಕಾಯ್ದೆಯಲ್ಲಿ ಫಾರೆಸ್ಟ್ ಲ್ಯಾಂಡ್‌ಗೆ ಸೀಲಿಂಗ್ ಹೇರಿರುವುದು ಹೋಗಬೇಕು.

ಈ ಕಾಯಿದೆ ಕೊನೆಯಲ್ಲಿ ಒಂದು ಟೇಬಲ್ ಅಂದರೆ ಕೋಷ್ಟಕವಿದೆ. ಕೋಷ್ಟಕ ಹಾಕುವ ಪೂರ್ವದಲ್ಲಿ ಸಾಕಷ್ಟು ಗಮನಕೊಟ್ಟಿಲ್ಲ. ಉದಾಹರಣೆಗೆ ಹೇಳುವುದಾದರೆ ಕೋಷ್ಟಕದ 16ನೆಯ ಐಟಂದಲ್ಲಿ ವಿಜಾಪುರ ಜಿಲ್ಲೆಯ ಬಗ್ಗೆ ವಿವರಣೆ ಇದೆ. ಈ ಜಿಲ್ಲೆಯ ಬೀಳಗಿ ತಾಲೂಕ ಬಗ್ಗೆ 4 ಅಥವಾ 5 ನೇ ಕಾಲಂಗಳಲ್ಲಿ ಯಾವ ರೀತಿಯಲ್ಲೂ ಉಲ್ಲೇಖವಿಲ್ಲ. ಇಂಡಿ ಮತ್ತು ಬಾಗೇವಾಡಿ ತಾಲೂಕುಗಳು ಕ್ಷಾಮ ಪೀಡಿತ ದುಷ್ಕಾಲ ಪ್ರದೇಶಗಳು. ಈ ಎರ್ಡೂ ತಾಲೂಕುಗಳನ್ನು 4 ನೇ ಕಾಲಂದಲ್ಲಿ ಹಾಕಿ ಮುಧೋಳ, ಬಾಗಲಕೋಟ,

ಬದಾಮಿ ಮುಂತಾದ ಕ್ಷಾಮವಿಲ್ಲದ ತಾಲೂಕುಗಳನ್ನು 5ನೇ ಕಾಲಂದಲ್ಲಿ ಹಾಕಿ ಅಲ್ಲಿನವರಿಗೆ ಹೆಚ್ಚು ಭೂಮಿ ಇಟ್ಟುಕೊಳ್ಳಲು ಕೋಷ್ಟಕದಲ್ಲಿ ಅವಕಾಶ ಕೊಡಲಾಗಿದೆ. ಆದುದರಿಂದ ಈ ಕೋಷ್ಟಕ ಬಗ್ಗೆ ಪೂರ್ಣ ವಿಚಾರ ಮಾಡಿ ಸೂಕ್ತ ದುರಸ್ತಿ ಮಾಡಬೇಕು ಎಂದು ಸೂಚಿಸಬಯಸುತ್ತೇನೆ.

## ಭೂ ಸುಧಾರಣಾ ವಿಧೇಯಕ ಹಾಗೂ ನೇಕಾರಿಕೆಯ ಮೇಲಿನ ಚರ್ಚೆ

### (ನವೆಂಬರ್ 1972)

**ಶ್ರೀ ಪಿ. ಎಂ. ಬಾಂಗಿ (ಜಮಖಂಡಿ)**– ಮಾನ್ಯ ಅಧ್ಯಕ್ಷರೆ, ಸಭೆಯ ಮುಂದೆ ಇರುವ ವಿದೇಯಕವನ್ನು ನಾನು ಹೃತ್ಪೂರ್ವಕವಾಗಿ ಸ್ವಾಗತಿಸುತ್ತೇನೆ. ಸ್ವತಂತ್ರ ಆ್ಯಕ್ಟ್ ಮಾಡದೆ ಈಗಿದ್ದ ಕಾಯ್ದೆಯ 8 ಮತ್ತು 20 ನೇ ಕಲಮಿನಲ್ಲಿ ತಿದ್ದುಪಡಿ ಮಾಡಿದ್ದರೂ ನಡೆಯುತ್ತಿತ್ತು. ಅದೇನಿದ್ದರೂ ಗೇಣಿದಾರರಿಗೆ ಸಾಕಷ್ಟು ಪರಿಹಾರ ಕೊಡುವ ತತ್ವ ಇದರಲ್ಲಿ ಅಡಕವಾಗಿದೆ. ಇದರಲ್ಲಿ ಕೇವಲ ಹಿಂದಿನ ಅರಿಯರ್ಸ್‌ಅನ್ನು ಕಂತಿನಲ್ಲಿ ಕೊಡುವುದಕ್ಕೆ ಗೇಣಿದಾರರಿಗೆ ಅವಕಾಶ ಮಾಡಿದ್ದಾರೆ. ಇನ್ನು ಮುಂದೆ ಬರುವಂಥ ಕಾಯ್ದೆಯಲ್ಲಿ ಕಂತಿನಿಂದ ಗೇಣಿ ಕೊಡುವಂಥ ಉಲ್ಲೇಖವಿಲ್ಲ. ಆ ದೃಷ್ಟಿಯಿಂದ ನನ್ನ ಸಲಹೆ ಏನೆಂದರೆ ಮಾಲೀಕನಿಗೆ ಕೊಡುವಂಥ ಗೇಣಿಯನ್ನು ಕಂತಿನಲ್ಲಿ ಕೊಡತಕ್ಕದ್ದು ಮತ್ತು ಕಂತಿನಲ್ಲಿ ಕೊಡದಿದ್ದರೆ ಯಾವ ರೀತಿ ವಸೂಲು ಮಾಡತಕ್ಕದ್ದು ಎಂಬುದನ್ನು ಮುಂಬರುವ ಕಾಯಿದೆಯಲ್ಲಿ ಸೇರಿಸಬೇಕು.

**ಶ್ರೀ ಎಚ್.ಡಿ. ದೇವೇಗೌಡ**– ನಾನು ಈ ಸಭೆಯಲ್ಲಿ ರಾಜ್ಯದ ನೇಕಾರರ ಪರಿಸ್ಥಿತಿ ಬಗ್ಗೆ ಏನೊಂದು ಉಪವಾಸ ಮುಷ್ಕರ ನಡೆಯುತ್ತಿದೆಯೋ ಅದರ ಬಗ್ಗೆ ಪ್ರಸ್ತಾಪ ಮಾಡಿದಾಗ ಕೈಗಾರಿಕೆ ಮಂತ್ರಿಗಳಾದ ಮಾನ್ಯ ಶ್ರೀ ಕೃಷ್ಣ ಅವರು 22ನೇ ತಾರೀಖಿನಲ್ಲಿ ಒಂದು ಹುಕುಂ ಹೊರಡಿಸಲಾಗಿದೆಯೆಂದು ಹೇಳಿದರು. ಈಗಾಗಲೇ 10ನೇ ದಿವಸ ಅವರ ಮುಷ್ಕರ ಪ್ರಾರಂಭವಾಗಿದೆ. ಅವರ ಉಪವಾಸ ಮುಷ್ಕರ ನೋಡಿದರೆ ಪರಿಸ್ಥಿತಿ ಭೀಕರವಾಗಿದೆ. ಜಮಖಂಡಿ,

ಬಾಗಲಕೋಟೆಗಳಲ್ಲಿ ಇಂತಹ ಮುಷ್ಕರಗಳು ನಡೆಯುತ್ತಿವೆ. ರಾಜ್ಯದ ಉತ್ತರ ಕರ್ನಾಟಕದ ಕೆಲವು ಭಾಗಗಳಲ್ಲಿ ನೇಕಾರರ ಪರಿಸ್ಥಿತಿ ಬಹಳ ಚಿಂತಾಜನಕವಾಗಿದೆ. ಅದರ ಬಗ್ಗೆ ಸ್ಪಷ್ಟೀಕರಣವನ್ನು ಮಂತ್ರಿಗಳು ಈ ಸಭೆಯಲ್ಲಿ ಮಾಡಬೇಕೆಂದು ನಾನು ಕೇಳಿಕೊಳ್ಳುತ್ತೇನೆ.

**ಶ್ರೀ ಪಿ.ಎಂ. ಬಾಂಗಿ (ಜಮಖಂಡಿ)**– ನೇಕಾರರ ವಿಚಾರವಾಗಿ ನಾನೂ ಹೇಳಬೇಕಾಗಿದೆ. ಜಮಖಂಡಿ ತಾಲೂಕಿನಲ್ಲಿ ಇವರಿಗೆ ಕೂಡಲೇ ವಿಶೇಷ ಪರಿಹಾರ ಒದಗಿಸಬೇಕು. ನೇಕಾರರು ಮುಷ್ಕರ ಹೂಡಿ 10 ದಿವಸಗಳಾದವು. ಅನ್ನವಿಲ್ಲದಾಗಿ ಸಾಯುವ ಪರಿಸ್ಥಿತಿ ಬಂದಿದೆ. ನಾನು ಇದರ ಬಗ್ಗೆ ಈಗಾಗಲೇ ಕಾಲ್ ಅಟೆನ್ಷನ್ ನೋಟೀಸ್ ಕೊಟ್ಟಿದ್ದೇನೆ. ಅದನ್ನು ಕೂಡಲೇ ಚರ್ಚೆಗೆ ತೆಗೆದುಕೊಳ್ಳಬೇಕೆಂದು ನನ್ನ ವಿನಂತಿ.

**ಶ್ರೀ ಜಿ.ಪಿ. ನಂಜಯ್ಯನಮಠ (ಗುಳೇದಗುಡ್ಡ)**– **ಅಧ್ಯಕ್ಷರೇ,** ಈಗ ಶ್ರೀಯುತ ಬಾಂಗಿಯವರು ಹೇಳಿದಂತೆ ನಮ್ಮ ಪ್ರದೇಶದಲ್ಲಿ ಸಾಯುತ್ತಿರುವ ನೇಕಾರರನ್ನು ಉಳಿಸುವುದಕ್ಕೆ ಸರ್ಕಾರ ಹೆಚ್ಚಿನ ಪ್ರಯತ್ನವನ್ನು ಮಾಡಬೇಕು. ಮಾನ್ಯ ಮಂತ್ರಿಗಳು ಕೂಡಲೇ ಇದರ ಬಗ್ಗೆ ತಕ್ಕ ಕ್ರಮವನ್ನು ತೆಗೆದುಕೊಳ್ಳಬೇಕೆಂದು ನಾನು ವಿನಂತಿಮಾಡಿಕೊಳ್ಳುತ್ತೇನೆ.

**ಶ್ರೀ ಆರ್.ಎಸ್. ಪಾಟೀಲ್ (ರಾಮದುರ್ಗ)**– ಅಧ್ಯಕ್ಷರೇ, ಇದೇ ತಿಂಗಳು 22ನೇ ತಾರೀಖಿನಿಂದ ರಾಮದುರ್ಗದಲ್ಲಿ ಕೈಮಗ್ಗದ ನೇಕಾರರು ಸತ್ಯಾಗ್ರಹ ಹೂಡಿರುವ ಅಂಶವನ್ನು ತಮ್ಮ ಗಮನಕ್ಕೆ ನಾನು ಈಗಾಗಲೇ ತಂದಿದ್ದೇನೆ. ಆ ವಿಚಾರವನ್ನು ನಾನು ಮಂತ್ರಿಗಳ ಗಮನಕ್ಕೂ ಸಹ ತಂದಿದ್ದೇನೆ. ಅವರು ಆ ವಿಚಾರವನ್ನು ಸಹಾನುಭೂತಿಯಿಂದ ಕೇಳಿಕೊಂಡು ಕೆಲವೊಂದು ಭರವಸೆಗಳನ್ನು ಕೊಟ್ಟಿದ್ದಾರೆ. ಆ ಭರವಸೆಗಳ ಬಗ್ಗೆ ಸರ್ಕಾರದವರು ಏನೇನು ಕ್ರಮಗಳನ್ನು ತೆಗೆದುಕೊಂಡಿದ್ದಾರೆಂಬುದನ್ನು ದಯವಿಟ್ಟು ಈ ಮಾನ್ಯ ಸಭೆಗೆ ತಿಳಿಸಬೇಕು.

**ಶ್ರೀ ಎಸ್.ಎಂ. ಕೃಷ್ಣ (ಕೈಗಾರಿಕಾ ಶಾಖೆಯ ಮಂತ್ರಿಗಳು)**– ಈಗಾಗಲೆ ಸರ್ಕಾರದವರು ನಮ್ಮ ರಾಜ್ಯದ ಉತ್ತರ ಭಾಗದಲ್ಲಿರತಕ್ಕಂತ ನೇಕಾರರ ದುಸ್ಥಿತಿಯ

ಬಗ್ಗೆ ತೆಗೆದುಕೊಂಡ ಕಾರ್ಯಕ್ರಮಗಳು ಏನು ಎಂಬುದನ್ನು ನಾನು ನಿನ್ನೆ ತಾನೆ ಈ ಸದನದಲ್ಲಿ ಇಟ್ಟಿರತಕ್ಕಂತಹ ಆಜ್ಞೆಯಿಂದ ವ್ಯಕ್ತವಾಗುತ್ತದೆ. ಮಾನ್ಯ ವಿರೋಧ ಪಕ್ಷದ ನಾಯಕರು, ಮಾನ್ಯ ಬಾಂಗಿಯವರು, ನಂಜಯ್ಯನಮಠರವರು ಮತ್ತು ಆರ್. ಎಸ್. ಪಾಟೀಲರವರು ಏನು ಕೆಲವು ವಿಚಾರಗಳನ್ನು ಈ ಸಭೆಯ ಗಮನಕ್ಕೆ ತಂದಿದ್ದಾರೆ, ಅದರಲ್ಲಿ ಸಾಕಾದಷ್ಟು ಸತ್ವ ಇದೆ. ನಮ್ಮ ರಾಜ್ಯದಲ್ಲಿ ನೇಕಾರರು ಸಾಕಷ್ಟು ಪ್ರಮಾಣದಲ್ಲಿ ಜಮಖಂಡಿ ತಾಲೂಕಿನಲ್ಲಿ ಮತ್ತು ರಾಮದುರ್ಗ ತಾಲೂಕಿನಲ್ಲಿ ಕೇಂದ್ರೀಕೃತರಾಗಿದ್ದಾರೆ. ಆದ್ದರಿಂದ ಸರ್ಕಾರದವರು ಈಗಾಗಲೇ ಇದರ ಬಗ್ಗೆ ತೀರ್ಮಾನ ಮಾಡಿದ್ದಾರೆ. ನಾವು ಕನಿಷ್ಟ ಮಾಡಬಹುದಾದಂತಹ ಅಥವಾ ಅವರಿಗೆ ಒದಗಿಸಬಹುದಾದಂತಹ ಅನುಕೂಲಗಳನ್ನಾದರೂ ಒದಗಿಸಿ ಕೊಡಬೇಕಾಗಿದೆ. ಮುಖ್ಯವಾಗಿ ಅವರಿಗೆ ಬೇಕಾದಂತಹ ಕಚ್ಚಾ ಪದಾರ್ಥಗಳನ್ನು ಒದಗಿಸಿಕೊಡತಕ್ಕಂಥದ್ದು. ನಮ್ಮ ದೇಶದಲ್ಲಿ ನೂಲು ಅಭಾವದ ಮತ್ತು ನಿಯಂತ್ರಿತ ವಸ್ತುವಾಗಿದೆ. ನೂಲನ್ನು ಅಲಾಟ್ ಮಾಡತಕ್ಕ ಜವಾಬ್ದಾರಿ ಕೇಂದ್ರ ಸರ್ಕಾರದ್ದಾದರೂ ಬರಗಾಲದ ಬವಣೆಗೆ ಸಿಕ್ಕಿರುವ ಪ್ರದೇಶಗಳ ಸ್ಥಿತಿಗತಿ ಅರಿತು ಸರ್ಕಾರ ಈಗಾಗಲೇ ಕೇಂದ್ರ ಸರ್ಕಾರದ ಜೊತೆಯಲ್ಲಿ ವ್ಯವಹಾರ ಮಾಡಲು ಪ್ರಾರಂಭ ಮಾಡಿದೆ. ಅದರ ಫಲವಾಗಿ ನಮಗೆ ವಿಶೇಷವಾದಂತಹ ನೂಲನ್ನು ಕೇಂದ್ರ ಸರ್ಕಾರದವರು ಈಗಾಗಲೇ ಅಲಾಟ್ ಮಾಡಿದ್ದಾರೆ. ಅದರ ಆಧಾರದ ಮೇಲೆ ಬನಹಟ್ಟಿ, ಇಳಕಲ್ ಮತ್ತು ರಾಮದುರ್ಗ ಈ ಮೂರು ಕಡೆಗಳಲ್ಲಿ ನೂಲನ್ನು ಒಂದು ಕಾರ್ಡು ಮೂಲಕ ಕೊಡತಕ್ಕಂತಹ ಕೇಂದ್ರವನ್ನು ಇಲಾಖೆಯ ವತಿಯಿಂದ ಪ್ರಾರಂಭ ಮಾಡುತ್ತಿದ್ದೇವೆ. ಜೊತೆಗೆ ಅವರಿಗೆ ವರ್ಕಿಂಗ್ ಕ್ಯಾಪಿಟಲ್ ಏನು ಬೇಕು, ಅದರ ಸಲುವಾಗಿಯೂ ಹಣಕಾಸಿನ ಅನುಕೂಲವನ್ನು ಕಲ್ಪಿಸಿಕೊಡಬೇಕೆಂದು ತೀರ್ಮಾನ ಮಾಡಿದ್ದೇವೆ. ಮಾನ್ಯ ಸದಸ್ಯರು ಯಾವಾಗ ಇದನ್ನು ಪ್ರಾರಂಭ ಮಾಡುತ್ತೀರೆಂದು ಕೇಳಿದರು. ಅದನ್ನು ಇವತ್ತು ಸಾಯಂಕಾಲದ ಒಳಗೆ ಅಲ್ಲಿಗೆ ಕಳಿಸುತ್ತೇವೆ. ಈಗಾಗಲೇ ಅದು ಪ್ರಯಾಣ ಮಾಡುತ್ತಿರಬಹುದು. ಎರಡು ಡಿಪೋಗಳಿಗೆ ಅದು ಹೋಗುತ್ತದೆ. ಬಹುಶಃ ಮೂರನೇ ತಾರೀಕಿನಂದು ಬನಹಟ್ಟಿ ಮತ್ತು ಇಳಕಲ್‌ನಲ್ಲಿ ಇದನ್ನು ಹಂಚಲು ಪ್ರಾರಂಭ ಮಾಡುತ್ತಾರೆ. ರಾಮದುರ್ಗದಲ್ಲಿ ಸ್ವಲ್ಪ ನಿಧಾನವಾಗಬಹುದು. ಅದೇ ರೀತಿ

ಇನ್ನು ಕೆಲವು ಇತರ ಭಾಗಗಳಲ್ಲಿ ನೇಕಾರರ ಸ್ಥಿತಿಗತಿ ಉತ್ತಮಪಡಿಸಲು ನಾವು ಮೊದಲೇ ತಿಳಿಸಿರುವ ಹಾಗೆ ಒಂದು ಕೋಟಿ ನಲ್ವತ್ತು ಲಕ್ಷ ರೂಪಾಯಿಗಳ ಯೋಜನೆಯನ್ನು ಕೇಂದ್ರ ಸರ್ಕಾರದ ಒಪ್ಪಿಗೆಗೋಸ್ಕರ ಕಳಿಸಿಕೊಟ್ಟಿದ್ದೇವೆ. ಅವರು ಒಪ್ಪಿಗೆ ಕೊಟ್ಟ ಕೂಡಲೇ ನಾವು ಮಿಕ್ಕ ಪ್ರದೇಶಗಳಲ್ಲಿಯೂ ಸಹ ಈ ಜನರಿಗೆ ಅನುಕೂಲಗಳನ್ನು ಕಲ್ಪಿಸಿಕೊಡುವುದಕ್ಕೆ ಪ್ರಯತ್ನ ಮಾಡುತ್ತೇವೆ. ಅದೇ ರೀತಿ ಡಿಸ್ಟ್ರಿಕ್ಟ್ ಇಂಡಸ್ಟ್ರಿಯಲ್ ಕೋ-ಆಪರೇಟಿವ್ ಬ್ಯಾಂಕುಗಳ ಮೂಲಕ ಲೋನುಗಳನ್ನು ಕೊಡುವುದಕ್ಕೆ ಏರ್ಪಾಡು ಮಾಡುತ್ತೇವೆ.

**ಶ್ರೀ ಜಿ.ಪಿ. ನಂಜಯ್ಯನಮಠ (ಗುಳೇದಗುಡ್ಡ)–** ಅಧ್ಯಕ್ಷರೇ, ಮಾನ್ಯ ಮುಖ್ಯಮಂತ್ರಿ ಮತ್ತು ಮಾನ್ಯ ಕೈಗಾರಿಕೆ ಮಂತ್ರಿಯವರಲ್ಲಿ ಒಂದು ವಿನಂತಿಯೇನೆಂದರೆ, ನೇಕಾರರು ಸತ್ಯಾಗ್ರಹ ನಿಲ್ಲಿಸುವ ಹಾಗೆ ಒಂದು ತಂತಿಯನ್ನು ಕಳಿಸಿಕೊಡಬೇಕು.

**Sri D. Devaraj Urs-** But the point the Hon'ble Member will appreciate is that the quantity of yarn we get is limited. Supposing we spread it everywhere, the people of Bijapur, Ramdurg and Ilkal will naturally get less just as butter which if spread becomes too thin. ನನ್ನ ಆಸೆ ಏನೆಂದರೆ ಕಂಟ್ರೋಲ್ ಬೆಲೆಯಲ್ಲಿ ಇಡೀ ಸಂಸ್ಥಾನದಲ್ಲಿರತಕ್ಕಂಥ ಎಲ್ಲಾ ನೇಕಾರರಿಗೂ ಇದರ ಅನುಕೂಲವನ್ನು ಕಲ್ಪಿಸಿಕೊಡಬೇಕು ಎಂದು. ಆದರೆ ಈಗ ಬಂದಿರತಕ್ಕದ್ದನ್ನು ಇವತ್ತೇ ಎಲ್ಲ ಕಡೆಗೂ ವ್ಯಾಪ್ತಿ ಮಾಡಿದರೆ ಏನಾಗುತ್ತದೆ? ಎಲ್ಲರಿಗೂ ಒಂದೇ ಸಾರಿ ಕೊಡುವಷ್ಟು ನೂಲು ನಮ್ಮಲ್ಲಿ ಇಲ್ಲ, ಅಷ್ಟೆ.

**ಶ್ರೀ ಪಿ.ಎಂ. ಬಾಂಗಿ–** ಇವತ್ತು ಕಂಟ್ರೋಲ್ ಧಾರಣೆಯಲ್ಲಿ ನೂಲು ತಂದು ಜಮಖಂಡಿ ಮುಂತಾದ ಪ್ರದೇಶಗಳಿಗೆ ಒದಗಿಸುವುದು ಕಷ್ಟವಾಗುತ್ತದೆ. ಆದ್ದರಿಂದ ಟೆಕ್ಸ್‌ಟೈಲ್ ಕಮೀಶನರ್ ಮೇಲೆ ಮತ್ತು ಕೇಂದ್ರ ಸಕಾರದ ಮೇಲೆ ಒತ್ತಾಯ ತಂದು ಸಾಕಷ್ಟು ಹೆಚ್ಚು ಪ್ರಮಾಣದಲ್ಲಿ ಅಭಾವವಿರುವ ಪ್ರದೇಶದಲ್ಲಿ ನೂಲು ದೊರೆಯುವಂತೆ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ. ಅದೇ ರೀತಿ

ಬಾಗಲಕೋಟ ಮತ್ತಿತರ ಪ್ರದೇಶಗಳಲ್ಲಿ ಕನಿಷ್ಟಪಕ್ಷ ಪ್ರತಿಯೊಂದು ಮಗ್ಗಕ್ಕೆ 300 ರೂಪಾಯಿಯಂತೆ ಸಾಲ ಕೊಡುವುದಕ್ಕೆ ಏರ್ಪಾಡು ಮಾಡಬೇಕು. ಇದು ಮಾಡದೆ ಹೀಗೆ ಬಿಡುತ್ತಾ ಹೋದರೆ ಪರಿಸ್ಥಿತಿ ವಿಕೋಪಕ್ಕೆ ಹೋಗುವ ಸಂಭವ ಇದೆ. ಅದೇ ರೀತಿ ನಮ್ಮ ಮಿತ್ರರು ಹೇಳಿದಂತೆ ಅಲ್ಲಿ ಸತ್ಯಾಗ್ರಹ ಮಾಡುವವರಿಗೆ ಸಹಾನುಭೂತಿಯನ್ನು ತೋರಿಸಿ ಒಂದು ತಂತಿಯನ್ನು ಕಳಿಸಬೇಕೆಂದು ಕೇಳಿಕೊಳ್ಳುತ್ತೇನೆ.

**ಶ್ರೀ ಡಿ. ದೇವರಾಜ ಅರಸ್**– ಮಾನ್ಯ ಅಧ್ಯಕ್ಷರೇ ನೇಕಾರರ ಬಗ್ಗೆ ಅನೇಕ ಮಾನ್ಯ ಸದಸ್ಯರು ಈ ಸಭೆಯಲ್ಲಿ ಕಳಕಳಿಯನ್ನು ವ್ಯಕ್ತಪಡಿಸಿದ್ದಾರೆ, ಬಹಳ ಸಂತೋಷ. ಆದರೆ ಸರ್ಕಾರಕ್ಕೂ ಅಷ್ಟೆ ಅವರ ಬಗ್ಗೆ ಸಹಾನುಭೂತಿ ಮತ್ತು ಕಳಕಳಿ ಇದೆ. ಅದರಲ್ಲೂ ನಮ್ಮ ಸರ್ಕಾರದಲ್ಲಿ ನೇಕಾರರ ಬಗ್ಗೆ ವಿಶೇಷವಾದ ರೀತಿಯ ಕಳಕಳಿ ನಮಗೆ ಇದೆ. ಅದಕ್ಕೆ ಕಾರಣ ಬೇರೆ ಇದೆ. ಇದರಲ್ಲಿ ಎರಡು ಭಾಗಗಳಾಗಿ ವಿಂಗಡಿಸಬೇಕು. ನೇಕಾರರಿಗೆ ಜನರಲ್ ಆಗಿ ಏನು ಸಹಾಯ ಮಾಡಬೇಕು ಎನ್ನುವಂಥಾದ್ದು ಒಂದು, ಕಷ್ಟಕಾಲದಲ್ಲಿ ಸಿಕ್ಕಿಕೊಂಡಿರತಕ್ಕ ಮತ್ತು ಬರಗಾಲಕ್ಕೆ ತುತ್ತಾಗಿರುವ ನೇಕಾರರಿಗೆ ಯಾವರೀತಿ ಸಹಾಯ ಮಾಡಬೇಕೆಂಬುದು ಮತ್ತೊಂದು. ಈ ಎರಡನ್ನೂ ಒಂದಕ್ಕೊಂದು ಬೆರೆಸುವುದು ಬೇಡ. ನಾವು ಈಗ ಅವರಿಗೆ ನೂಲಿನ ಸಹಾಯ ಮತ್ತು ಧನಸಹಾಯ ಮಾಡಬೇಕಾಗಿದೆ. ಇವರ ಬಗ್ಗೆ ಕೇಂದ್ರದಲ್ಲಿ ಒಂದು ದೊಡ್ಡ ಆಲೋಚನೆ ಇದೆ. ಅದು ಏನೆಂದರೆ ಈಗ ಮಿಲ್ಲುಗಳಲ್ಲಿ 40, 60, 80, 100 ಈ ರೀತಿ ನೂಲಿನ ಕೌಂಟುಗಳು ಏನು ಬರುತ್ತವೆ ಅವುಗಳಲ್ಲಿ ಕೆಲವು ಲೋವರ್ ಕೌಂಟಿನ ನೂಲನ್ನು ಪೂರ್ತಿಯಾಗಿ ಹ್ಯಾಂಡ್ಲೂಮ್ ಕೈಗಾರಿಕೆಗೆ ಮೀಸಲಾಗಿಡಬೇಕಾಗಿದೆ. ಇದು ಕೇಂದ್ರ ಸರ್ಕಾರದ ತೀವ್ರ ಪರಿಶೀಲನೆಯಲ್ಲಿದೆ ಎಂದು ನಾನು ತಿಳಿದುಕೊಂಡಿದ್ದೇನೆ. ಆದರೆ ಅದಕ್ಕೆ ಸಂಬಂಧಪಟ್ಟ ಆರ್ಡರು ಇನ್ನೂ ಜಾರಿಗೆ ಬಂದಿಲ್ಲ. ಈ ವರ್ಷ ನಾನಾ ಕಾರಣಗಳಿಂದ ನೂಲಿನ ಡಿಮ್ಯಾಂಡ್ ಜಾಸ್ತಿ ಇದೆ. ಆದರೆ ಡಿಮ್ಯಾಂಡ್ ಅನ್ನು ಮೀಟ್ ಮಾಡುವುದಕ್ಕೆ ಸಾಕಷ್ಟು ಪ್ರೊಡಕ್ಷನ್ ಇಲ್ಲ. ಇಂಥಾ ಒಂದು ಸನ್ನಿವೇಶದಲ್ಲಿ ನೇಕಾರರರಿಗೆ ಬಹಳ ಕಷ್ಟ ಬಂದಿದೆ. ಈಗ ನೂಲಿಗೆ ಡಿಮ್ಯಾಂಡ್ ಜಾಸ್ತಿ ಇರುವುದರಿಂದ ಬ್ಲ್ಯಾಕ್ ಮಾರ್ಕೆಟ್ಟಿನಲ್ಲಿ ನೂಲನ್ನು ಕೊಂಡು ಬಟ್ಟೆಯನ್ನು ತಯಾರಿಸಿ ಅದನ್ನು

ಮಾರ್ಕೆಟ್ಟಿನಲ್ಲಿ ಎಷ್ಟಕ್ಕೆ ಹೋಗುತ್ತದೆಯೋ ಅಷ್ಟಕ್ಕೆ ಮಾರಿ ಜೀವನ ಮಾಡತಕ್ಕ ಪರಿಸ್ಥಿತಿ ಬಂದಿದೆ. ಬರಗಾಲ ಪೀಡಿತ ಪ್ರದೇಶಗಳಲ್ಲಿ ಸಾಮಾನ್ಯವಾಗಿ ಜನರಲ್ ಆಗಿ ನೇಕಾರರ ಸ್ಥಿತಿಗತಿಗಳನ್ನು ಉತ್ತಮಪಡಿಸಬೇಕು ಎಂದು ಈಗಾಗಲೇ ನಾವು 2 ಮುಖ್ಯ ಕಾರ್ಯಕ್ರಮಗಳನ್ನು ತೆಗೆದುಕೊಂಡಿದ್ದೇವೆ. ಬಹಳ ದಿವಸಗಳಿಂದ ನೇಕಾರರ ಬಗ್ಗೆ ಒಂದು ಡಿಮ್ಯಾಂಡ್ ಏನಿದೆ ಎಂದರೆ ಸ್ಮಾಲ್ ಸ್ಕೇಲ್ ಇಂಡಸ್ಟ್ರಿಗೆ ಇದ್ದ ಹಾಗೆ ಪ್ರತ್ಯೇಕವಾಗಿ ವೀವರ್ಸ್‌ಗಳನ್ನು ನೋಡಿಕೊಳ್ಳುವುದಕ್ಕೆ ಒಂದು ಡೈರೆಕ್ಟೋರೇಟ್ ಕೊಡಬೇಕೆಂದು ಬಹಳ ದಿವಸಗಳ ಡಿಮ್ಯಾಂಡ್ ಇತ್ತು. ಅದನ್ನು ಈ ಸಾರಿ ಕಾರ್ಯಗತ ಮಾಡಿ ಅವರಿಗೆ ಪ್ರತ್ಯೇಕವಾದ ಒಂದು ಡೈರೆಕ್ಟೋರೇಟ್ ಮಾಡಬೇಕೆಂದಿದ್ದೇವೆ. ನೇಕಾರರಿಗೆ ಸಂಬಂಧಪಟ್ಟ ಹಾಗೆ ಎರಡುವರೆ ಸಾವಿರ ಸೊಸೈಟಿಗಳು ಇದ್ದುವು. ದುರದೃಷ್ಟವಶಾತ್ 1500 ಸೊಸೈಟಿಗಳು ಮುಚ್ಚಿಹೋಗಿವೆ. ಆ ರೀತಿ ಅವುಗಳನ್ನು ಮುಚ್ಚುವುದಕ್ಕೆ ನಾನಾ ಕಾರಣಗಳು ಇವೆ. ಈಗ ಹಾಲಿ ಸೊಸೈಟಿಗಳನ್ನು ಏನು ಕ್ಲೋಜ್ ಮಾಡಿದ್ದಾರೆ ಅವುಗಳನ್ನು ಕಂಪ್ಲೀಟಾಗಿ ಕ್ಲೋಜ್ ಮಾಡಿ ಹೊಸದಾಗಿ ಪ್ರಾರಂಭ ಮಾಡಿದರೂ ಪರವಾಯಿಲ್ಲ. ಅವುಗಳಿಂದ ನೇಕಾರರಿಗೆ ಹಣ ಸಹಾಯ ದೊರಕುವ ಹಾಗೆ ಮಾಡಬೇಕು. ನಾವು ಈಗಾಗಲೇ ಅವರಿಗೆ ಸಹಾಯ ಧನ ಕೊಡಬೇಕು ಎಂದು ಇಂಡಿವಿಜುಯಲ್ ಸೊಸೈಟಿಗಳ ಮುಖಾಂತರ ಸಾಲ ಕೊಡಿಸುವುದಕ್ಕೆ ಏರ್ಪಾಟು ಮಾಡುತ್ತಿದ್ದೇನೆ.

ಮೊನ್ನೆ ನಮ್ಮ ಆಫೀಸರು ಬೊಂಬಾಯಿಗೆ ಹೋಗಿ ಟೆಕ್ಸ್‌ಟೈಲ್ ಕಮೀಷನರ್ ಹತ್ತಿರ ಹೋಗಿ ಬಂದಿದ್ದಾರೆ. ಪುನಃ ಟೆಕ್ಸ್‌ಟೈಲ್ ಕಮೀಷನರು ಇಲ್ಲಿಗೆ ಬರುತ್ತಾರೆ. ಈ ರೀತಿಯಾಗಿ ಆ ಬಗ್ಗೆ ನಾವು ಎಲ್ಲಾ ಕ್ರಮವನ್ನು ತೆಗೆದುಕೊಂಡಿದ್ದೇವೆ. ನೇಕಾರರ ಪರಿಸ್ಥಿತಿಯನ್ನು ಉತ್ತಮಪಡಿಸುವುದಕ್ಕೆ ನಾವು ಇಷ್ಟೊಂದು ಕಾರ್ಯಕ್ರಮಗಳನ್ನು ತೆಗೆದುಕೊಂಡಿದ್ದೇವೆ. ನೇಕಾರರಿಗೆ ಬೇಕಾಗಿರತಕ್ಕ 20, 40, 60 ಕೌಂಟಿನ ನೂಲನ್ನು ಕಡ್ಡಾಯವಾಗಿ ಹ್ಯಾಂಡ್ಲೂಂ ಇಂಡಸ್ಟ್ರೀಗೆ ಮೀಸಲಾಗಿಟ್ಟು ದೊಡ್ಡ ದೊಡ್ಡ ಮಿಲ್ಲುಗಳಿಗೆ ಫೈನ್ ವೆರೈಟಿ ಮಾಡುವುದಕ್ಕೆ ಕೊಡಲಿ ಎನ್ನುವುದು ನಮ್ಮ ವಾದ. ಈ ವಿಚಾರವನ್ನು ನಾನು ಅನೇಕ ಸಂದರ್ಭದಲ್ಲಿ ಕೇಂದ್ರ ಸರ್ಕಾರದವರಲ್ಲಿ ಚರ್ಚೆ ಮಾಡಿದ್ದೇನೆ. ಕೇಂದ್ರದಲ್ಲಿ ಒತ್ತಾಯ ಮಾಡಿ ಹೇಳಿದ್ದೇನೆ.

## ಕಂದಾಯ ಬಿಲ್ಲಿನ ಮೇಲಿನ ಚರ್ಚೆ

### (30ನೇ ನವೆಂಬರ್ 1972)

**ಶ್ರೀ ಪಿ.ಎಂ. ಬಾಂಗಿ (ಜಮಖಂಡಿ)**- ಮಾನ್ಯ ಅಧ್ಯಕ್ಷರೇ, ಕಂದಾಯ ಮಂತ್ರಿಗಳು ಇವತ್ತಿನ ದಿವಸ ತಂದಿರತಕ್ಕ ಬಿಲ್ಲನ್ನು ಸ್ವಾಗತ ಮಾಡುತ್ತೇನೆ. ಇದನ್ನು ರಿಟ್ರಾಸ್ಪೆಕ್ಟಿವ್ ಎಫೆಕ್ಟ್ ಆಗಿ ಕೊಡಬೇಕೇ ಬೇಡವೇ ಎನ್ನುವುದರ ಬಗ್ಗೆ ಕೆಲವು ಸದಸ್ಯರು ಸಲಹೆ ಮಾಡಿದ್ದಾರೆ. ನಾನು ಹೇಳುವುದೇನೆಂದರೆ, ಈ ಬಿಲ್ಲು ಕೇಂದ್ರ ಸರಕಾರದ ಬಿಲ್ಲು. ಸೆಂಟ್ರಲ್ ಆ್ಯಕ್ಟ್ 15 (1895) ಇದರ ಆಧಾರದ ಮೇಲೆ ಇದನ್ನು ಮೈಸೂರು ರಾಜ್ಯಕ್ಕೆಲ್ಲಾ ಅನ್ವಯವಾಗುವಂತೆ ವಿಸ್ತರಿಸಲು ತರಲಾಗಿದೆ. ಇದರಿಂದ ಹೊಸದಾಗಿ ಯಾವ ಕಾಯ್ದೆಯೂ ಬರುತ್ತಿಲ್ಲ. ಮುಂದೆ ಸಬ್‌ಸ್ಟ್ಯಾನ್ಷಿಯಲ್ ಮಸೂದೆ ತಂದಾಗ ಅವೆಲ್ಲ ವಿಚಾರಗಳು ಬರುತ್ತವೆ. ಇದು ಕೇವಲ ಕೇಂದ್ರ ಸರಕಾರದ ಬಿಲ್ಲನ್ನು ಇಲ್ಲಿ ವಿಸ್ತರಣೆ ಮಾಡುವುದಕ್ಕಾಗಿ ಮಾತ್ರ ತರಲಾಗಿದೆ. ಮೈಸೂರು ರಾಜ್ಯಕ್ಕೆ ಅನ್ವಯವಾಗುವಾಗ ರಿಟ್ರಾಸ್ಪೆಕ್ಟಿವ್ ಆಗಿರುವಂತೆ ಮಾಡಬೇಕು ಎಂದೂ ಹೇಳಿದ್ದರು. ಇದರಲ್ಲಿನ ಕಲಂ ಮೂರರಲ್ಲಿ ವಿವರವಾಗಿ ಹೇಳಲಾಗಿದೆ. ಅದರಲ್ಲಿರುವಂತೆ ಕೇಂದ್ರ ಸರಕಾರದ ಆ್ಯಕ್ಟ್ 15 (1895) ನ್ನು ಮೈಸೂರು ರಾಜ್ಯದಲ್ಲೂ ಪೂರ್ತಿಯಾಗಿ ವಿಸ್ತರಣೆ ಮಾಡುವುದರ ಸಲುವಾಗಿ ಮಾತ್ರ ಇಲ್ಲಿ ತಂದಿರುವುದು. ಇದರಲ್ಲಿ ರಿಟ್ರಾಸ್ಪೆಕ್ಟಿವ್ ಆಗಿ ಯಾವುದೂ ಬರುವಂತಿಲ್ಲ. ಆದುದರಿಂದ ಇಲ್ಲಿ ತಂದಿರುವ ಬಿಲ್ಲನ್ನು ನಾನು ಸ್ವಾಗತ ಮಾಡುತ್ತೇನೆ.

### 8th December 1972

**397 Sri P.M. Bangi (Jamkhandi)**- Will the Minister for Industries be plased to state:-

(a) whether the Government is aware that thousands of handlooms are lying idle and working weavers are rendered

unemployed in Bijapur district owing to the steep rise in prices of yarn and other raw materials and for want of customers for finished goods like sarees;

(b) if so, the reasons for not making arrangements for the supply of yarn of 40, 60 and 80 counts at cheap rates to handloom weavers of Rabakavi, Banahatti, Guledagud, Ilakal and other weavers' centres in Bijapur district;

(c) whether there is any proposal before the Government to open godowns for storing raw materials like yarn, art-silk etc. at weavers' centres like Banahatti, Rabakavi, Guledagud etc. in Bijapur district and distribute the yarn on ration cards through fair price shops;

(d) whether there is any proposal before the Government to advance loans to poor weavers for the purchase of yarn etc., on pledging their finished articles like sarees?

Sri S.M. Krishna-(Minister for Industries)

(a) Yes

(b) and (c) Government have issued orders to open Yarn Depots at Banahatti and Ilakal in Bijapur district.

(d) Government have sanctioned a loan of Rs. 0.00 lakhs to the Mysore State Industrial Co-operative Bank for granting

pledge- loans to the weavers through the District Industrial Co-operative Bank Bagalkot.

**ಶ್ರೀ ಪಿ. ಎಂ. ಬಾಂಗಿ**– ಯಾವತ್ತೂ ಕಚ್ಚಾಮಾಲು, ರೇಷ್ಮೆ, ಆರ್ಟ್‌ಸಿಲ್ಕ ಮತ್ತು ನೂಲು ಇವುಗಳ ಬಗ್ಗೆ ಪ್ರಶ್ನೆ ಕೇಳಿದರೆ, ಯಾರ್ನ ಡಿಪೋ ತೆರೆದಿರುವುದಾಗಿ ಹೇಳಿದ್ದಾರೆ. ಅದರಲ್ಲಿ ಕೂಡ ಫೈನ್ ಯಾರತ್ತಿಲ್ಲ. ನೇಕಾರರಿಗೆ ಅನುಕೂಲವಾಗುವಂತೆ ಯಾವತ್ತೂ ಕಚ್ಚಾಮಾಲು ದೊರೆಯುವಂಥ ಡಿಪೋ ಓಪನ್ ಮಾಡಿ, ಟ್ರಾನ್ಸ್‌ಪೋರ್ಟ್ ಚಾರ್ಜ ವಜಾ ಮಾಡಿ ನೇಕಾರರಿಗೆ ಕೊಟರೆ ಅನುಕೂಲವಾಗುತ್ತದೆ. ನೇಕಾರರ ಸಮಸ್ಯೆ ಗಂಭೀರವಾಗಿದ್ದು, ಸಾವಿರಾರು ಮಂದಿ ಅನ್ನಸತ್ಯಾಗ್ರಹ ಹೂಡಿದ್ದಾರೆ. ಈ ಕಡೆ ಸರ್ಕಾರದವರ ಗಮನ ಹರಿಯುವುದೋ ಹೇಗೆ?

**ಶ್ರೀ ಎಸ್. ಎಂ. ಕೃಷ್ಣ**– ಅನ್ನ ಸತ್ಯಾಗ್ರಹ ಪ್ರಾರಂಭವಾಗಿದ್ದು, ಮಾನ್ಯ ಸದಸ್ಯರು ಸರ್ಕಾರದ ಗಮನಕ್ಕೆ ತಂದರು. ಆಗ ಸರ್ಕಾರದವರು ಒಂದು ವಿಶೇಷವಾದ ಆರ್ಡರ್ ಹೊರಡಿಸಿ ಬಿಜಾಪುರ, ಬೆಳಗಾಂ, ಧಾರವಾಡ, ಗುಲ್ಬರ್ಗ ಮತ್ತು ಬಿದರ ಜಿಲ್ಲೆಗಳಲ್ಲಿ ನೇಕಾರರಿಗೆ ಕೊಂಚಮಟ್ಟಿಗಾದರೂ ಸಹಾಯಕ್ಕೆ ಹೋಗಬೇಕು ಎನ್ನುವ ಸದುದ್ದೇಶದಿಂದ ಒಂದೆರಡು ಯಾರ್ನ ಡಿಪೋ ಪ್ರಾರಂಭ ಮಾಡಿದ್ದೇವೆ. ಮಾನ್ಯ ಸದಸ್ಯರಿಗೆಲ್ಲ ಮನವರಿಕೆ ಇದೆ, ನೂಲು ಸಿಕ್ಕತಕ್ಕದ್ದು ಬಹಳ ಕಷ್ಟ. ಕೇಂದ್ರ ಸರ್ಕಾರದ ಟೆಕ್ಸ್‌ಟೈಲ್ ಕಮೀಷನರು ನಮಗೆ ತಿಂಗಳಿಗೆ ಇಂತಿಷ್ಟು ಎಂದು ಕೊಡುತ್ತಿದ್ದಾರೆ. ಅಭಾವ ಪರಿಸ್ಥಿತಿಯಿಂದಾಗಿ ಕರ್ನಾಟಕ ರಾಜ್ಯಕ್ಕೆ ವಿಶೇಷವಾಗಿ ಎರಡು ಲಕ್ಷ ಕೆ.ಜಿ. ನೂಲನ್ನು ಅಲಾಟ್ ಮಾಡಬೇಕೆಂದು ನಾವು ಕೇಳಿಕೊಂಡಿದ್ದೆವು. ಅವರು ಕೇವಲ 40 ಸಹಸ್ರ ಕೆ.ಜಿ. ನೂಲನ್ನು ವಿಶೇಷ ಅಲಾಟಮೆಂಟ್ ಎಂದು ಕೊಟ್ಟಿದ್ದಾರೆ. ವಿಶೇಷವಾಗಿ ಹೆಚ್ಚಿನ ಅಲಾಟ್‌ಮೆಂಟ್ ಪಡೆದು ಅಲ್ಲಿರತಕ್ಕ ನೇಕಾರರಿಗೆ ಒದಗಿಸಿಕೊಡಬೇಕು ಎನ್ನುವುದಕ್ಕೆ ತೀವ್ರವಾದ ಪ್ರಯತ್ನಗಳನ್ನು ಮಾಡುತ್ತಿದ್ದೇವೆ.

**ಶ್ರೀ ಜೆ.ಎಲ್. ಕಬಾಡಿ**– ಸ್ವಾಮಿ ರಬಕವಿ, ಬನಹಟ್ಟಿ, ಗುಳೇದಗುಡ್ಡ, ಇಳಕಲ್‌ದ ಕೈಮಗ್ಗ ನೇಕಾರರ ಸಲುವಾಗಿ ನೂಲಿನ ಭಂಡಾರ ತೆರೆಯಲು

ಸರ್ಕಾರ ಆದೇಶ ಹೊರಡಿಸಿದೆ ಎಂದು ಹೇಳಿದ್ದೀರಿ. ಈಗಲೂ ಕೂಡ ಅಲ್ಲಿ ನೂಲು ಸಪ್ಲೈ ಮಾಡದೇ ಇರುವುದರಿಂದ ಅನ್ನ ಸತ್ಯಾಗ್ರಹ ನಡೆಯುತ್ತಾ ಇದೆ.

**ಶ್ರೀ ಎಸ್.ಎಂ. ಕೃಷ್ಣ**– ಮಾನ್ಯ ಬಾಂಗಿಯವರು ಬನಹಟ್ಟಿಯಲ್ಲಿ ಒಂದು ಭಂಡಾರವನ್ನು ಓಪನ್ ಮಾಡಿ ಅವರೇ ನೇಕಾರರಿಗೆ ನೂಲನ್ನು ಹಂಚಿದ್ದಾರೆ. ಹಾಗೆಯೇ ನಂಜಯ್ಯನಮಠ ಇಳಕಲ್‌ನಲ್ಲೂ ಕೂಡ ಓಪನ್ ಮಾಡಿ ನೂಲನ್ನು ಹಂಚಿದ್ದಾರೆ. ಆಗೆಯೇ ಕಲ್ಲಳ್ಳಿಯಲ್ಲೂ ಪ್ರಾರಂಭ ಮಾಡಿದ್ದಾರೆ ಮತ್ತು ಗುರುಮಠದಲ್ಲೂ ಓಪನ್ ಮಾಡುವುದಕ್ಕೆ ಪ್ರಯತ್ನ ಮಾಡಿದ್ದಾರೆ.

**ಶ್ರೀ ಪಿ.ಎಂ. ಬಾಂಗಿ**– ಕಳೆದ ತಿಂಗಳು 22ನೇ ತಾರೀಖು ಒಂದು ಆರ್ಡರ್ ಹೊರಡಿಸಿದ್ದೀರಿ. ಅದು ಈ ರೀತಿ ಇದೆ–

"Joint Director of Industries and Commerce and ex-officio Joint Director of Industrial Co-operatives is authorised to purchase yarn against the order received from the Textile Commissioner and if sufficient quantity is not forthcoming from the mills, he is authorised to purchase directly at the rates fixed by the Textile Commissioner"

ಆದುದರಿಂದ ಅವರಿಗೆ ಕೊಟ್ಟಂಥ ನೂಲು ಸಾಲದೇ ಇದ್ದ ಪಕ್ಷದಲ್ಲಿ ಓಪನ್ ಮಾರ್ಕೆಟ್‌ನಲ್ಲಿ ಖರೀದಿ ಮಾಡಬೇಕು ಎಂದು ಇದೆ. ಇದು ಆದೇಶದ 2ನೇ ಪ್ಯಾರಾದಲ್ಲಿ ಉಲ್ಲೇಖವಾಗಿದೆ. ಈಗ ಪೇಟೆಯಲ್ಲಿ ಸಾಕಷ್ಟು ನೂಲು ದೊರೆಯುತ್ತದೆ. ಆದುದರಿಂದ ಗೋಕಾಕ್ ಮತ್ತು ಬೆಂಗಳೂರಿನಲ್ಲಿ ನೂಲನ್ನು ಖರೀದಿಸಿ ಬಡ ನೇಕಾರರಿಗೆ ಯೋಗ್ಯ ದರದಲ್ಲಿ ಸಿಗುವಂತೆ ವ್ಯವಸ್ಥೆ ಮಾಡುತ್ತೀರಾ?

**ಶ್ರೀ ಎಸ್.ಎಂ. ಕೃಷ್ಣ**– ಓಪನ್ ಮಾರ್ಕೆಟ್‌ನಲ್ಲಿ ಯೋಗ್ಯ ದರದಲ್ಲಿ ನೂಲು ಸಿಕ್ಕರೆ, ಆ ನೂಲನ್ನು ಕೊಂಡು ನೇಕಾರರಿಗೆ ವಿತರಣೆ ಮಾಡಬೇಕು

ಎನ್ನುವ ದೃಷ್ಟಿಯಿಂದ ಗೌರ್ನಮೆಂಟ್ ಆರ್ಡರ್ ಹೊರಡಿಸಿದೆ, ತಾವು ಓದಿದಿರಾ, ಅದು 2ನೇ ಪ್ಯಾರಾದಲ್ಲಿ ಸೇರಿದೆ.

**ಶ್ರೀ ಎಚ್.ಡಿ. ದೇವೇಗೌಡ–** ಸಮಸ್ಯೆ ಎದುರಿಸತಕ್ಕ ಕಾಲದಲ್ಲಿ ಕೇಂದ್ರದಿಂದ 2 ಲಕ್ಷ ಕೆ.ಜಿ. ನೂಲನ್ನು ಕೇಳಿದ್ದೀರಿ. ನಿಮಗೆ 40 ಸಾವಿರ ಕೆ.ಜಿ. ನೂಲು ಬಂದಿದೆ. ಕ್ಷಾಮ ಪರಿಸ್ಥಿತಿಯಲ್ಲಿ ಸಾದ್ಯವಾದ ಮಟ್ಟಿಗೆ ಈ ಸೌಲಭ್ಯವನ್ನು ಜನ ಪಡೆಯುವುದಕ್ಕೆ ಡಿಪೋಗಳನ್ನು ತೆಗೆದು, ಮುಖ್ಯವಾದ ಸಮಸ್ಯೆಯನ್ನು ಬಿಡಿಸುವುದಕ್ಕೆ ಪ್ರಯತ್ನ ಮಾಡುತ್ತೀರಾ?

**ಶ್ರೀ ಎಸ್.ಎಂ. ಕೃಷ್ಣ–** ಮಾನ್ಯ ವಿರೋಧ ಪಕ್ಷದ ನಾಯಕರು ಏನು ಜನರಲ್ ಪ್ರಿನ್ಸಿಪಲ್ ಎನನ್ಸಿಯೇಟ್ ಮಾಡಿದರು, ಆ ಪ್ರಿನ್ಸಿಪಲ್ ಆಧಾರದ ಮೇಲೆ ಕೆಲವು ಡಿಪೋಗಳನ್ನು ಪ್ರಾರಂಭಿಸಬೇಕು ಎಂದು ತಿರ್ಮಾನ ತೆಗೆದುಕೊಂಡಿದ್ದೇವೆ. ಬಿಜಾಪುರ ಜಿಲ್ಲೆಯಲ್ಲಿ ಬನಹಟ್ಟಿ ಇಳಕಲ್‌ನಲ್ಲಿ ಜಾಸ್ತಿ ಕಾನ್ಸಂಟ್ರೇಷನ್ ಆಫ್ ವೀವರ್ಸ್ ಇದ್ದಾರೆ. ಮುಖ್ಯವಾದ ತೊಂದರೆ ಏನು ಎಂದರೆ ಅಗತ್ಯವಾಗಿ ಬೇಕಾಗಿರತಕ್ಕ ನೂಲು ಸಿಕ್ಕುವುದು. ಎರಡನೇಯದು ಬಹು ಮುಖ್ಯವಾಗಿರತಕ್ಕದ್ದು ಹಣಕಾಸಿನ ವ್ಯವಸ್ಥೆ. 30 ಲಕ್ಷ ಒದಗಿಸಿ ಕೊಡಬೇಕಾದರೆ, 64 ರ ಫ್ಯಾಮಿನ್ ರಿಲೀಫ್ ಪ್ರಕಾರ ಒದಗಿಸಿಕೊಟ್ಟಿದ್ದೇವೆ. ಒಂದು ಕೋಟಿ 40 ಲಕ್ಷ ರೂಪಾಯಿಯ ಸ್ಕೀಮನ್ನು ಕೇಂದ್ರ ಸರ್ಕಾರಕ್ಕೆ ಕಳುಹಿಸಿದ್ದೇವೆ.

## 12th December 1972

**Sri P.M. Bangi (Jamkhandi)**–Will the Minister for Community Development and Social Welfare be pleased to state:-

(a) whether the Government is aware that 21 houses meant for Shikkaligars of Jamakhandi have been built upto

roofing level by the Taluk Development Board, Jamakhandi within the Municipal limits of Jamkhandi

(b) whether the Chief Minister had inspected those houses on 21st September 1972 and assured the poor Shikkaligars that the Government will take immediate steps to complete them;

Sri M. Mallikarjuna Swamy- (Minister for Community Development and Social Welfare)

(a) Yes

(b) Yes

(c) Orders were issued in G. O. No. SWD 70 SSE 72, dated 23rd November 1972 sanctioning a subsidy of Rs. 700 to each of the 21 Shikkaligar families for completion of these incomplete houses through the Taluk Development Board, Jamkhandi.

ಶ್ರೀ ಪಿ.ಎಂ. ಬಾಂಗಿ– (ಸಿ) ಪ್ರಶ್ನೆಗೆ 23.11.1972 ರಂದು ಒಂದು ಆರ್ಡರ್ ಮಾಡಲಾಗಿದೆ ಎಂದು ಹೇಳಿದ್ದೀರಿ. ಆದರೆ ಅಲ್ಲಿಯ ಬಿ.ಡಿ.ಓ ಇನ್ನೂ ಅದು ಬಂದಿಲ್ಲವೆಂದು ಹೇಳುತ್ತಿದ್ದಾರೆ. ಆದ್ದರಿಂದ ಅದನ್ನು ಕೂಡಲೇ ಜಾರಿಗೆ ಕೊಡುತ್ತೀರಾ?

ಶ್ರೀ ಎಂ. ಮಲ್ಲಿಕಾರ್ಜುನಸ್ವಾಮಿ– ಅಲ್ಲಿ ಕೆಲವು ಕಂಡಿಶನ್ಸ್ ಹಾಕಿವೆ. ಅಲ್ಲಿ 21 ಮನೆಗಳನ್ನು ತಾಲೂಕು ಅಭಿವೃದ್ಧಿ ಮಂಡಲಿಯವರು ಮುನಿಸಿಪಾಲಿಟಿ ಪ್ರದೇಶದಲ್ಲಿ ಕಟ್ಟಿಸಿದ್ದಾರೆ. ಅದು ರೂಫಿಂಗ್ ಲೆವಲ್ಲಿನವರೆಗೆ ಬಂದರೂ ಆ

ಕಂಡಿಶನ್‌ಗಳಿಂದ ನಿಂತುಹೋಗಿವೆ. ಇದು ಸರ್ಕಾರದ ಗಮನಕ್ಕೆ ಬಂದ ಕೂಡಲೇ ಸಹಾನುಭೂತಿಯಿಂದ ಅದರ ಬಗ್ಗೆ ಆರ್ಡರ್ ಮಾಡಿದ್ದೇವೆ. ತಾಲೂಕು ಅಭಿವೃದ್ಧಿ ಮಂಡಲಿಯವರು ಮತ್ತು ಮುನಸಿಪಾಲಿಟಿಯವರು ಅವನ್ನು 21 ಸಂಸಾರಗಳಿಗೆ ಬಿಟ್ಟುಕೊಡಬೇಕು ಮತ್ತು ಆ ಪ್ರಾಪರ್ಟಿ ರಿಜಿಸ್ಟರ್ ಆಗಬೇಕು. ಅದು ಆದ ತಕ್ಷಣ ರಿಲೀಸ್ ಮಾಡುತ್ತೇವೆ.

## ಬರಗಾಲ ಪೀಡಿತ ನಾಲ್ಕು ಜಿಲ್ಲೆಗಳ ಶ್ರೀ ಆರ್ಮುಗಂ ವರದಿ ಮೇಲಿನ ಚರ್ಚೆ

### (19ನೇ ಡಿಸೆಂಬರ್ 1972)

**ಶ್ರೀ ಪಿ.ಎಂ. ಬಾಂಗಿ (ಜಮಖಂಡಿ)**– ಮಾನ್ಯ ಅಧ್ಯಕ್ಷಿಣೀಯವರೇ, ಶ್ರೀಮಾನ್ ಆರ್ಮುಗಂ ಅವರು ಈ ತಿಂಗಳ ಏಳನೇ ತಾರೀಖಿನಿಂದ ಪ್ರಾರಂಭಮಾಡಿ ಕೇವಲ ಏಳು ದಿವಸಗಳಲ್ಲಿ ನಾಲ್ಕು ಜಿಲ್ಲೆಗಳಲ್ಲಿ ಸುತ್ತಾಡಿ ತಮ್ಮ ವರದಿಯನ್ನು ಸಲ್ಲಿಸಿದ್ದಾರೆ. ಆ ಬಗ್ಗೆ ಅವರು ಅಭಿನಂದನೆಗೆ ಪಾತ್ರರಾಗಿದ್ದಾರೆ. ಅವರು ತಮ್ಮ ವರದಿಯಲ್ಲಿ 10 ವಿಭಾಗಗಳನ್ನು ಮಾಡಿ ಬೇರೆ ಬೇರೆ ಜಿಲ್ಲೆಗಳ ಬಗ್ಗೆ ಚರ್ಚೆ ಮಾಡಿದ್ದಾರೆ. ನಾಲ್ಕನೆ ವಿಭಾಗದಲ್ಲಿ 24ನೇ ಪುಟದಿಂದ 33 ನೇ ಪುಟದ ವರೆಗೆ ವಿಜಾಪೂರ ಜಿಲ್ಲೆಯ ಬಗ್ಗೆ ಚರ್ಚೆ ಮಾಡಿದ್ದಾರೆ. 118 ನೇ ಪುಟದಲ್ಲಿ ಜಮಖಂಡಿ ತಾಲೂಕಿನ ಏವರೇಜ್ ರೇನ್‌ಫಾಲ್ ಬಗ್ಗೆ ವಿವೇವಚನೆ ಮಾಡಿದ್ದು, ನಮ್ಮ ತಾಲೂಕಿನಲ್ಲಿ ಕೇವಲ 45.9 ಪರ್ಸೆಂಟ್ ಮಳೆಯಾಗಿದೆ ಎಂದು ಕೊಟ್ಟಿರುವ ವಿವರ ಸರಿಯಿದೆ. ನಾಲ್ಕೂ ಜಿಲ್ಲೆಗಳ ವಿಚಾರವನ್ನು ತುಲನಾತ್ಮಕ ದೃಷ್ಟಿಯಿಂದ ನೋಡಿದರೆ ಜಮಖಂಡಿ ತಾಲೂಕಿನಲ್ಲಿ ಅತ್ಯಲ್ಪ ಮಳೆ ನಾಲ್ಕು ತಿಂಗಳಲ್ಲಿ ಆಗಿದೆ. ಆದಾಗ್ಯೂ ದುರ್ದೈವದಿಂದ ಇವರು ಜಮಖಂಡಿ ತಾಲೂಕಿಗೆ ಭೇಟಿಕೊಟ್ಟಿಲ್ಲ. ಈ ತಾಲೂಕಿನ ನೇಕಾರರ ಬಗ್ಗೆ ಯಾವ ಮಾಹಿತಿಯನ್ನೂ ತೆಗೆದುಕೊಂಡಿಲ್ಲ. ವಿಜಾಪುರದಲ್ಲಿ ಉಳಿದುಕೊಂಡು ಅಲ್ಲಿನ 600 ನೇಕಾರ ಕುಟುಂಬಗಳು ಮತ್ತು ಅವರಿಗೆ ಸರ್ಕಾರದ ಸಹಾಯ ತರುವ ಬಗ್ಗೆ ವಿವೇಚನೆ ಮಾಡಿದ್ದಾರೆ. ಬನಹಟ್ಟಿ, ರಬಕವಿ, ರಾಮಪೂರ ಮತ್ತು ಇಳಕಲ್ ನೇಕಾರರ ಬಗ್ಗೆ ಯಾವ ವಿವರವನ್ನು ಕೊಟ್ಟಿಲ್ಲ. ಅವರು ವಿಜಾಪುರದಲ್ಲಿರುವ ನೇಕಾರರ ಬಗ್ಗೆ ಒಂದು ಪ್ಯಾರಾದಲ್ಲಿ ವಿವೇಚನೆ ಮಾಡಿದ್ದಾರೆ – *27ನೇ ಪುಟದಲ್ಲಿ :*

At Bijapur, I held discussion with the non-officials. The weavers represented that about 600 families were dependent on hand-looms and that the condition of the weavers was very bad. The sale of handloom products, which was mostly in Maharasthra had been reduced in view of the scarcity conditions prevailing in Maharashtra also. While the rate of yarn had increased, they were unable to increase the rate of the finished products correspondingly because there were no buyers. It was represented that six societies out of seven had been closed and that many weavers had become beggars. A demand was, therefore, made for supply of yarn to the weavers and that Government should purchase the finished goods. They also desired grant of a long term loan of Rs. 1,000 for each loom.

ಆದರೆ ಬನಹಟ್ಟಿ ರಬಕವಿಯಲ್ಲಿ ಸಾವಿರಕ್ಕಿಂತ ಹೆಚ್ಚು ನೇಕಾರರಿದ್ದು ಅವರ ಕನಿಕರ ಪರಿಸ್ಥಿತಿ ಎಷ್ಟು ಹೇಳಿದರೂ ಕಡಿಮೆ. ನೇಕಾರರ ಗೋಳು ಕೇಳಲು ಪರಮೇಶ್ವರನೂ ಸಮರ್ಥಿಸಿದ್ದಾನೆ. ನೇಕಾರರು ಅನ್ನ ಸತ್ಯಾಗ್ರಹ ಮಾಡಿ, ಬಹನಟ್ಟಿಗೆ ಎರಡು ನೂಲಿನ ಡಿಪೋಗಳನ್ನು ಪ್ರಾರಂಭ ಮಾಡಿಸಿದ್ದಾರೆ. ಅವರಿಗೆ ತಿಂಗಳಿಗೆ ಎರಡು ದಿವಸಕ್ಕೆ ಸಾಕಾಗುವಷ್ಟು ನೂಲನ್ನು ಒದಗಿಸಿದ್ದಾರೆ. ಈ ಬಗ್ಗೆ ಸರ್ಕಾರದವರು ಕೂಡಲೆ ಕ್ರಮ ಕೈಗೊಳ್ಳಬೇಕೆಂದು ಮನವಿ ಮಾಡಿದ್ದೇವೆ. ಈ ಬಗ್ಗೆ ಉದ್ಯೋಗ ಮಂತ್ರಿಗಳು ಗಮನಕೊಟ್ಟು ಟೆಕ್ಸ್‌ಟೈಲ್ ಕಮಿಷನರ್ ಅವರಿಗೆ ಒತ್ತಾಯ ಮಾಡಿ ಸಾಕಷ್ಟು ನೂಲು ಒದಗಿಸಬೇಕು. ಇಲ್ಲದೆ ಹೋದರೆ ವಿಜಾಪೂರ ಜಿಲ್ಹೆಯ ನೇಕಾರ ಜನಾಂಗವೇ ನಾಶವಾಗುವ ಅಪಾಯವಿದೆ. ಸರ್ಕಾರ ಎಚ್ಚೆತ್ತು ಬಡ ನೇಕಾರ ಕೂಲಿಕಾರರಿಗೆ ಅಗ್ಗದ ನೂಲನ್ನು ಕೊಟ್ಟು ತಯಾರು ಮಾಡಿದ ಬಟ್ಟೆಯನ್ನು ತಿರುಗಿ ತೆಗೆದುಕೊಳ್ಳುವ ಸಲುವಾಗಿ ಸಹಾಯ ಮಾಡಬೇಕೆಂದು ಪ್ರಾರ್ಥಿಸುತ್ತೇನೆ. ಬೇರೆ ಬೇರೆ

ಮಂತ್ರಿಗಳು ವಿಜಾಪೂರ ಜಿಲ್ಹೆಯ ಕ್ಷಾಮದ ಬಗ್ಗೆ ವಚನಗಳನ್ನು ಕೊಟ್ಟರು. ಆ ವಚನಗಳನ್ನು ಪಾಲಿಸಲಿಲ್ಲ ಎಂದು ವಿರೋಧ ಪಕ್ಷದ ನಾಯಕರು ಹೇಳಿದರು.

ಶ್ರೀ ಆರ್ಮುಗಂ ಅವರ ರಿಪೋರ್ಟಿನ 5ನೇ ಪುಟದಲ್ಲಿ "... Apprehension of the people is that the magnitude of the problem, the exact amount required to meet the situation and the period within which relief should be given commensurate with the gravity of the situation has not been assessed. Promise to provide employment, irrigation wells, drinking water facilities, release of funds supply of foodgrains, lift irrigation schemes etc., have been given..."

ಈ ಪ್ರಕಾರ ಮಂತ್ರಿಗಳು ವಚನ ಕೊಟ್ಟಿದ್ದು ನಿಜ. ಆದರೆ ವಚನಗಳನ್ನು ಯಾವ ರೀತಿಯಿಂದಲೂ ಇಂದಿನವರೆಗೆ ಪೂರೈಸಲಿಲ್ಲ ಎಂಬ ಮಾತು ಸರಿಯಲ್ಲ. ಸರ್ಕಾರ 11 ಕೋಟಿ ರೂಪಾಯಿಗಳನ್ನು ಈ ನಾಲ್ಕು ಜಿಲ್ಲೆಗಳಿಗೆ ಇಲ್ಲಿಯವರೆಗೆ ಖರ್ಚು ಮಾಡಿದ್ದು ಕಂದಾಯ ಮಂತ್ರಿಗಳು ಇಟ್ಟ ರಿಪೋರ್ಟಿನಲ್ಲಿ ಸ್ಪಷ್ಟವಾಗಿ ಇದೆ. ಸರ್ಕಾರ ಅಲ್ಲಿಯ ಜನರಿಗೆ ಎಂಪ್ಲಾಯ್‌ಮೆಂಟ್ ಅಂದರೆ ಕೂಲಿಗಾರರಿಗೆ ಸಾಕಷ್ಟು ಕೂಲಿಯನ್ನು ಕೊಟ್ಟಿದೆ. ಈ ಬಗ್ಗೆ ಫೈನಾನ್ಸ್ ರಿಪೋರ್ಟಿನ 90ನೇ ಪುಟದಲ್ಲಿ 100ಕ್ಕೆ 5 ಪರ್ಸೆಂಟ್ ಜನರಿಗೆ ಕೂಲಿಯನ್ನು ಒದಗಿಸಿಕೊಟ್ಟಿರುವುದಾಗಿ ಹೇಳಿದೆ. 30 ಪರ್ಸೆಂಟ್ ಕೂಲಿ ಕೊಡಬೇಕು ಎನ್ನುವ ಅಭಿಪ್ರಾಯ ಇದೆ. ಈ ದೃಷ್ಟಿಯಿಂದ ಮಾಡಿದ ಸಲಹೆಗಳು ಯೋಗ್ಯವಾಗವಾಗಿವೆ.

ಶ್ರೀ ಕಾಗೋಡು ತಿಮ್ಮಪ್ಪ– ತಾವು ಜನಕ್ಕೆ ಉದ್ಯೋಗ ಕೊಟ್ಟಿದ್ದಾರೆ, ಹಣ ಖರ್ಚಾಗಿದೆ ಎಂದು ಹೇಳಿದ್ದೀರಿ, ತಮ್ಮ ದೃಷ್ಟಿಯಿಂದ ಎಷ್ಟು ಜನಕ್ಕೆ ಉದ್ಯೋಗ ಕೊಟ್ಟಿದ್ದಾರೆ?

ಶ್ರೀ ಪಿ.ಎಂ. ಬಾಂಗಿ– ಸರ್ಕಾರದವರು ಎಂಪ್ಲಾಯ್‌ಮೆಂಟನ್ನು ಒದಗಿಸಿದ್ದಾರೆ. ಇರಿಗೇಷನ್ ಬಾವಿಗಳ ಬಗ್ಗೆ ಸರ್ಕಾರ ಎಷ್ಟು ಬೇಕೋ ಅಷ್ಟು ಖರ್ಚು ಮಾಡಿದೆ. ಡ್ರಿಂಕಿಂಗ್ ವಾಟರ್ ವೆಲ್ಸ್ ತೆಗೆಯಲು ನಮ್ಮ ತಾಲೂಕಿಗೆ ರಿಗ್ಸ್‌ಗಳನ್ನು ಕೊಟ್ಟಿದ್ದಾರೆ. ಬಾವಿ ತೆಗೆಯುವ ಕೆಲಸ ಪ್ರಾರಂಭವಾಗಿದೆ. ಸರ್ಕಾರ ಸ್ಕೇರ್ಸಿಟಿ ರಿಲೀಫ್ ಫಂಡ್ಸ್ ಖರ್ಚು ಮಾಡಲಿಕ್ಕೆ ಪ್ರಯತ್ನ ಮಾಡಿ. ನಮ್ಮ ತಾಲೂಕಿನ ಮಟ್ಟಿಗೆ ಮಾತನಾಡಬೇಕಾದರೆ, ಸಾಕಷ್ಟು ಫುಡ್‌ಗ್ರೇನ್ಸ್, ಗೋದಿ ಅಕ್ಕಿಯನ್ನು ಸರ್ಕಾರದವರು ಕೊಟ್ಟಿದ್ದಾರೆ. ಜಮಖಂಡಿ, ಬನಹಟ್ಟಿ, ರಬಕವಿ ಜನಗಳಿಗೆ ಫುಡ್ ಗ್ರೇನ್ಸ್ ಒದಗಿಸುವುದಕ್ಕೆ ಗೋಡೌನ್‌ಗಳಲ್ಲಿ ಸಾಕಷ್ಟು ವ್ಯವಸ್ಥೆ ಮಾಡಿದ್ದಾರೆ. ಆದರೆ ಜನಗಳ ಕೈಯಲ್ಲಿ ಹಣ ಇಲ್ಲ. ಈ ದೃಷ್ಟಿಯಿಂದ ಸರ್ಕಾರದವರು ಇನ್ನೂ ಹೆಚ್ಚು ಕೂಲಿ ಕೆಲಸ ಕೊಟ್ಟು ಹಣ ಒದಗಿಸಬೇಕೆಂದು ಸಲಹೆ ಮಾಡುತ್ತೇನೆ.

ನಮ್ಮ ತಾಲೂಕಿನಲ್ಲಿ ಲಿಫ್ಟ್ ಇರಿಗೇಷನ್ ಸ್ಕೀಂ ಒಂದು ತಿಂಗಳಲ್ಲಿ ಕಡಕೊಳ ಎಂಬ ಹಳ್ಳಿಯಲ್ಲಿ ಪ್ರಾರಂಭವಾಗುವುದು. ಅದರಿಂದ ಸಾವಿರಾರು ಎಕರೆಗೆ ನೀರೊದಗುವುದು. ಕೃಷ್ಣಾ ನದಿ ಬಲದಂಡೆಯಲ್ಲೂ ಲಿಫ್ಟ ಇರಿಗೇಷನ್ ಸ್ಕೀಂ ಮಾಡಬೇಕೆಂದು ಸೂಚಿಸಿದ್ದೇವೆ. ಸರಕಾರ ಇದನ್ನು ಗಮನಿಸಬೇಕು. ಜಮಖಂಡಿ ತಾಲೂಕಿನಲ್ಲಿ 4 ಸ್ಕೀಮುಗಳನ್ನು ಮಂಜೂರು ಮಾಡಿದ್ದು, ಅವು ಡಿಸೆಂಬರ್ ಕೊನೆಯಲ್ಲಿ ಪ್ರಾರಂಭಿಸಬೇಕಾಗುತ್ತದೆ. ಈ ಬಗ್ಗೆ ಸ್ಥಳ ಪರೀಕ್ಷೆಯಾಗಿದೆ, ಸರ್ವೆಯಾಗಿದೆ. ಮುಂದೆ ಪಿ.ಡಬ್ಲ್ಯು.ಡಿ. ಇಲಾಖೆ ಮೂಲಕ ಫೌಂಡೇಷನ್ ಹಾಕಿ ನೀರಿಗೆ ವ್ಯವಸ್ಥೆ ಮಾಡಲಾಗುವುದು. ಉಳಿದ ಕಡೆಗಳಲ್ಲಿ 6 ಪಂಪುಸೆಟ್ಟು ಮತ್ತು ಮೋಟಾರುಗಳನ್ನು ಇನ್‌ಸ್ಟಾಲ್ ಮಾಡಿ ಇರಿಗೇಷನ್ನಿಗೆ ಮತ್ತು ಕುಡಿಯುವ ನೀರಿನ ಸೌಲಭ್ಯ ಮಾಡುವವರಿದ್ದಾರೆ. ಸರಕಾರ ಸಾಕಷ್ಟು ಮಾಡುತ್ತಿದೆ, ಇನ್ನುಮುಂದೆ ಸಹ ಸಾಕಷ್ಟು ಕಾರ್ಯ ಮಾಡಿ ಜನರಿಗೆ ಅನುಕೂಲ ಮಾಡುವುದಿದೆ. ಆರ್ಮುಗಂರವರೂ ಸಹ ತಮ್ಮ ವರದಿಯಲ್ಲಿ ಮುಂಬೈ ಮುಂತಾದ ಕಡೆಗಳಲ್ಲಿರುವಂತೆ ಮೈಸೂರಿನಲ್ಲೂ ಫ್ಯಾಮಿನ ಕೋಡ್ ಜಾರಿಗೆ ತರಬೇಕೆಂದು ಹೇಳಿರುವುದು ಯೋಗ್ಯವಾಗಿದೆ. ಕ್ಷಾಮ ಪೀಡಿತ ಪ್ರದೇಶದಲ್ಲಿ

ಮುದುಕರಿಗೆ, ಡಿಸೇಬಲ್ಡ್ ಜನರಿಗೆ ಗಂಜಿ ಕೇಂದ್ರ ತೆರೆದು, ಮುಫತ್ತಾಗಿ ಗಂಜಿಯನ್ನು ಕೊಡಲು ಸರ್ಕ್ಯುಲರ್ ಕಳಿಸಿದ್ದಾರೆ. ಜನರು ವಾಲಂಟರಿಯಾಗಿ ಅದಕ್ಕಾಗಿ ಮುಂದೆ ಬಂದು ಸರಕಾರದ ಸೌಲಭ್ಯ ಪಡೆಯಬೇಕು, ಇದರ ಬಗ್ಗೆ ಆರ್ಮುಗಂರವರ ಸೂಚನೆ ಸರಿಯಾಗಿದೆ. ಅವರು ತಮ್ಮ ವರದಿಯ 87–88ನೇ ಪುಟಗಳಲ್ಲಿ ಕೊಟ್ಟಿರುವ 10 ಸಲಹೆಗಳು ಯೋಗ್ಯವಾಗಿವೆ, ಅವನ್ನು ಕಾರ್ಯಾಚರಣೆಗೆ ತರಬೇಕೆಂದು ಪ್ರಾರ್ಥನೆ ಮಾಡುತ್ತೇನೆ.

77ನೇ ಪುಟದಲ್ಲಿ ಹೇಳಿದ ಹಾಜರಿ ಸಿಸ್ಟಂ ಯೋಗ್ಯವಾದುದ್ದು. ದುಷ್ಕಾಲದಲ್ಲಿ ಜನತೆಗೆ ಜೀವನ ಮಾಡಲು ಸಾಮರ್ಥ್ಯವಿಲ್ಲ. ಅಳತೆ ತೆಗೆದುಕೊಂಡು ಕೂಲಿ ಕೊಟ್ಟರೆ ದಿನಕ್ಕೆ ಒಂದು ರುಪಾಯಿ ಕೂಡ ಬೀಳುವುದಿಲ್ಲ. ಇದು ಸರಿಯಲ್ಲ ಎಂದು ಅವರು ವರದಿಯಲ್ಲಿ ಹೇಳಿರುವುದು ಯುಕ್ತವಾಗಿದೆ. ಎಷ್ಟು ಗಂಟೆ ಕೆಲಸ ಮಾಡುವರೆಂಬುದನ್ನು ಲೆಖ್ಖ ಹಾಕಿ ನಾಮಿನಲ್ ರೋಲ್ ಇಟ್ಟು ಕೂಲಿ ಕೊಡಬೇಕೆಂದು ವರದಿಯಲ್ಲಿ ಹೇಳಿದ್ದು ಆ ಪ್ರಕಾರ ವ್ಯವಸ್ಥೆ ಮಾಡಬೇಕು.

ಕಾಲೇಜು ಫೀ ವಿಷಯದಲ್ಲಿ ಆರ್ಮುಗಂ ಅವರ ಸಲಹೆ ಯೋಗ್ಯವಾಗಿದೆ. ಆ ಪ್ರಕಾರ ಎಲ್ಲಾ ವಿದ್ಯಾಥಿಗಳಿಗೂ ಫೀ ವಿಷಯದಲ್ಲಿ ರಿಯಾಯಿತಿ ಕೊಡಬೇಕೆಂದು ಹೇಳುತ್ತೇನೆ.

ಕುಡಿಯುವ ನೀರಿನ ವ್ಯವಸ್ಥೆಗೆ ಸರಕಾರ ತಕ್ಕ ಪ್ರಯತ್ನ ಮಾಡಿದೆ. ಆದರೆ ಅದು ಸಾಕಷ್ಟಾಗಿಲ್ಲ. ಕೃಷ್ಣಾ ಹೊಳೆಯಲ್ಲಿ ನೀರು ಹರಿಯುವುದು ಈಗ ನಿಂತಿದೆ. ಜಮಖಂಡಿ, ರಬಕವಿ, ಬನಹಟ್ಟಿ ಮುಂತಾದ ಕಡೆ ಕುಡಿಯುವ ನೀರಿನ ಅಭಾವವಿದೆ. ಇದನ್ನು ಗಮನಿಸಿ ಈ ಭಾಗದಲ್ಲಿ ರಿಗ್ಸ್‌ನಿಂದ ಬಾವಿ ತೆಗೆಸಿ ಕುಡಿಯುವ ನೀರಿಗೆ ಕೂಡಲೆ ಏರ್ಪಾಡು ಮಾಡಬೇಕೆಂದು ಸಲಹೆ ಮಾಡುತ್ತೇನೆ.

ಸರಕಾರ ಶಕ್ಯವಿರುವ ಪ್ರಯತ್ನವನ್ನೆಲ್ಲಾ ಮಾಡಿದೆ. ಇನ್ನೂ ಹೆಚ್ಚು ಪ್ರಯತ್ನ ಮಾಡಬೇಕು. ಕೇಂದ್ರ ಸರಕಾರದ ಸ್ಟಡಿ ಟೀಂ ಎರಡನೆಯದು ಬರುವುದಿದೆ. ಅದು ಬರಗಾಲ ಪೀಡಿತ ಪ್ರದೇಶಗಳನ್ನು ಭೇಟಿ ಮಾಡುವುದು. ಈಗ ನಮ್ಮ ಮುಂದಿರುವ ವರದಿಯಲ್ಲಿ ಹೇಳಿರುವಂತೆ ಕೇಂದ್ರ ಸರಕಾರ ಈಗ ಕೊಟ್ಟಿರುವ ಹಣ ಸಾಲುವುದಿಲ್ಲ. ಎರ್ಡನೇ ಟೀಂ ಬಂದಾಗ ಸರಕಾರದವರು ಆಮ್ಬುಗಂರವರ ಸಲಹೆ ಪ್ರಕಾರ 50 ಕೋಟಿ ರೂಪಾಯಿಗಳನ್ನಾದರೂ ಬೇಡಬೇಕು. ಕ್ಷಾಮ ಪೀಡಿತ 4 ಜಿಲ್ಲೆಗಳಲ್ಲಿ ಅದರಲ್ಲೂ ವಿಶೇಷವಾಗಿ ವಿಜಾಪೂರ ಜಿಲ್ಲೆಯ ಇಂಡಿ, ಸಿಂದಗಿ, ಜಮಖಂಡಿ ಮುಂತಾದ ತಾಲೂಕುಗಳಿಗೆ ಹೆಚ್ಚು ಗಮನ ಕೊಟ್ಟು ಹೆಚ್ಚು ಪರಿಹಾರ ಒದಗಿಸಬೇಕೆಂದು ಹೇಳಿ ನನ್ನ ಮಾತು ಮುಗಿಸುತ್ತೇನೆ.

# ರಾಜ್ಯಪಾಲರ ಭಾಷಣದ ವಂದನಾರ್ಪಣೆ ನಿಲುವಳಿ ಚರ್ಚೆ

## 19ನೇ ಫೆಬ್ರವರಿ 1973

ಶ್ರೀ ಪಿ.ಎಂ. ಬಾಂಗಿ (ಜಮಖಂಡಿ)– ಮಾನ್ಯ ಸಭಾಪತಿಗಳೇ, ರಾಜ್ಯಪಾಲರ ಭಾಷಣಕ್ಕೆ ವಂದನಾರ್ಪಣಾ ಗೊತ್ತುವಳಿಗೆ ನಾನು ಬೆಂಬಲ ಕೊಡುತ್ತಿದ್ದೇನೆ. ನಮ್ಮ ಈಗಿನ ಸಮಾಜವಾದಿ ಸರ್ಕಾರ, ಸಮಾಜದಲ್ಲಿ ಸಮಾನತೆ ತರಲು ಬೇರೆ ಬೇರೆ ಕಾರ್ಯಕ್ರಮಗಳನ್ನು ಹಾಕಿ ಮುಂದುವರೆಯುತ್ತಿದೆ. ಹಿಂದೆ ಯಾವ ಸರಕಾರಕ್ಕೂ ಆಗದ ಕೆಲಸವನ್ನು ನಮ್ಮ ಸರಕಾರ ಮಾಡತೊಡಗಿದೆ. ಅದರಲ್ಲೂ ಮಹತ್ವದ ಕೆಲಸವೆಂದರೆ ಬರಗಾಲಕ್ಕೆ ಈಡಾಗಿರುವ ಜನತೆಗೆ ಖಾಯಂ ಪರಿಹಾರ ಒದಗಿಸಲು ಇರಿಗೇಷನ್ ಪ್ರಾಜೆಕ್ಟುಗಳನ್ನು ಜಾರಿಗೆ ತಂದು ನಿಜವಾಗಿಯೂ ಉತ್ತಮ ಕೆಲಸ ಮಾಡುತ್ತಿದೆ.

### 1) ನೇಕಾರರ ಕುರಿತು:

ಪವರ್ ಲೂಮಿನವರು ಟೆಕ್ಸ್‌ಟೈಲ್ ಕಮೀಷನರ್ ಹುಕುಂ ಧಿಕ್ಕರಿಸಿ ಬಣ್ಣದ ಬಟ್ಟೆಗಳನ್ನು ತಯಾರಿಸುತ್ತಿದ್ದರು. ಇದರಿಂದ ಶ್ರೀಮಂತರು ಅತಿ ಶ್ರೀಮಂತರಾದರು. ಈ ಹುಕುಮಿನ ಜಾರಿಗೆ ಹಿಂದಿನ ವೀರೇಂದ್ರ ಪಾಟೀಲ ಸರಕಾರವಾಗಲೀ ರಾಜ್ಯಪಾಲರ ಆಡಳಿತವಾಗಲೀ ಸರಿಯಾದ ಪ್ರಯತ್ನ ಮಾಡಲಿಲ್ಲ. ಆದರೆ ನಮ್ಮ ಸರಕಾರ ಬಂದ ಕೂಡಲೆ ಟೆಕ್ಸ್‌ಟೈಲ್ ಕಮೀಷನರ್ ಹುಕಮನ್ನು ಕಟ್ಟುನಿಟ್ಟಾಗಿ ಜಾರಿಗೆ ತಂದು ಕೈಮಗ್ಗದಲ್ಲಿ ದುಡಿಯುವ ಬಡ ನೇಕಾರರಿಗೆ ಸಹಾಯ ಮಾಡುವ ಮನಸ್ಸುಮಾಡಿ ಸೂಕ್ತ ಕ್ರಮ ತೆಗೆದುಕೊಂಡಿದೆ. ಇದರ ಪರಿಣಾಮವಾಗಿ ಪವರ್ ಲೂಮಿನವರು ಮೈಸೂರು ರಾಜ್ಯದಲ್ಲಿ ಕೇವಲ ಬಿಳಿಬಟ್ಟೆಗಳನ್ನು ನೇಯುತ್ತಿದ್ದಾರೆ, ಬಣ್ಣದ ಬಟ್ಟೆ ನೇಯುತ್ತಿಲ್ಲ. ಇದರಿಂದ 10 ಲಕ್ಷ ನೇಕಾರರ ಜೀವನ ಸುಗಮವಾಗಿದೆ. ಇದು ಸಂತೋಷದ ವಿಚಾರ.

## 2) ಶಿಕ್ಷಣದ ಕುರಿತು:

ಶಿಕ್ಷಣದ ವಿಷಯ ತೆಗೆದುಕೊಂಡರೆ ಸುಮಾರು 200 ಜೂನಿಯರ್ ಕಾಲೇಜುಗಳು ಬಂದಿವೆ. ಪ್ರಾಥಮಿಕ, ಮಾಧ್ಯಮಿಕ ಮತ್ತು ಕಾಲೇಜು ಶಿಕ್ಷಣದಲ್ಲಿ ಪ್ರಗತಿಯಾಗಿರುವುದು ಸಂತೋಷದ ಸಂಗತಿ.

## 3) ಕುಡಿಯುವ ನೀರಿನ ಕುರಿತು:

ಕುಡಿಯುವ ನೀರಿನ ಸೌಕರ್ಯಕ್ಕೆ ಸರ್ಕಾರ ವಿಶೇಷ ಗಮನ ಕೊಟ್ಟರೂ ಇನ್ನೂ ಸಾಕಷ್ಟು ಅನುಕೂಲವಾಗಿಲ್ಲ. ವಿಜಾಪೂರ ಜಿಲ್ಲೆಯ ನೀರಿನ ತೊಂದರೆ ನಿವಾರಣೆಗೆ ಮನವಿ ಮಾಡಿದ್ದೇವೆ. ಕೃಷ್ಣಾ ನದಿ ದಡದಲ್ಲಿರುವ ಹಳ್ಳಿಗಳಿಗೆ ನೀರಿನ ಸರಬರಾಜಿಗೆ ಕ್ರಮ ಕೈಕೊಳ್ಳಬೇಕೆಂಬುದು ನನ್ನ ಒತ್ತಾಯ.

## 4) ನೀರಾವರಿ ಸೌಲಭ್ಯ ಕುರಿತು:

ಕ್ಷಾಮ ಪೀಡಿತ ಪ್ರದೇಶದಲ್ಲಿ ಕೃಷ್ಣಾ ನದಿಯಲ್ಲಿ Barrageಗಳನ್ನು ಕಟ್ಟಿ ಲಿಫ್ಟ್ ಇರಿಗೇಷನ್ ಸೌಕರ್ಯ ಮಾಡಿಕೊಡಬೇಕೆಂಬ ನಮ್ಮ ವಿನಂತಿಯಂತೆ, ಸರಕಾರ ಬೇರೆ ಬೇರೆ ಸ್ಥಳಗಳಲ್ಲಿ ಲಿಫ್ಟ್ ಇರಿಗೇಷನ್ನಿಗೆ ವ್ಯವಸ್ಥೆ ಮಾಡಿ ಸಾಕಷ್ಟು ಬೆಳೆ ತೆಗೆಯಲು ಅನಕೂಲ ಮಾಡಿಕೊಡಲಿದೆ. ಮೈನರ್ ಇರಿಗೇಷನ್, ಲಿಫ್ಟ್ ಇರಿಗೇಷನ್ ಮುಂತಾದವಕ್ಕೆ ಸರಕಾರ ಹೆಚ್ಚು ಗಮನ ಕೊಡಬೇಕೆಂದು ನಾನು ಈ ಸಂದರ್ಭದಲ್ಲಿ ಸೂಚಿಸುತ್ತೇನೆ.

## 5) ನ್ಯಾಯಾಂಗದ ಕುರಿತು:

ಭೂಸುಧಾರಣಾ ಬಿಲ್ಲಿನ ಬಗ್ಗೆ ಜಾಯಿಂಟ್ ಸಿಲೆಕ್ಟ್ ಕಮಿಟಿ ವರದಿ ಬಂದ ಕೂಡಲೆ ಅದನ್ನು ಮಂಡಿಸುವುದಾಗಿ ರಾಜ್ಯಾಪಾಲರ ಭಾಷಣದಲ್ಲಿ ಹೇಳಿದೆ. ಅದರಿಂದ ಗೇಣಿದಾರರಿಗೆ ಸಾಕಷ್ಟು ಅನುಕೂಲವಾಗಲಿದೆ. ಇನ್ನೂ ಬೇರೆ ವಿಷಯಗಳ ಬಗ್ಗೆ ರಾಜ್ಯಪಾಲರ ಭಾಷಣದಲ್ಲಿ ಕಾರ್ಯಕ್ರಮಗಳನ್ನು

ಸೂಚಿಸಿದ್ದು, ಅವು ಜಾರಿಯಲ್ಲಿ ಬರುತ್ತವೆಂಬ ವಿಶ್ವಾಸದಿಂದ ವಂದನಾರ್ಪಣೆಯ ಸೂಚನೆಗೆ ಸಂಪೂರ್ಣ ಬೆಂಬಲ ಕೊಟ್ಟು ನನ್ನ ಭಾಷಣ ಮುಗಿಸುತ್ತೇನೆ.

## ಅಂದಾಜು ಆಯವ್ಯಯದ ಮೇಲಿನ ಚರ್ಚೆ

### 8ನೇ ಮಾರ್ಚ್ 1973

ಶ್ರೀ ಪಿ. ಎಂ. ಬಾಂಗಿ (ಜಮಖಂಡಿ)– ಮಾನ್ಯ ಅಧ್ಯಕ್ಷಣಿಯವರೇ, 1973–74ನೇ ವರ್ಷದ ಅಂದಾಜು–ಪಟ್ಟಿಗೆ ಬೆಂಬಲ ನೀಡಿ, ವಿರೋಧಪಕ್ಷದ ಸದಸ್ಯರ ಟೀಕೆಗಳು ಸರಿಯಲ್ಲವೆಂದು ಹೇಳಬಯಸುತ್ತೇನೆ. ನಮ್ಮ ಪಕ್ಷದ ಸರ್ಕಾರ ಚುನಾವಣೆ ಕಾಲದ ಕೆಲವು ಆಶ್ವಾಸನೆಗಳನ್ನು ಸಂಪೂರ್ಣ ಈಡೇರಿಸಲು ಮುಂದಾಗಿದೆ. ಮೊದಲನೆಯದು ಉಳುವವನು ಭೂ ಮಾಲೀಕನೆಂಬ ತತ್ವದ ಲ್ಯಾಂಡ್ ರಿಫಾರ್ಮ್ಸ್ ಬಿಲ್ಲು ಸಿಲೆಕ್ಟ್ ಕಮಿಟಿಗೆ ಹೋಗಿದೆ. ಸ್ವಲ್ಪ ದಿವಸಗಳಲ್ಲೇ ಬಿಲ್ಲು ಅಸೆಂಬ್ಲಿ ಮುಂದೆ ಬರುವ ಭರವಸೆಯಿದೆ. ಎರಡನೆಯ ಭರವಸೆ ಎಂಪ್ಲಾಯ್ಮೆಂಟ್‌ಗೆ ಸಂಬಂಧಸಿದ್ದು. ಕ್ಷಾಮ ಪೀಡಿತ ಪ್ರದೇಶಗಳಲ್ಲಿ 10 ಲಕ್ಷ 76 ಸಾವಿರ ಜನಗಳಿಗೆ ಉದ್ಯೋಗಾವಕಾಶಗಳನ್ನು ನಮ್ಮ ಸರ್ಕಾರ ಮಾಡಿ ಕೊಟ್ಟಿದೆ. ಇದಕ್ಕೆ 45 ಕೋಟಿ 27 ಸಾವಿರ ರೂಪಾಯಿ ಖರ್ಚು ತಗಲುವ ಅಂದಾಜಿದೆ. ವಿದ್ಯಾವಂತ ನಿರುದ್ಯೋಗಿಗಳ ಉದ್ಯೋಗಾವಕಾಶಕ್ಕೆ ನಮ್ಮ ಸರ್ಕಾರ ಪ್ರಯತ್ನ ನಡೆಸಿದೆ. ಆ ಬಗ್ಗೆ ಅರ್ಥ ಮಂತ್ರಿಗಳ ಭಾಷಣದಲ್ಲಿ 17ನೇ ಪೇಜಿನ 7ನೇ ಪ್ಯಾರಾದಲ್ಲಿ ಹೀಗೆ ಹೇಳಲಾಗಿದೆ.

"The problem of creating employment opportunities particularly for the educated unemployed is receiving special attention. The Government of India has provided Rs. 100 crores for this programme in their budget for 1973-74 for the country. The State Government is also preparing schemes for generating employment opportunities for the educated un-employed. Every effort will be made to secure the maximum Central assistance towards this programme".

ಈ ಪ್ರಕಾರ ನಮ್ಮ ಪಕ್ಷ ಚುನಾವಣೆ ಕಾಲಕ್ಕೆ ಕೊಟ್ಟ ವಚನಗಳನ್ನು ಸಂಪೂರ್ಣ ಪಾಲಿಸುತ್ತಿದೆ. ಬಡತನ ನಿವಾರಣೆಗೆ ಸರ್ಕಾರ ಮುಂದಾಗಿದೆ. ಬಡವರಿಗಾಗಿ ಈ ವರ್ಷ 20 ಸಾವಿರ ಮನೆಗಳನ್ನು ಕಟ್ಟಿ ಕೊಡಲು, 5 ಕೋಟಿ ರೂಪಾಯಿಯ ಅಂದಾಜು ಮಾಡಲಾಗಿದೆ. ಜನಗಳು ನಮ್ಮ ಪ್ರಧಾನ ಮಂತ್ರಿಗಳ ಮೇಲೆ ಬಹಳ ವಿಶ್ವಾಸ ಇಟ್ಟಿದ್ದಾರೆ ಮತ್ತು ನಮ್ಮ ಇಂದಿರಾ ಗಾಂಧಿಯವರ ಪಕ್ಷದ ಪ್ರತಿಷ್ಠೆ ಯಾವ ರೀತಿಯಲ್ಲೂ ಕಡಿಮೆಯಾಗಿಲ್ಲ ಎನ್ನುವುದಕ್ಕೆ ಆಲಮಟ್ಟಿಗೆ ಅವರು ಬಂದ ಸಮಯದಲ್ಲಿ 30 ಸಾವಿರ ಜನರು ಬಿಸಿಲಿನಲ್ಲಿ ಕಾಯುತ್ತಾ ಕೂತಿದ್ದು ಸಾಕ್ಷಿ.

ಈ ಸಂದರ್ಭದಲ್ಲಿ ನಾನು ಹೇಳಬಯಸುವುದೇನೆಂದರೆ, ನಮ್ಮ ರಾಜ್ಯದಲ್ಲಿನ ಕೈಮಗ್ಗ ನೇಕಾರರಿಗೆ ಸಾಕಷ್ಟು ಸಹಾಯ ಸಿಕ್ಕಿಲ್ಲ. ವಿಜಾಪೂರ ಜಿಲ್ಹೆಯಲ್ಲಿ 32 ಸಾವಿರ ಮಗ್ಗಗಳ ಮೇಲೆ ಒಂದು ಲಕ್ಷದ 60 ಸಾವಿರ ನೇಕಾರರು ಜೀವನ ನಡೆಸಿದ್ದಾರೆ. ಗುಲ್ಬರ್ಗಾ ಜಿಲ್ಲೆಯಲ್ಲಿ 17 ಸಾವಿರ ಕೈಮಗ್ಗಗಳನ್ನು 85 ಸಾವಿರ ನೇಕಾರರು ಅವಲಂಬಿಸಿದ್ದಾರೆ. ವಿಜಾಪೂರ ಜಿಲ್ಲೆಯಲ್ಲಿ ಒಂದು ಮಗ್ಗಕ್ಕೆ 15 ಕೆ.ಜಿ.ಯಂತೆ ಪ್ರತಿ ತಿಂಗಳು 4 ಲಕ್ಷ 80 ಸಾವಿರ ಕೆ.ಜಿ. ನೂಲು ಬೇಕು. ಆದರೆ ಸಧ್ಯಕ್ಕೆ 40 ಸಾವಿರ ಕೆ.ಜಿ. ನೂಲನ್ನು ಸರ್ಕಾರಿ ಗೋಡೌನ್ ಮುಖಾಂತರ ವಿತರಣೆ ಮಾಡುತ್ತಿದ್ದು, ಇದು ಒಂದು ದಿವಸಕ್ಕೂ ಸಾಲುವುದಿಲ್ಲ. ಗುಲ್ಬರ್ಗಾ ಜಿಲ್ಹೆಯ ನೇಕಾರರಿಗೆ ತಿಂಗಳಿಗೆ 2 ಲಕ್ಷ 50 ಸಾವಿರ ಕೆ.ಜಿ. ನೂಲು ಬೇಕು. ಆದರೆ ಕೇವಲ 22 ಸಾವಿರ ಕೆ.ಜಿ. ವಿತರಣೆಯಾಗುತ್ತಿದೆ. ಬೀದರ ಜಿಲ್ಲೆಯ ನೇಕಾರರಿಗೆ ಒಂದು ಲಕ್ಷ ಕೆ.ಜಿ. ನೂಲು ಬೇಕು. ಆದರೆ ಕೇವಲ 66 ಸಾವಿರ ಕೆ.ಜಿ. ನೂಲಿಗೆ ವ್ಯವಸ್ಥೆಯಾಗಿದೆ. ಈ ಪ್ರಕಾರ ನೂಲಿನ ತೀವ್ರ ಕೊರತೆಯಿದೆ. ನೇಕಾರರು ತಯಾರು ಮಾಡಿದ ಸೀರೆಗಳಿಗೆ ಎಲ್ಲೂ ಗಿರಾಕಿಗಳಿಲ್ಲ. ಬೇರೆ ಉದ್ಯೋಗದ ಮೂಲಕ ನೇಕಾರರ ಸಮಸ್ಯೆ ಪರಿಹರಿಸಬೇಕು. ಬನಹಟ್ಟಿಯ ನೇಕಾರರಿಗೆ ಗೋಡೆಕಟ್ಟುವ ಮಣ್ಣು ತೆಗೆಯುವ ಕೆಲಸ ಆಗಲಿಲ್ಲ. ಅವರ ಕೈಗಳ ಮೇಲೆ ಗುಳ್ಳೆಗಳು ಎದ್ದು ತ್ರಾಸ ಆಯಿತು. ಅದಕ್ಕೋಸ್ಕರ ಅವರಿಗೆ ಬನಹಟ್ಟಿಯಲ್ಲಿ ಅನಾಥರ ಆಶ್ರಯಕ್ಕೆ ಸೌಕರ್ಯ ಮಾಡಿದ್ದಾರೆ. ರಾಜಸ್ತಾನದಿಂದ ಬಂದ ಶ್ರೀಮಂತರು ಅನ್ನ ಛತ್ರ ಹಾಕಿದ್ದಾರೆ.

ಮೂರು ಸಾವಿರ ಮಠದ ಸ್ವಾಮಿಗಳು ಪಾದಯಾತ್ರೆ ಮಾಡಿ ಎರಡು ಲಕ್ಷ ರೂಪಾಯಿ ಮತ್ತು 200 ಚೀಲ ಧಾನ್ಯ ಕೂಡಿಸಿ ನೇಕಾರರಿಗೆ ವಿತರಣೆ ಮಾಡಲಿದ್ದಾರೆ. ಅದೇ ಪ್ರಕಾರ ಪೇಜಾವರ ಮಠದ ಸ್ವಾಮಿಗಳು ಪಾದಯಾತ್ರೆ ಮಾಡಿ ಕ್ಷಾಮ ಪೀಡಿತರಿಗೆ ಸಹಾಯ ಮಾಡಲು ಹೊರಟಿದ್ದಾರೆ. ಈ ಪ್ರಸಂಗದಲ್ಲಿ ನಮ್ಮ ವಿರೋಧ ಪಕ್ಷದವರು ಸರ್ಕರದ ಜೊತೆಗೆ ಸಹಕಾರಿಸಿ ಬಡವರಿಗೆ ಸಹಾಯ ಮಾಡುವುದನ್ನು ಬಿಟ್ಟು ವಿಜಾಪೂರ ಜಿಲ್ಲೆಯಲ್ಲಿ ಅನ್ನ ಸತ್ಯಾಗ್ರಹಕ್ಕೆ ಮುಂದಾಗಿದ್ದಾರೆ. ಇದರ ಬದಲು ಪಾದಯಾತ್ರೆ ಮಾಡಿ ಹಣ ಮತ್ತು ದವಸ ಕೂಡಿಸಿ ಜನರಿಗೆ ಸಹಾಯ ಮಾಡಿದರೆ ಹೆಚ್ಚು ಒಳಿತು.

ಇದೇ ತಿಂಗಳು 10ನೇ ತಾರೀಖು ಪ್ರಧಾನ ಮಂತ್ರಿಗಳು ಆಲಮಟ್ಟಿಗೆ ಬಂದಾಗ ಕಾಂಗ್ರೆಸ್ ಸದಸ್ಯರಾದ ನಾನು ಮತ್ತು ನಮ್ಮ ಪಾರ್ಲಿಮೆಂಟ್ ಸದಸ್ಯರು, ಮುಖ್ಯಮಂತ್ರಿಗಳು ಕೂಡಿ ಯಾವತ್ತೂ ವಿಷಯಗಳನ್ನು ಅವರಿಗೆ ಮನವರಿಕೆ ಮಾಡಿಕೊಡುವ ಪ್ರಯತ್ನ ಮಾಡಿದ್ದೆವು. ಆಲಮಟ್ಟಿ, ನಾರಾಯಣಪೂರ ಬಂಧಾರಾಗಳನ್ನು ರಾಷ್ಟ್ರೀಯ ಯೋಜನೆಗಳನ್ನಾಗಿ ಮಾಡಬೇಕು, ಮಿರಜ - ಹುಬ್ಬಳ್ಳಿ ಮತ್ತು ರಾಯಬಾಗ – ರಾಯಚೂರು ಲಿಂಕ ರೈಲ್ವೆ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಬೇಕು, ತಾಳಿಕೋಟೆ ಮುಂತಾದ ಕಡೆ ಸಿಮೆಂಟ್ ಕಾರ್ಖಾನೆ ಹಾಕಬೇಕು ಮುಂತಾದ ನಮ್ಮ ಮನವಿಗಳನ್ನು ಕೇಳಿದ ಪ್ರಧಾನ ಮಂತ್ರಿ ಶ್ರೀಮತಿ ಇಂದಿರಾ ಗಾಂಧಿಯವರು 'ವಿಚಾರ ಮಾಡಿ ಯೋಗ್ಯ ಪರಿಹಾರ ಕೊಡುತ್ತೇನೆ, ಆ ಬಗ್ಗೆ ಪರಿಶೀಲನೆ ಮಾಡಬೇಕಾಗಿದೆ.' ಎಂದು ನಮಗೆ ವಚನ ಕೊಟ್ಟು ಹೋಗಿದ್ದಾರೆ.

ನೇಕಾರರ ಸಂಬಂಧ ಸರ್ಕಾರ ಕೊಟ್ಟಂಥ ವಚನವೆಂದರೆ 15 ಕಾಮನ್ ವೀವಿಂಗ್ ಸೆಂಟರ್‌ಗಳನ್ನು ನಮ್ಮ ರಾಜ್ಯದಲ್ಲಿ ತೆರೆದು, ಇಂಥ ಪ್ರತಿಯೊಂದು ಸೆಂಟರ್‌ದಲ್ಲಿ ಸಾಕಷ್ಟು ಜನರಿಗೆ ಕೆಲಸವನ್ನು ಕೊಡುವದು ಆಗಿದೆ. ಆದರೆ ಆ ಬಗ್ಗೆ ಇನ್ನೂ ವ್ಯವಸ್ಥೆಯಾಗಿಲ್ಲ. ಅದನ್ನು ಕೂಡಲೇ ಸರ್ಕಾರ ಮಾಡಬೇಕೆಂದು ನಾನು ಕೇಳಿಕೊಳ್ಳುತ್ತೇನೆ. ಕೈಮಗ್ಗ ನೇಕಾರರಿಗೋಸ್ಕರ ಪ್ರತ್ಯೇಕ ಡೈರೆಕ್ಟೊರೇಟ್ ಮಾಡುತ್ತೇವೆಂದು ಸದನದಲ್ಲಿ ಸರ್ಕಾರ ವಚನ ಕೊಟ್ಟಿತ್ತು. ಆದರೆ ಬಜೆಟ್ಟಿನಲ್ಲಿ ಆ ಬಗ್ಗೆ ಏನೂ ಹಣ ಇಟ್ಟಿಲ್ಲ. ಈ ಬಗ್ಗೆ ಕೂಡ ನಮ್ಮ ಅರ್ಥ ಮಂತ್ರಿಗಳು ವಿಚಾರ ಮಾಡಬೇಕು. ಬನಹಟ್ಟಿಯಲ್ಲಿ 9 ಲಕ್ಷ ರೂಪಾಯಿ ವೆಚ್ಚದಲ್ಲಿ ಸೈಜಿಂಗ್

ಪ್ಲಾಂಟ್ ಕೊಡುತ್ತೇವೆಂದು ಸರ್ಕಾರ ಹೇಳಿತ್ತು. ಅದರ ಬಗ್ಗೆ ಇನ್ನೂ ಏನೂ ಆಗಿಲ್ಲ. ಡಿಸ್ಟ್ರೇಸ್ಡ್ ವೀವರ್ಸ್‌ಗೆ ನಾಲ್ಕು ಲಕ್ಷ ರೂಪಾಯಿ ಸಾಲ ಕೊಡುವ ವಚನದ ಬಗ್ಗೆ ಏನೂ ವ್ಯವಸ್ಥೆಯಾಗಿಲ್ಲ. ರಬಕವಿ, ಬನಹಟ್ಟಿ, ಇಳಕಲ್ ಮುಂತಾದ ಕಡೆ ಹತ್ತು ಲಕ್ಷ ರೂಪಾಯಿ ಪ್ಲೆಜ್ ಲೋನ್ (Pledge loan) ಕೊಡುವ ವಚನದ ಬಗ್ಗೆ ಯಾವುದೇ ವ್ಯವಸ್ಥೆಯಾಗಿಲ್ಲ. ಬನಹಟ್ಟಿ, ಇಳಕಲ್, ಗುರುಮಿಟಕಲ್, ಆಳಂದ, ಬೀದರ್, ರಾಮದುರ್ಗ ಮತ್ತು ಗದಗ ಈ ಏಳು ಸ್ಥಳಗಳಲ್ಲಿ ಪ್ರತ್ಯೇಕವಾಗಿ ನೂಲಿನ ಗೋಡೌನ್‌ಗಳು ಪ್ರಾರಂಭವಾಗಿವೆ. ಈ ಗೋಡೌನ್‌ಗಳ ನೂಲಿನ ವಿತರಣೆ ವ್ಯವಸ್ಥೆ ಸರಿಯಿಲ್ಲ. ಐದು ಪೌಂಡು ಅಥವಾ ಎರಡುವರೆ ಕೆ.ಜಿ. ನೂಲು ತೆಗೆದುಕೊಳ್ಳುವುದಕ್ಕೆ ನೇಕಾರರು ಹತ್ತಿಪ್ಪತ್ತು ಮೈಲ ದೂರ ಹೋಗಬೇಕಾಗಿದೆ. ಆದ್ದರಿಂದ ಗೋಡೌನ್‌ಗಳನ್ನು ಹೋಲ್‌ಸೇಲ್ ಕೇಂದ್ರ ಮಾಡಿ, ಪ್ರತಿಯೊಂದು ಗ್ರಾಮದಲ್ಲಿಯೂ ರೀಟೇಲ್ ಅಂಗಡಿ ಹಾಕಿ ನೇಕಾರರಿಗೆ ನೂಲು ಹಂಚುವ ಸೌಕರ್ಯ ಮಾಡಬೇಕು.

ಕುಡಿಯುವ ನೀರಿನ ಬಗ್ಗೆ ಹೇಳಬೇಕಾದರೆ, ವಿಜಾಪೂರ ಜಿಲ್ಲೆಯಲ್ಲಿ ಕೃಷ್ಣಾ ನದಿ ದಂಡೆಯ ಗ್ರಾಮಗಳಲ್ಲಿ ನೀರಿನ ಅಭಾವ ದೂರಮಾಡಲು ಇನ್ನೂ ವ್ಯವಸ್ಥೆ ಮಾಡಿಲ್ಲ. ಜಮಖಂಡಿ, ರಬಕವಿ, ಬನಹಟ್ಟಿ ಮುಂತಾದ ಕಡೆ ನೀರಿನ ಸಮಸ್ಯೆ ಇದೆ. ಅಲ್ಲಿನ ಜನಗಳಿಗೆ ಕೂಡಲೆ ಕುಡಿಯುವ ನೀರಿನ ವ್ಯವಸ್ಥೆ ಮಾಡಬೇಕೆಂದು ನಾನು ಸೂಚಿಸಬಯಸುತ್ತೇನೆ.

ಶಿಕ್ಷಣದ ವಿಷಯವಾಗಿ ಹೇಳಬೇಕಾದರೆ, ಕೆಲವು ಹೈಸ್ಕೂಲುಗಳಲ್ಲಿ ಪಾಸಾಗುವ ವಿದ್ಯಾರ್ಥಿಗಳ ದೊಡ್ಡ ಸಂಖ್ಯೆ ತೋರಿಸಲು ಸೊನ್ನೆ ಅಂಕ ಗಳಿಸಿದ ವಿದ್ಯಾರ್ಥಿಗೆ 35–40 ಮಾರ್ಕ್ಸ್ ಹಾಕಿ ವಾರ್ಷಿಕ ಪರೀಕ್ಷೆಗಳಲ್ಲಿ ಪಾಸ್ ಮಾಡಿಸುವ ಅವ್ಯವಹಾರ ನಡೆಯುತ್ತಿದೆ. ಅದನ್ನು ತಡೆಯಬೇಕು. ಕಾಪಿ ಮಾಡಿಸುವ ಮೆಟ್ರಿಕ್ ಸೆಂಟರ್‌ಗಳಿವೆ. ಅವನ್ನು ಬಂದ್ ಮಾಡಬೇಕು ಎಂದು ವಿದ್ಯಾ ಮಂತ್ರಿಗಳು ಜಮಖಂಡಿಗೆ ಬಂದ ಸಮಯದಲ್ಲಿ ವಿನಂತಿ ಮಾಡಿಕೊಂಡಿದ್ದೆವು. ಆ ಪ್ರಕಾರ ಅವರು ಮಾಡುವರೆಂದು ನಾವು ನಂಬಿದ್ದೇವೆ. ಸುಮಾರು 300 ಜೂನಿಯರ್ ಕಾಲೇಜುಗಳಿದ್ದು ಅವುಗಳಿಗೆ ಗ್ರ್ಯಾಂಟ್ ಇಲ್ಲ, ಶಿಕ್ಷಕರಿಗೆ ಪಗಾರ ಇಲ್ಲ. 80 ಪರ್ಸೆಂಟ್ ಗ್ರ್ಯಾಂಟ್ ಕೊಡುತ್ತೇವೆಂದು ಸರ್ಕಾರದ ಪರವಾಗಿ ಹೇಳುತ್ತಲೇ ಇದ್ದಾರೆ. ವಿದ್ಯಾ ಮಂತ್ರಿಗಳು ಆ ಬಗ್ಗೆ ವಿಚಾರ ಮಾಡಿ ಖಾಸಗಿ ಸಂಸ್ಥೆಯವರ

ಜೂನಿಯರ್ ಕಾಲೇಜುಗಳಿಗೆ ಗ್ರ್ಯಾಂಟ್ ಕೊಟ್ಟು ಅವು ಚೆನ್ನಾಗಿ ನಡೆಯಲು ಸಹಾಯ ಮಾಡಬೇಕೆಂದು ಸೂಚಿಸಬಯಸುತ್ತೇನೆ.

ಉದ್ಯೋಗದ ಬಗ್ಗೆ ಹೇಳಬೇಕಾದ ವಿಚಾರ ಏನೆಂದರೆ, ವಿಜಾಪೂರ ಜಿಲ್ಲೆಯ ನಮ್ಮ ಜಮಖಂಡಿ, ಬೀಳಗಿ, ಮುಧೋಳ ತಾಲೂಕುಗಳು ಎಮ್ಮೆ-ಹೈನು, ಹಾಲಿಗೆ ಹೆಸರಾಗಿವೆ. ಆದರೆ ಕೊಳ್ಳುವವರು ಇಲ್ಲದ ಮೂಲಕ ನಮ್ಮ ಉತ್ತಮ ಬೆಣ್ಣೆ, ತುಪ್ಪ ಮುಂತಾದುವು ಮಿರಜ, ಸಾಂಗ್ಲಿ ವಗೈರೆ ಪರ ಊರುಗಳಿಗೆ ಹೋಗುತ್ತಿವೆ. ಅದಕ್ಕಾಗಿ ನಮ್ಮ ಜಿಲ್ಲೆಯಲ್ಲಿ ಡೇರಿ ಫಾರಂ ಹಾಕಿ ಜನಗಳಿಗೆ ಉದ್ಯೋಗದ ವ್ಯವಸ್ಥೆ ಮಾಡಬೇಕೆಂದು ನಾನು ಸೂಚಿಸಬಯಸುತ್ತೇನೆ.

ಇನ್ನು ಫುಡ್ ಗ್ರೇನ್ಸ್ ವಿಚಾರವಾಗಿ ಹೇಳಬೇಕಾದರೆ ನಮ್ಮ ತಾಲೂಕಿನಲ್ಲಿ ಅದರಲ್ಲೂ ವಿಶೇಷವಾಗಿ ಬಡ ನೇಕಾರರಿಗೆ ಯಾವ ರೀತಿಯಿಂದಲೂ ಫುಡ್ ಗ್ರೇನ್ಸ್ ದೊರೆಯುತ್ತಿಲ್ಲ. ಆದುದರಿಂದ ಇಲ್ಲಿ ಸಾಕಷ್ಟು ಫುಡ್ ಗ್ರೇನ್ಸ್‌ಗೆ ವ್ಯವಸ್ಥೆ ಮಾಡಬೇಕೆಂದು ಈ ಸಮಯದಲ್ಲಿ ಕೇಳಿಕೊಳ್ಳುತ್ತೇನೆ.

ಇನ್ನು ನಮ್ಮ ತಾಲೂಕಿನ ಹಿಪ್ಪರಗಿ ಬ್ಯಾರೇಜ್‌ಗೆ 2 ಕೋಟಿ ರೂಪಾಯಿಗಳನ್ನು ಮಂಜೂರು ಮಾಡಿದ್ದಾರೆ. 2 ಲಕ್ಷ 4 ಸಾವಿರ ಎಕರೆಯ ಪ್ರದೇಶಕ್ಕೆ ನೀರಾವರಿ ಸೌಕರ್ಯ ಮಾಡಿಕೊಡುವ ಈ ಬ್ಯಾರೇಜ್ ಕೆಲಸ ಪ್ರಾರಂಭವಾಗಿ ಜನಗಳಿಗೆ ಸಾಕಷ್ಟು ಕೂಲಿ ದೊರೆತು, ಕುಡಿಯುವ ನೀರು ಮತ್ತು ಇರಿಗೇಷನ್‌ಗೆ ವ್ಯವಸ್ಥೆ ಆಗುತ್ತದೆಂದು ನಾನು ಭಾವಿಸಿದ್ದೇನೆ. ಅಧ್ಯಕ್ಷಿಣಿಯವರೇ, ಇಷ್ಟು ಹೊತ್ತಿನವರೆಗೆ ಈ ಅಂದಾಜು ಪತ್ರದ ಮೇಲೆ ಮಾತನಾಡಲು ಅವಕಾಶ ಕೊಟ್ಟಿದ್ದಕ್ಕಾಗಿ ತಮಗೆ ಆಭಾರಿಯಾಗಿದ್ದೇನೆ.

## ಹೆಚ್ಚುವರಿ ಬೇಡಿಕೆಯ ಬಿಲ್ಲಿನ ಮೇಲಿನ ಚರ್ಚೆ

### (23ನೇ ಮಾರ್ಚ್ 1973)

**ಶ್ರೀ ಪಿ. ಎಂ. ಬಾಂಗಿ (*ಜಮಖಂಡಿ*)**– ಮಾನ್ಯ ಉಪಾಧ್ಯಕ್ಷರೇ, ಇವೊತ್ತಿನ ದಿವಸ ಈ ಸಭೆಯ ಮಂದೆ ಇರುವ ಹೆಚ್ಚುವರಿ ಬೇಡಿಕೆಗಳನ್ನು

ಮತ್ತು ಅಪ್ರೋಪ್ರಿಯೇಷನ್ ಬಿಲ್ಲಿಗೆ ಬೆಂಬಲ ಕೊಡುತ್ತಾ ಕೆಲವು ಮಾತುಗಳನ್ನು ಹೇಳಬಯಸುತ್ತೇನೆ. ಈ ಸರ್ಕಾರದ ಮೇಲೆ ಜನಗಳಿಗೆ ವಿಶ್ವಾಸ ಹೆಚ್ಚಬೇಕಾದರೆ ಅವರು ಮಾಡಿದ ಘೋಷಣೆಗಳನ್ನೂ ಮತ್ತು ನೀಡಿದ ವಚನವನ್ನೂ ಸರ್ಕಾರ ಪೂರೈಸಬೇಕು.

ಎರಡನೆಯದು ಏನೆಂದರೆ ಕ್ಲೀನ್ ಅಡ್ಮಿನಿಸ್ಟ್ರೇಷನ್ ಅನ್ನು ಕೊಟ್ಟರೆ ಸರ್ಕಾರದ ಮೇಲೆ ವಿಶ್ವಾಸ ಹೆಚ್ಚುತ್ತದೆ. ಈಗ ಉದಾಹರಣೆಗೆ ಹೇಳುವುದಾದರೆ ಕೈಗಾರಿಕಾ ಖಾತೆಯಲ್ಲಿ ನೇಕಾರಿಕೆ ಸಲುವಾಗಿ ಒಂದು ಸೆಪರೇಟ್ ಡೈರೆಕ್ಟೋರೇಟ್ ಪ್ರಾರಂಭ ಮಾಡುತ್ತೇವೆ ಎಂದು ಕಳೆದ ಅಧಿವೇಶನದಲ್ಲಿ ಮಾನ್ಯ ಕೈಗಾರಿಕಾ ಮಂತ್ರಿಗಳು ವಚನ ಕೊಟ್ಟಿದ್ದರು. ಆದರೆ ಆ ಬಗ್ಗೆ ಬಜೆಟ್ ಅಂದಾಜು ಪತ್ರಿಕೆಯಲ್ಲಾಗಲೀ, ಹೆಚ್ಚುವರಿ ಬೇಡಿಕೆಯಲ್ಲಾಗಲೀ ಉಲ್ಲೇಖ ಇಲ್ಲ. ಜನಗಳಿಗೆ ಕೊಟ್ಟಂತಹ ವಚನವನ್ನು ಇಲ್ಲಿಯವರೆಗೂ ಪಾಲಿಸಿಲ್ಲ ಎಂದು ಹೇಳಲು ವಿಷಾದವಾಗುತ್ತದೆ. ಆದ್ದರಿಂದ ವಚನ ಪಾಲಿಸಬೇಕು ಎಂದು ಹೇಳಬಯಸುತ್ತೇನೆ.

ನಿರ್ಮಲ ಆಡಳಿತ ಕೊಡುವುದೂ ಸರ್ಕಾರದ ಮೇಲಿನ ಹೊಣೆ ಆಗಿದೆ. ಎಲ್ಲಾ ವಿಷಯಗಳಲ್ಲೂ ಜನಗಳಿಗೆ ನಿರ್ಮಲ ಆಡಳಿತ ಸಿಕ್ಕಿಲ್ಲ. ಇದು ನಿಜವಾಗಿಯೂ ವಿಷಾದ ಎನಿಸುತ್ತದೆ. ಮಾನ್ಯ ಅರ್ಥ ಮಂತ್ರಿಗಳ ಅಧೀನದಲ್ಲಿರುವ ಸೇಲ್ಸ್ ಟ್ಯಾಕ್ಸ್ ಇಲಾಖೆ ಬಗ್ಗೆ ಹೇಳುವುದಾದರೆ ಅಧಿಕಾರಿಗಳು ನಿರ್ಮಲ ರೀತಿಯಿಂದ ನಡೆದುಕೊಳ್ಳುವುದಿಲ್ಲ. ಜಮಖಂಡಿಯಲ್ಲಿ ಕಳೆದ 6 ತಿಂಗಳಲ್ಲಿ ಸೇಲ್ಸ್ ಟ್ಯಾಕ್ಸ್ ಅಧಿಕಾರಿಗಳ ವಿಷಯದಲ್ಲಿ ಜನಗಳು ಬೇಸತ್ತು ಸತ್ಯಾಗ್ರಹ ಕೂಡ ಮಾಡಿದ್ದಾರೆ. ಆದರೂ ಕೂಡ ಮಾನ್ಯ ಅರ್ಥಮಂತ್ರಿಗಳು ಈ ಬಗ್ಗೆ ಎಳ್ಳಷ್ಟೂ ಗಮನಕೊಟ್ಟಿಲ್ಲ. ಯಾರ ಮೇಲೆ ದೂರುಗಳು ಬಂದಿದೆಯೋ ಆ ಅಧಿಕಾರಿಗಳನ್ನು ಬೇರೆ ಕಡೆಗೆ ವರ್ಗಾವಣೆ ಕೂಡ ಮಾಡಿಲ್ಲ. ಇದು ವಿಷಾದ ಎನಿಸುತ್ತದೆ.

ಶಿಕ್ಷಣದ ಬಗ್ಗೆ ನಾಲ್ಕು ಮಾತುಗಳನ್ನು ನಾನು ಹೇಳಬಯಸುತ್ತೇನೆ. ಸರ್ಕಾರದವರು ಸುಮಾರು 300 ಜೂನಿಯರ್ ಕಾಲೇಜುಗಳನ್ನು ತೆಗೆದು

ಪ್ರಗತಿಪರ ಹೆಜ್ಜೆ ಇಟ್ಟಿದ್ದಾರೆ. ಆದರೆ ಪ್ರೈವೇಟ್ ಜೂನಿಯರ್ ಕಾಲೇಜುಗಳಿಗೆ ಇಲ್ಲಿಯವರೆಗೂ ಗ್ರ್ಯಾಂಟ್ ಕೊಟ್ಟಿಲ್ಲ. ಇದರಿಂದಾಗಿ ಅವು ಮುಂದಿನ ವರ್ಷ ಮುಚ್ಚುವ ಪ್ರಸಂಗ ಒದಗಿದೆ. ಕಂಪಲ್ಸರಿ ಎಜ್ಯುಕೇಶನ್ ಕಡೆಗೂ ಸರ್ಕಾರ ಗಮನ ಕೊಟ್ಟಿಲ್ಲ. ನಮ್ಮ ತಾಲೂಕಿನಲ್ಲಿ ಖಾಸಗೀ ಜನಗಳು ಕಂಪಲ್ಸರಿ ಎಜುಕೇಷನ್ ಕೊಡಲು ಕೆಲವು ಶಾಲೆಗಳನ್ನು ಪ್ರಾರಂಭ ಮಾಡಿದರೂ ಸರ್ಕಾರಿ ಅಧಿಕಾರಿಗಳು ಇದು ಕ್ರಮಬದ್ಧವಾಗಿಲ್ಲ, ನಿಮಗೆ ಶಾಲೆಗಳನ್ನು ನಡೆಸುವ ಅಧಿಕಾರವಿಲ್ಲ, ನಿಮ್ಮ ಮೇಲೆ ಏತಕ್ಕೆ ಕ್ರಮವನ್ನು ತೆಗೆದುಕೊಳ್ಳಬಾರದು ಎಂದು ಹೆದರಿಕೆ ನೋಟೀಸ್ ಕೊಡುತ್ತಿದ್ದಾರೆ. ಶಿಕ್ಷಣದಲ್ಲೂ ನಿರ್ಮಲ ಮತ್ತು ಪವಿತ್ರ ಆಡಳಿತ ಇಲ್ಲ. ಆದ್ದರಿಂದ ಸರ್ಕಾರ ಈ ಕಡೆ ಸರಿಯಾಗಿ ಗಮನಕೊಟ್ಟು ಶಾಲೆಗಳನ್ನು ಸರಿಯಾಗಿ ನಡೆಸುವ ವ್ಯವಸ್ಥೆ ಮಾಡಬೇಕು.

ಮೆಡಿಕಲ್ ಡಿಪಾರ್ಟ್‌ಮೆಂಟಿಗೆ ಸಂಬಂಧಪಟ್ಟ ಹಾಗೆ ಮಾತನಾಡುವುದಾದರೆ ಡಾಕ್ಟರ್‌ಗಳಿಗೆ ಪ್ರೈವೇಟ್ ಪ್ರ್ಯಾಕ್ಟೀಸ್ ಪರವಾನಿಗೆ ಕೊಟ್ಟ ಮೇಲೆ ಎಷ್ಟೋ ತಾಲೂಕುಗಳಲ್ಲಿ ಸರ್ಕಾರಿ ಆಸ್ಪತ್ರೆಯ ಡಾಕ್ಟರುಗಳು ಖಾಸಗೀ ದವಾಖಾನೆಗಳನ್ನು ಪ್ರಾರಂಭ ಮಾಡಿದ್ದಾರೆ. ಸರ್ಕಾರಿ ಆಸ್ಪತ್ರೆಗಳ ಕಡೆಗೆ ಸರ್ಕಾರ ಸಾಕಷ್ಟು ಗಮನ ಕೊಟ್ಟಿಲ್ಲ. ಒಂದು ಸಣ್ಣ ಉದಾಹರಣೆಯನ್ನು ಹೇಳುವುದಾದರೆ ಜಮಖಂಡಿಯಲ್ಲಿ ಎಕ್ಸರೇ ಪ್ಲಾಂಟ್ ಟ್ಯೂಬನ್ನು ಹಾಲೆಂಡಿನಿಂದ ತರಿಸಲು ಕಳೆದ ಒಂದು ವರ್ಷದಿಂದ ಪ್ರಯತ್ನ ಮಾಡಿದರೂ ಇಲ್ಲಿಯವರೆಗೂ ಅದು ಸಪ್ಲೈ ಆಗಿಲ್ಲ.

ಕೋಆಪರೇಟಿವ್ ಸೊಸೈಟಿಗಳ ವಿಷಯದಲ್ಲಿ ಹೇಳಿದಷ್ಟೂ ಕಡಿಮೆ. ಎಷ್ಟೋ ಸಂಸ್ಥೆಗಳಲ್ಲಿ 4ನೇ ಸೆಕ್ಷನ್ ಪ್ರಕಾರ ಕ್ರಮ ತೆಗೆದುಕೊಳ್ಳಲು ಡೆಪ್ಯುಟಿ ರಜಿಸ್ಟ್ರಾರ್ ಹುಕುಂ ಮಾಡಿದರೂ ಆ ಸಂಸ್ಥೆಗಳ ಮೇಲೆ ಕ್ರಮ ತೆಗೆದುಕೊಂಡಿಲ್ಲ. ಈ ಸಂಸ್ಥೆಗಳಲ್ಲಿ ಹಣದ ದುರುಪಯೋಗ ಹೆಚ್ಚಾಗಿದೆ. ಸರ್ಕಾರದವರು ಇಂಥವರ ಮೇಲೆ ಕೇಸ್ ಹಾಕಿ ಹಣ ವಸೂಲು ಮಾಡುತ್ತಿಲ್ಲ. ಆರ್ಬಿಟ್ರೇಶನ್ ಅವಾರ್ಡುಗಳು ಈ ವರೆಗೂ ಕಾರ್ಯಾಚರಣೆಗೆ ಬಂದಿಲ್ಲ. ಆದ್ದರಿಂದ ಆರ್ಬಿಟ್ರೇಶನ್ ಬದಲು ದಿವಾಣಿ ಕೋರ್ಟುಗಳಿಗೆ ಆ ಅಧಿಕಾರ ಕೊಟ್ಟರೆ ಒಳ್ಳೆಯದೆಂದು ಹೇಳುತ್ತೇನೆ.

ಇನ್ನು ಫ್ಯಾಮಿನ್ ಬಗ್ಗೆ ಹೇಳಬೇಕಾದರೆ ಬರಗಾಲ ಇರುವಲ್ಲಿ ಕುಡಿಯುವ ನೀರು, ಆಹಾರ ಧಾನ್ಯ ಮುಂತಾದವುಗಳ ಕೊರತೆ ನಿವಾರಣೆಗೆ ಗಮನಕೊಟ್ಟು ಜನರಿಗೆ ಅನುಕೂಲ ಮಾಡಿಕೊಡಬೇಕು. ಜನರಿಗೆ ಡೇಲಿ-ವೇಜಸ್ ಕೊಟ್ಟು ಉದ್ಯೋಗಕ್ಕೆ ವ್ಯವಸ್ಥೆ ಮಾಡಿ ಜನರ ಸಂರಕ್ಷಣೆ ಮಾಡಬೇಕು. ಇನ್ನು ಕೊಯ್ನಾ ಜಲಾಶಯದಿಂದ ಕೃಷ್ಣಾ ನದಿಗೆ ನೀರು ತರುವ ವಿಚಾರದ್ದು. ಮಹಾರಾಷ್ಟ್ರ ಸರ್ಕಾರದೊಡನೆ ವ್ಯವಹಾರ ಮಾಡಿ ಕೃಷ್ಣಾ ನದಿಗೆ ನೀರನ್ನು ಹರಿಸಿ ಜನರಿಗೆ ಕುಡಿಯುವ ನೀರು ಒದಗಿಸಿಕೊಡಬೇಕು.

ಇನ್ನು ಪೆನ್ಶನ್‌ದಾರರ ಬಗ್ಗೆ ಹೇಳುವುದಾದರೆ ನಮ್ಮ ತಾಲೂಕಿನ 53 ಪ್ರಾಥಮಿಕ ಶಿಕ್ಷಕರಿಗೆ ಇಂದಿನವರೆಗೆ ಪೆನ್ಶನ್ ಬಂದಿಲ್ಲ. ಅದರ ಬಗ್ಗೆ ಎ.ಜಿ. ಆಫೀಸಿನಲ್ಲಿಯೂ ವಿಚಾರ ಮಾಡಿ ಬಂದಿದ್ದೇನೆ. ಆದ್ದರಿಂದ ಆರ್ಥಿಕ ಮಂತ್ರಿಗಳು ಬೇಗನೆ ಅದನ್ನು ಮಾಡಿಕೊಡಬೇಕೆಂದು ಕೇಳಿಕೊಳ್ಳುತ್ತೇನೆ.

**ಶ್ರೀ ಎಂ.ವೈ. ಘೋರ್ಪಡೆ**– ಪೆನ್ಶನ್‌ನ್ನು ನಾನು ನೇರವಾಗಿ ಕೊಡುವುದಕ್ಕಾಗುವುದಿಲ್ಲ. ಅದನ್ನು ವಿದ್ಯಾ ಇಲಾಖೆಯಲ್ಲಿ ಹೋಗಿ ವರ್ಕ್‌ಔಟ್ ಮಾಡಿ ಫೈಲ್ ನನ್ನ ಹತ್ತಿರ ಬರುವಂತೆ ಮಾಡಿದರೆ ಅದನ್ನು ಕೂಡಲೇ ಮಾಡಬಹುದು. ಉಪಾಧ್ಯಾಯರ ಬಗ್ಗೆ ನಮಗೂ ಅನುಕಂಪ ಇದೆ. ಆದ್ದರಿಂದ ಅದನ್ನು ಮೊದಲು ಮಾಡದೆ, ಅರ್ಥ ಮಂತ್ರಿಗಳು ಮಾಡಿಲ್ಲವೆಂದು ಹೇಳುವುದರಲ್ಲಿ ಅರ್ಥವಿಲ್ಲ.

**ಶ್ರೀ ಪಿ. ಎಂ. ಬಾಂಗಿ**– ನಾನು ವಿದ್ಯಾ ಇಲಾಖೆಯಲ್ಲಿಯೂ ತನಿಖೆ ಮಾಡಿದ್ದೇನೆ. ಅಲ್ಲಿಂದ ತಮ್ಮ ಇಲಾಖೆಗೆ ಫೈಲು ಬಂದಿದೆ. ಎ. ಜಿ. ಆಫೀಸಿನಲ್ಲಿಯೂ ನಾನು ವಿಚಾರಿಸಿದ್ದೇನೆ. ಆದ್ದರಿಂದ ತಮ್ಮ ಇಲಾಖೆಯಲ್ಲಿ ಶೀಘ್ರದಲ್ಲಿ ಇದನ್ನು ಮಾಡಬೇಕೆಂದು ಹೇಳಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

# ಟಿಪ್ಪಣಿ ರೂಪದ ಪ್ರಶ್ನೆಗಳು

**(26th March 1973)**

**Sri P.M. Bangi (Jamkhandi)-** Will the Minister for Education be pleased to State:-

(a) the reason for not finalising pension cases of Primary School teachers of ex-Princely States of Jamkhandi, Mudhol, Ramdurg, Sangli, Miraj since last three years;

(b) whether it is a fact that the Accountant General has asked clarifications as to whether the primary school teachers who were serving as Government servants in the ex-Princely Deccan States and who were then absorbed and taken up by the School Boards of North Karnataka and subsequently had become Government servants of Mysore State are governed by M.C.S. Rules or B.C.S. Rules and is awating the reply from the Finance Department since last two years.

(c) whether it is a fact that the Government in Education Department has also sought the said clarifications from Finance Department;

(d) whether the Government has any proposal to ameliorate the sufferings of the poor primary teachers of ex-Princely States by finalising their pension and awarding the same at an early *date*?

Sri A.R. Badarinarayana (Minister for Education):-

(a) Rules under which these teachers are eligible for pension were under examination of Government.

(b) Clarification sought for by the Accountant General has since been issued after consultation with Finance Department.

(c) Yes.

(d) With a view to mitigate any harbship, orders have also been issued for payment of anticipatory pension to teachers pending settlement of final pension claims.

**ಶ್ರೀ ಪಿ. ಎಂ. ಬಾಂಗಿ**– ಸ್ವಾಮಿ, (ಅ) ಗೆ ಉತ್ತರವಾಗಿ ಹಣಕಾಸು ಇಲಾಖೆಯೊಂದಿಗೆ ಸಮಾಲೋಚಿಸಿ ಮಹಾಲೇಖಪಾಲರು ಕೇಳಿದ ಸ್ಪಷ್ಟೀಕರಣವನ್ನು ಈಗಾಗಲೇ ನೀಡಲಾಗಿದೆ ಎಂದು ಹೇಳಿದ್ದೀರಿ. ಆದರೆ ಅದನ್ನು ಇತ್ಯರ್ಥ ಮಾಡಲಿಕ್ಕೆ ಪ್ರಯತ್ನ ಮಾಡಲಿಲ್ಲವೇ?

**ಶ್ರೀ ಎ.ಆರ್. ಬದ್ರಿನಾರಾಯಣ್**– ಕೆಲವು ತಿಂಗಳುಗಳ ಕೆಳಗೆ ಅದನ್ನು ಕಳುಹಿಸಿದ್ದೇವೆ. ಮಾನ್ಯ ಸದಸ್ಯರು ಈಗ ಮತ್ತೆ ಅದನ್ನು ಗಮನಕ್ಕೆ ತಂದಿದ್ದಾರೆ. ಅದನ್ನೂ ಗಮನಿಸಿದ್ದೇನೆ. ಅವರಿಗೆ ತೊಂದರೆ ಆಗದೇ ಇರುವ ಹಾಗೆ ಆಂಟಿಸಿಪೇಟರಿ ಪೆನ್ಶನ್ ಕೊಡಲು ಆದೇಶ ನೀಡಲಾಗಿದೆ. ಅಕೌಂಟೆಂಟ್ ಜನರಲ್‌ರವರಿಗೂ ಕ್ಲ್ಯಾರಿಫಿಕೆಷನ್ ಕೊಟ್ಟಿದ್ದೇವೆ. ಆದುದರಿಂದ ಇದು ಬೇಗ ಇತ್ಯರ್ಥ ಆಗಬಹುದು.

**ಶ್ರೀ ಪಿ. ಎಂ. ಬಾಂಗಿ**– ಎಂದು ಉತ್ತರ ಕೊಟ್ಟಿದ್ದೀರಿ ಎನ್ನುವುದನ್ನು ತಿಳಿಸುತ್ತೀರಾ? ಮತ್ತು ಅಕೌಂಟೆಂಟ್ ಜನರಲ್ ಅವರಿಗೆ ಯಾವಾಗ ಕಳುಹಿಸಿದ್ದೀರಾ?

**Sri A.R. Badarinarayana-** I cannot give you the exact date.

**ಶ್ರೀ ಪಿ. ಎಂ. ಬಾಂಗಿ-** ಮಾನ್ಯ ಮಂತ್ರಿಗಳು ಆಂಟಿಸಿಪೇಟರಿ ಪೆನ್ಷನ್ ಕೊಟ್ಟಿದೆ ಎಂದು ಹೇಳಿದ್ದಾರೆ. ಆದರೆ ಶ್ರೀ ಎಚ್. ಆರ್. ದೇಶಪಾಂಡೆ ಮತ್ತು ಶ್ರೀ ದೊಡ್ಡಮನಿ ಇವರಿಬ್ಬರಿಗೂ ಆಂಟಿಸಿಪೇಟರಿ ಪೆನ್ಷನ್ ಇನ್ನೂ ಫೈನಲೈಸ್ ಆಗಿಲ್ಲ. ಆದುದರಿಂದ ಅವರು ದವಾಖಾನೆಗೆ ಬಿದ್ದು ಸಾಯುವುದಕ್ಕೆ ಹತ್ತಿದ್ದಾರೆ. ಈ ವಿಷಯವನ್ನು ತಮ್ಮ ಗಮನಕ್ಕೆ ತಂದಿದ್ದೇವೆ. ಈ ಬಗ್ಗೆ ಏನು ವ್ಯವಸ್ಥೆ ಮಾಡುತ್ತೀರಾ?

**ಶ್ರೀ ಎ.ಆರ್. ಬದರಿನಾರಾಯಣ-** ಇದಕ್ಕೆ ಒಂದು ಜನರಲ್ ಗೌರ್ನಮೆಂಟ್ ಆರ್ಡರ್ ಇದೆ. ಮಾನ್ಯ ಸದಸ್ಯರು ಹೇಳಿದ ಹಾಗೆ ಅವರಿಬ್ಬರಿಗೂ ತೊಂದರೆ ಇದೆ ಎಂದು ಬರೆದುಕೊಟ್ಟರೆ ಅದರ ಮೇಲೆ ತಕ್ಷಣ ಕ್ರಮ ತೆಗೆದುಕೊಳ್ಳುತ್ತೇನೆ.

**ಶ್ರೀ ಎಸ್. ಬಂಗಾರಪ್ಪ-** ನಿವೃತ್ತಿ ವೇತನ ವಿಷಯ ಎಷ್ಟು ದಿವಸದಿಂದ ಪರಿಶೀಲನೆಯಲ್ಲಿದೆ ಮತ್ತು ಈಗ ಯಾವ ಹಂತದಲ್ಲಿ ಇದೆ?

**ಶ್ರೀ ಎ.ಆರ್. ಬದರಿನಾರಾಯಣ-** ಈ ಬಗ್ಗೆ ಕೂಡಲೇ ವಿಮರ್ಶೆಮಾಡಿ ಆಂಟಿಸಿಪೇಟರಿ ಪೆನ್ಷನ್ ಬೇಗ ಕೊಡುವ ಹಾಗೆ ಸೂಚನೆ ಕೊಡುವುದಕ್ಕೆ ಪ್ರಯತ್ನ ಮಾಡುತ್ತೇನೆ.

**ಶ್ರೀ ಕಾಗೋಡು ತಿಮ್ಮಪ್ಪ-** ಅವರು ಶಿಕ್ಷಣ ಇಲಾಖೆಯವರು ಮಾಡಿದ ನಿಯಮಗಳ ಆಧಾರದ ಮೇಲೆ ಅರ್ಹರಾಗಿದ್ದಾರೆ ಎನ್ನುವ ಪ್ರಪೋಸಲ್ಸ್ ಇದ್ದ ಮೇಲೆ ಪುನಃ ಈವೊತ್ತು ತಮಗೆ ಅನುಮಾನ ಬರುವುದಕ್ಕೆ ಕಾರಣ ಏನು?

**ಶ್ರೀ ಎ.ಆರ್. ಬದರಿನಾರಾಯಣ-** ಅವರು ಹಳೇ ಬಾಂಬೆ ಸ್ಟೇಟ್‌ನಲ್ಲಿದ್ದಂಥಾವರು. *ಆದುದರಿಂದ* ಅಲ್ಲಿಯ ರೂಲ್ಸ್ ಅಂಡ್

ರೆಗ್ಯೂಲೇಷನ್ಸ್ ತರಿಸಿಕೊಂಡು ಇದರ ಬಗ್ಗೆ ಫೈನಲೈಸ್ ಮಾಡಬೇಕು. ನಮ್ಮ ಸ್ಟೇಟ್‌ನಲ್ಲಿರುವ ರೂಲ್ಸ್‌ಗೂ ಹಳೇ ಬಾಂಬೆನಲ್ಲಿರುವ ರೂಲ್ಸ್‌ಗೂ ವಿಮರ್ಶೆ ಮಾಡಬೇಕಾಗಿರುವುದರಿಂದ ಈ ಬಗ್ಗೆ ಫೈನಲೈಸ್ ಆಗಿಲ್ಲ.

**Sri B.S. Sayanak-** May I know when the anticipatory pension and the final pension claims have been paid and how many teachers have died without getting the pension?

**Sri A.R. Badarinarayana-** I do not know the exact number. But I can tell that orders for anticipatory pensions have been issued about three months back.

## ಕೈಗಾರಿಕಾ ಇಲಾಖೆಯ ಮೇಲಿನ ಚರ್ಚೆ

### 11ನೇ ಏಪ್ರಿಲ್ 1973

**ಶ್ರೀ ಪಿ. ಎಂ. ಬಾಂಗಿ (ಜಮಖಂಡಿ)** – ಮಾನ್ಯ ಉಪಾಧ್ಯಕ್ಷರೇ, ಇವತ್ತಿನ ದಿವಸ ಕೈಗಾರಿಕಾ ಮಂತ್ರಿಗಳು ಇಟ್ಟಂಥ ಬೇಡಿಕೆಗಳಿಗೆ ನಾನು ಸಂಪೂರ್ಣ ಬೆಂಬಲ ನೀಡಿ ಆ ಬಗ್ಗೆ ಹಲಕೆಲವು ವಿಷಯಗಳನ್ನು ಈ ಸಂದರ್ಭದಲ್ಲಿ ಪ್ರಸ್ತಾಪ ಮಾಡುತ್ತೇನೆ. ನಮ್ಮ ಮುಧೋಳ ತಾಲೂಕಿನ ಸೈದಾಪೂರದ ಸೋಮಯ್ಯ ಷುಗರ್ ಫ್ಯಾಕ್ಟರಿಯಲ್ಲಿ ಕನ್ನಡಿಗರಿಗೆ ಸಾಕಷ್ಟು ಅನ್ಯಾಯವಾಗಿದೆ. ಅಲ್ಲಿ ಯಾವ ಆಫೀಸರನ್ನ ನೋಡಿದರೂ ಮುಖ್ಯ ಪೋಸ್ಟ್‌ಗಳಿಗೆ ಮತ್ತು ಮ್ಯಾನ್ಯುಯಲ್ ಲೇಬರ್ಸ್‌ಗೂ ಮಹಾರಾಷ್ಟ್ರದವರನ್ನೇ ತಂದಿದ್ದಾರೆ ಮತ್ತು ಸಾವಿರಾರು ಬುಲಕ್ ಕಾರ್ಟ ಚಕ್ಕಡಿಗಳನ್ನು ಅಲ್ಲಿಂದಲೇ ತಂದಿದ್ದಾರೆ. 3ನೇ ಕ್ಲಾಸ್ ನೌಕರರನ್ನು ಮಾತ್ರ ಜಮಖಂಡಿ ಮತ್ತು ಮುಧೋಳ ತಾಲೂಕಿನಿಂದ ತೆಗೆದುಕೊಂಡಿದ್ದಾರೆ. ಅವರನ್ನು ಸೀಸನ್ ಮುಗಿದಾಗ ಕಾರ್ಖಾನೆ ಬಂದ್ ಆಗುವ ಸಮಯದಲ್ಲಿ ನೋಟೀಸ್ ಕೊಟ್ಟು ವಜಾ ಮಾಡಿದ್ದಾರೆ. ಆದುದರಿಂದ ನಮ್ಮ ಸರ್ಕಾರ ಈ

ಕಾರ್ಖಾನೆಗೆ ಯಾವ ರೀತಿಯಲ್ಲೂ ಸಹಾಯ ಮಾಡಕೂಡದು ಎಂದು ನಾನು ಹೇಳುತ್ತೇನೆ.

ಇನ್ನು ಎರ್ಡನೆಯದಾಗಿ ಹರಿಹರದ ಫಾಲಿಫೈಬರ್ ಮತ್ತು ಪೇಪರ್ ಕಾರ್ಖಾನೆ. ಆ ಪ್ರದೇಶದಲ್ಲಿ ಕನ್ನಡಿಗರು ಇದ್ದರು ಕೂಡ ಈ ಕಾರ್ಖಾನೆಯಲ್ಲಿ ಟೈಪಿಸ್ಟ್ ಮತ್ತು ಮುಖ್ಯಾಧಿಕಾರಿಗಳನ್ನು ರಾಜಸ್ತಾನ ಮತ್ತಿತರ ಕಡೆಗಳಿಂದ ತಂದಿದ್ದಾರೆ. ಅವರಿಗೆ ಕನ್ನಡ ಬರುವುದಿಲ್ಲ. ಅಲ್ಲಿ ಫಾಲಿಫೈಬರ್ ಆಗಲಿ, ಪೇಪರ್ ಆಗಲಿ ಮ್ಯಾನ್ಯುಫ್ಯಾಕ್ಚರ್ ಆಗುವುದಿಲ್ಲ. ಸಾವಿರಾರು ಮರಗಳನ್ನು ಕಡಿದು, ಅದರಿಂದ ಪೌಡರ್ ಮಾಡಿ, ಬ್ಲೀಚ್ ಮಾಡಿ ಚೀಲಗಳಲ್ಲಿ ತುಂಬಿ ಬಿರ್ಲಾ ಕಂಪನಿಯವರಿಗೆ ಮಹಾರಾಷ್ಟ್ರಕ್ಕೆ ಕಳುಹಿಸುತ್ತಾರೆ. ಇದರಿಂದ ಸೇಲ್ಸ್ ಟ್ಯಾಕ್ಸ್ ಕೂಡ ದೊರೆಯುವುದಿಲ್ಲ. ಇದು ವಿಷಾದದ ಸಂಗತಿ. ಕಾರ್ಖಾನೆಯವರು ಕನ್ನಡಿಗರಿಗೆ ಬಹಳ ತ್ರಾಸ ಕೊಡುತ್ತಿದ್ದಾರೆ. ಆ ಕಾರ್ಖಾನೆಯಿಂದ ಸರ್ಕಾರಕ್ಕಾಗಲಿ, ಕನ್ನಡಿಗರಿಗಾಗಲಿ ಏನೂ ಉಪಯೋಗವಿಲ್ಲ. ಕಾರ್ಖಾನೆಯ ಕೊಳಚೆ ನೀರಿನಿಂದ ಜನಗಳಿಗೆ ಬಹಳಷ್ಟು ದೋಷವಾಗಿದೆ. ಆದುದರಿಂದ ಮಾನ್ಯ ಕೈಗಾರಿಕಾ ಮಂತ್ರಿಗಳು ಆ ಕಾರ್ಖಾನೆಯನ್ನು ಹತೋಟಿಯಲಿಟ್ಟುಕೊಳ್ಳಬೇಕು.

ಇನ್ನು ನೇಕಾರರ ವಿಷಯ ಹೇಳಬೇಕಾದರೆ ಹಿಂದೂಸ್ತಾನದಲ್ಲಿ ಅಸಂಖ್ಯ ಜನರಿಗೆ ನೇಕಾರಿಕೆ ಮುಖ್ಯ ಉದ್ಯೋಗ. ನೇಕಾರರಿಗೆ ನೇಯುವುದನ್ನು ಯಾರೂ ಕಲಿಸದೇ ಇದ್ದರೂ ಅವರೇ ಕಲಿತುಕೊಂಡು ಮನೆಯಲ್ಲಿ ಕೆಲಸ ಮಾಡುತ್ತಿದ್ದಾರೆ. ಇಂಥಾ ಕೈಗಾರಿಕೆ ಅವನತಿಗೆ ಇಳಿಯುತ್ತಿದೆ. ಈ ಉದ್ಯೋಗದಲ್ಲಿ ತೊಡಗಿರುವವರು ಮೈಸೂರು ರಾಜ್ಯದಲ್ಲಿ 1,37,000 ಜನರು ಇದ್ದಾರೆ. ನಮ್ಮ ವಿಜಾಪೂರ ಜಿಲ್ಲೆಯಲ್ಲಿ 32,000 ಜನರು ಕೈಮಗ್ಗದಲ್ಲಿ ದುಡಿಯುತ್ತಿದ್ದಾರೆ. ಈ ಮಗ್ಗಗಳು ಮೊದಲು ವಿಜಾಪೂರ ಜಿಲ್ಲೆಯಲ್ಲಿ ಹೆಚ್ಚಾಗಿದ್ದವು. ಆನಂತರ ಈ ಉದ್ಯೋಗ ಬೆಳಗಾವಿಗೂ ಹಬ್ಬಿತು. ಈಗ ಬೆಳಗಾವಿ ಜಿಲ್ಹೆಯಲ್ಲಿ 25 ಸಾವಿರ ಮಗ್ಗಗಳು ಇವೆ. ಎಲ್ಲಕ್ಕಿಂತಲೂ ಕಡಿಮೆ ಅಂದರೆ 250 ಮಗ್ಗಗಳು ಕೂರ್ಗ ಜಿಲ್ಹೆಯಲ್ಲಿ ಇವೆ. ವಿಜಾಪೂರ ಜಿಲ್ಹೆ ಯಾವತ್ತೂ ಬರಗಾಲ ಪೀಡಿತ ಪ್ರದೇಶ ಎಂದು ಹೇಳಿದರೂ ಸರ್ಕಾರ ಸಾಕಷ್ಟು ಗಮನ ಕೊಟ್ಟಿಲ್ಲ. ಆದುದರಿಂದ ಕೈಗಾರಿಕಾ ಮಂತ್ರಿಗಳು ಈ ಉದ್ಯೋಗದ ಕಡೆ ಸಾಕಷ್ಟು ನಿಗಾ

ಇಡಬೇಕೆಂದು ಹೇಳಬಯಸುತ್ತೇನೆ. ಈ ಉದ್ಯೋಗಕ್ಕೆ ಪ್ರತ್ಯೇಕ ಡೈರೆಕ್ಟರ್ ಆಫ್ ಹ್ಯಾಂಡ್‌ಲೂಮ್ ಮಾಡುತ್ತೇವೆ ಎಂದು ಹೇಳಿದ್ದರೂ ಆ ಬಗ್ಗೆ ವ್ಯವಸ್ಥೆ ಆಗಿಲ್ಲ. ಈ ಬಜೆಟ್ಟಿನಲ್ಲಿ ಯಾವ ಹಣವನ್ನೂ ಇಟ್ಟಿಲ್ಲ. ನಾನು ಪದೇ ಪದೇ ಮನವಿ ಮಾಡಿಕೊಂಡರೂ ಏನೂ ಉಪಯೋಗವಾಗಿಲ್ಲ.

ಇನ್ನು ಸರ್ಕಾರದವರು ಯಾರ್ನ್ ಡಿಪೋ ತೆಗೆಯುತ್ತೇವೆ ಎಂದು ಹೇಳಿದರು. ಆ ಪ್ರಕಾರ 7 ಯಾರ್ನ್ ಡಿಪೋಗಳನ್ನು ತೆರೆದಿದ್ದಾರೆ. ಆದರೆ ಅಲ್ಲಿ ನೂಲಿನ ವಿತರಣೆ ಸರಿಯಾಗಿ ನಡೆದಿಲ್ಲ. ಕೈಮಗ್ಗ ನೇಕಾರರಿಗೆ ಸಾಕಾದಷ್ಟು ನೂಲನ್ನು ಕೊಟ್ಟಿಲ್ಲ. 15 ಕಾಮನ್ ವೀವಿಂಗ್ ಸೆಂಟರ್‌ಗಳನ್ನು ತೆರೆಯುತ್ತೇವೆ, ಬನಹಟ್ಟಿ ಮತ್ತು ಇಂಡಿಯಲ್ಲಿ ಸೆಂಟರ್ ಮಾಡುತ್ತೇವೆ ಎಂದು ಹೇಳಿದ್ದರು. ಆದರೆ ಆ ಬಗ್ಗೆ ಕೂಡಾ ಏನೂ ಮಾಡಿಲ್ಲ. ಇನ್ನು ಡಿಸ್‌ಪ್ಲೇಸ್ಡ್ ವೀವರ್ಸ್‌ಗೆ 4 ಲಕ್ಷ ರೂಪಾಯಿ ಸಾಲ ಕೊಡುವ ಅಷ್ಯೂರನ್ಸ್ ಕೊಟ್ಟಿದ್ದರು. ಆದರೆ ಆ ನೇಯ್ಗೆಯವರಿಗೆ ಒಂದು ಪೈಸಾನು ಕೊಟ್ಟಿಲ್ಲ. ಬನಹಟ್ಟಿಯಲ್ಲಿ 9 ಲಕ್ಷ ರೂಪಾಯಿ ಖರ್ಚು ಮಾಡಿ ಸೈಜಿಂಗ್ ಪ್ಲಾಂಟ್ ಹಾಕುತ್ತೇವೆ ಎಂದು ಹೇಳಿದ್ದರು. ಅದೂ ಇಂದಿನವರೆಗೆ ಆಗಲಿಲ್ಲ.

ಇನ್ನು ರಾಜ್ಯ ಮಂತ್ರಿಗಳಾದ ಶ್ರೀಮಾನ್ ರಾಠೋಡ ಅವರು ಮುಖ್ಯಮಂತ್ರಿಗಳ ಸಲಹೆ ಮೇಲೆ 4, 5, 6 ನೇ ತಾರೀಖು ವಿಜಾಪೂರ ಜಿಲ್ಲೆಯಲ್ಲಿ ಸಂಚಾರ ಮಾಡಿ, ರಾಂಪೂರ, ಬನಹಟ್ಟಿ, ಚಡಚಣ, ಹುನಗುಂದ ಮೊದಲಾದ ಕಡೆ ಹೋಗಿ ನೇಕಾರರ ಪರಿಸ್ಥಿತಿ ಅರಿತುಕೊಂಡರು. ಆಗ ಅವರು ಒಂದು ಮಗ್ಗಕ್ಕೆ 15 ಕೆ.ಜಿ. ನೂಲನ್ನು ಕೊಡುತ್ತೇವೆ ಎಂದು ವಚನ ಕೊಟ್ಟು ಹೋಗಿ 15 ದಿವಸ ಆದರೂ ಅದರ ವ್ಯವಸ್ಥೆ ಆಗಿಲ್ಲ. ನೇಕಾರರಿಗೆ 5 ಪೌಂಡ್ ಕೂಡ ಸಿಗುತ್ತಿಲ್ಲ. ಮೀನುಗಾರಿಕೆಯ ಪ್ರತಿಯೊಂದು ಕುಟುಂಬಕ್ಕೆ ಯಾವ ರೀತಿ ಇಂಟರೆಸ್ಟ್ ಫ್ರೀ ಲೋನ್ ಆಗಿ 250 ರೂಪಾಯಿ ಕೊಡುತ್ತಾರೋ ಅದೇ ರೀತಿ ನೇಕಾರರಿಗೆ ಕೊಡುವುದು ಅವಶ್ಯಕ ಎಂದು ಅವರು ಅಭಿಪ್ರಾಯ ವ್ಯಕ್ತಪಡಿಸಿದರು. ಆದರೆ ಅದೂ ಆಗಲಿಲ್ಲ. ಈ ಬಗ್ಗೆ ಶ್ರೀ ರಾಠೋಡ ಅವರು ಮುಖ್ಯ ಮಂತ್ರಿಗಳಿಗೆ ಏನು ರಿಪೋರ್ಟ ಕೊಟ್ಟಿದ್ದಾರೋ ಅದರಲ್ಲಿ ಆ ಪ್ರಸ್ತಾಪವೇ ಆಗಿಲ್ಲ. ನಾನು ಈ ಬಗ್ಗೆ ಷಾರ್ಟ್ ನೋಟೀಸ್ ಕ್ವೆಶ್ಚನ್ ಕೂಡ ಕೊಟ್ಟಿದ್ದೇನೆ.

# ಕಂದಾಯ ಇಲಾಖೆಯ ಮೇಲಿನ ಚರ್ಚೆ

## 26ನೇ ಏಪ್ರಿಲ್ 1973

ಶ್ರೀ ಪಿ.ಎಂ. ಬಾಂಗಿ (ಜಮಖಂಡಿ)– ಮಾನ್ಯ ಉಪಾಧ್ಯಕ್ಷರೇ, ಕಂದಾಯ ಮಂತ್ರಿಗಳು ಈ ಸದನದಲ್ಲಿ ಮಂಡಿಸಿದ ಬೇಡಿಕೆಗಳಿಗೆ ಸಂಪೂರ್ಣ ಬೆಂಬಲ ಕೊಟ್ಟು ಕೆಲವು ಸಲಹೆಗಳನ್ನು ಹೇಳಬಯಸುತ್ತೇನೆ.

**ವಿಲೀನವಾದ ಡೆಕ್ಕನ್ ಸಂಸ್ಥಾನಗಳ ಕುರಿತು:**

ಮೊಟ್ಟಮೊದಲನೆಯದಾಗಿ ಹೇಳಬೇಕೆಂದರೆ, ವಿಲೀನವಾದ ದಕ್ಷಿಣ ಸಂಸ್ಥಾನಗಳಲ್ಲಿ ಆ ಕಾಲಕ್ಕೆ ಸೇಲ್ಸ್ ಟ್ಯಾಕ್ಸ್ ಮತ್ತು ಇನ್‌ಕಂ ಟ್ಯಾಕ್ಸ್ ಇರಲಿಲ್ಲ. ಅರಸರಿಗೆ ಬೇರೆ ಯಾವುದೂ ಉತ್ಪನ್ನವಿಲ್ಲದ ಮೂಲಕ ಅವರು ತಮ್ಮ ಖರ್ಚಿಗೆ ಎಷ್ಟು ಹಣ ಬೇಕೋ ಅಷ್ಟು ಹಣವನ್ನು ಭೂಕಂದಾಯದಿಂದ ಕೂಡಿಸುತ್ತಿದ್ದರು. ಜಮಖಂಡಿ, ಮುಧೋಳ, ಸಾಂಗ್ಲಿ, ರಾಮದುರ್ಗ, ಮೀರಜ, ಕುರುಂದವಾಡ, ಸವಣೂರು ಈ ಸಂಸ್ಥಾನಗಳಲ್ಲಿ ಭೂಕಂದಾಯವನ್ನು ಪ್ರತಿಯೊಂದು ಎಕರೆಗೆ ನಾಲ್ಕೈದು ರೂಪಾಯಿಗಳಷ್ಟು ಹಾಕಿದ್ದರು. ಈ ಸಂಸ್ಥಾನಗಳು ವಿಲೀನವಾಗಿ ಬೇರೆ ಬೇರೆ ಜಿಲ್ಲೆಗಳಲ್ಲಿ ಸಮ್ಮಿಳಿತವಾಗಿದ್ದರೂ ಅಲ್ಲಿ ಭೂಕಂದಾಯ ಇನ್ನೂ ಹೆಚ್ಚಾಗಿಯೇ ಇರುತ್ತದೆ. ಕಂದಾಯದ ಆಧಾರದ ಮೇಲೆ ಗೇಣಿ ಫಿಕ್ಸ್ ಮಾಡಬೇಕಾಗುತ್ತದೆ ಮತ್ತು ಭೂ ಮಾಲೀಕರಿಗೆ ಕಾಂಪೆನ್ಸೇಶನ್ ಕೊಡಬೇಕಾಗುತ್ತದೆ. ಆದುದರಿಂದ ಈ ಮಹತ್ವದ ವಿಷಯವನ್ನು ಕಂದಾಯ ಮಂತ್ರಿಗಳು ಪರಿಶೀಲನೆ ಮಾಡಬೇಕೆಂದು ಸಲಹೆ ಮಾಡುತ್ತಿದ್ದೇನೆ.

1938 ರಲ್ಲಿ ಡೆಕ್ಕನ್ ಸಂಸ್ಥಾನಗಳಲ್ಲಿ ಕಾಂಗ್ರೆಸ್ ಚಳುವಳಿಯದಾಗ ರಾಜರುಗಳು ಪ್ರಜೆಗಳಿಗೆ ಭೂ ಕಂದಾಯದಲ್ಲಿ 8 ರಿಂದ 25 ಪರ್ಸೆಂಟ್ ವರೆಗೆ ವಿನಾಯಿತಿ ಕೊಟ್ಟರು. 25 ಪರ್ಸೆಂಟ್ ಕಡಿಮೆ ವಸೂಲು ಮಾಡಿದರೂ, ಹಕ್ ರಜಿಸ್ಟರದಲ್ಲಿ ಮಾತ್ರ ಕಂದಾಯವನ್ನು 100 ಪರ್ಸೆಂಟ್ ಇಟ್ಟ ಮೂಲಕ ಈ ಸಂಸ್ಥಾನಗಳಿಗೆ ಸೇರಿದ ಪ್ರದೇಶಗಳ *ಹಕ್* ರಿಜಿಸ್ಟರ್‌ಗಳನ್ನು ಪರಿಶೀಲನೆ ಮಾಡಿ

ಸರಿಪಡಿಸಿ, ತದನಂತರ ಗೇಣಿ ಫಿಕ್ಸ್ ಮಾಡಬೇಕು ಮತ್ತು ಕಾಂಪೆನ್ಸೇಶನ್ ಎಂದು ಗೇಣಿದಾರನಿಂದ ಭೂಮಾಲೀಕನಿಗೆ ಎಷ್ಟು ಕೊಡಬೇಕು ಎನ್ನುವ ಬಗ್ಗೆ ನಿರ್ಧಾರ ಮಾಡಬೇಕೆಂದು ಸೂಚಿಸಬಯಸುತ್ತೇನೆ.

**ರಿಕಾರ್ಡ ಆಫ್ ರೈಟ್ಸ ಕುರಿತು:**

ಇನ್ನು ಮುಂದೆ ರಿಕಾರ್ಡ್ ಆಫ್ ರೈಟ್ಸ್ ವಿಷಯದಲ್ಲಿ ಹೇಳಬೇಕಾದರೆ, ಅವು ಸರಿಯಾಗಿ ಇರುವುದಿಲ್ಲ. ಹೊಸ ವರದಿ ತೆಗೆದುಕೊಂಡು, ಸಾಕಷ್ಟು ಹಣ ಸಂಪಾದನೆ ಮಾಡಿ ಸರ್ಟಿಫೈ ಮಾಡಿರುವ ಎಷ್ಟೋ ಉದಾಹರಣೆಗಳು ನಮ್ಮ ತಾಲೂಕಿನಲ್ಲಿ ಕಂಡುಬರುತ್ತದೆ. ಭೂಮಾಲೀಕರನ್ನು ನಾನ್ ಅಗ್ರಿಕಲ್ಚರಿಸ್ಟ್ ಎಂದು ಮಾಡಿದ್ದರೂ, ಎಂಟ್ರಿ ರದ್ದು ಮಾಡಲು ಹೊಸ ವರದಿ ತೆಗೆದುಕೊಂಡು ಸರ್ಟಿಫೈ ಮಾಡಿದ್ದಾರೆ. ಇಂಥ ಡೈರಿಯನ್ನು ವಿಚಾರಿಸಿ ಹಕ್ ರಿಜಿಸ್ಟರಗಳನ್ನು ಸರಿಪಡಿಸಬೇಕು. ಹಕ್ ರಿಜಿಸ್ಟರ್, ಡೈರಿ ಮುಂತಾದವನ್ನು ತಾಲೂಕಾ ಆಫೀಸಿನಲ್ಲಿ ಇಡಬೇಕೇ ಹೊರತು ತಲಾಠಿ ಅಥವಾ ವಿಲೇಜ ಅಕೌಂಟೆಂಟ್ಸ್ ಹತ್ತಿರ ಇಡಬಾರದು. ಯಾಕೆಂದರೆ ಹಕ್ ರಿಜಿಸ್ಟರಗಳು ಟ್ಯಾಂಪರ್ ಆಗಿರುವ ಎಷ್ಟೋ ಉದಾಹರಣೆಗಳು ಕಂಡುಬರುತ್ತವೆ. ಡೈರಿಯಲ್ಲಿ ಬದಲಾವಣೆ ಮಾಡಬೇಕಾದರೆ, ತಲಾಠಿ ಅಥವಾ ವಿಲೇಜ ಅಕೌಂಟೆಂಟ್ ತಹಸೀಲ್ದಾರ್ ಕಚೇರಿಗೇ ಬರಬೇಕು ಮತ್ತು ಬದಲಾವಣೆಗೆ ಮೊದಲು ಯೋಗ್ಯ ನೋಟೀಸ್ ಹೊರಡಿಸಬೇಕು ಮತ್ತು ನಂತರ ಸರಿಯಾದ ಅಧಿಕಾರಿ ಅವುಗಳನ್ನು ಸರ್ಟಿಫೈ ಮಾಡಬೇಕು.

**ಫ್ರ್ಯಾಗ್ಮೆಂಟೇಶನ್ ಆ್ಯಂಡ್ ಕನ್ಸಾಲಿಡೇಶನ್ ಆ್ಯಕ್ಟ್ :**

ಈ ಕಾಯ್ದೆಯಲ್ಲಿ ತುಂಡು ಭೂಮಿ ಯಾವುದಿರುತ್ತದೆ ಆ ಭೂಮಿಯ ಬಗ್ಗೆ ತಹಸೀಲ್ದಾರರಾಗಲೀ ತಲಾಠಿಗಳಾಗಲೀ ನೋಟೀಸ್ ಕೊಟ್ಟಿಲ್ಲ. ನೋಟೀಸ್ ಕೊಡದೆ ಇದ್ದ ಮೂಲಕ ಹಂಚುವಾಗ ತುಂಡು ಭೂಮಿಗಳ ಎರಿಟ್ರೀಸ್ ಸರಿಯಾಗಿ ಮಾಡಲಿಕ್ಕೆ ಬರುತ್ತದೆಯೇ?

## ಸಿಟಿ ಸರ್ವೆ ವಿಷಯ ಕುರಿತು:

ಇನ್ನು ಮುಂದೆ ಸಿಟಿ ಸರ್ವೆ ವಿಷಯದಲ್ಲಿ ಹೇಳಬೇಕಾದರೆ ಇದನ್ನು ಇನ್ನೂ ಎಲ್ಲಾ ಕಡೆಗಳಲ್ಲಿ ಜಾರಿಗೆ ತಂದಿಲ್ಲ. ಪ್ರತಿಯೊಂದು ಟೌನಿನಲ್ಲಿ ಸಿಟಿಗಳಲ್ಲಿ ಇದನ್ನು ಜಾರಿಗೆ ತಂದು ಮಾಲೀಕರ ಸರಿಯಾದ ಎಲ್ಲ ವಿವರಗಳನ್ನು ಬರೆಸಿಡಬೇಕು. ಜಮಖಂಡಿ ಮೊದಲಾದ ತಾಲೂಕುಗಳಲ್ಲಿ ಸರಿಯಾಗಿ ದಾಖಲಾತಿ ವಿವರಗಳನ್ನು ಸರ್ವೆ ಇಲಾಖೆಯವರು ಮಾಡದೇ ಇರುವುದರಿಂದ ಕಂದಾಯದ ಹೊರೆ ಜಾಸ್ತಿಯಾಗಿ ಜನಕ್ಕೆ ಬಹಳ ತ್ರಾಸಾಗುತ್ತದೆ. ಎಲ್ಲಾ ಕಡೆ ಸಿಟಿ ಸರ್ವೆ ಅಧಿಕಾರಿಗಳನ್ನು ಹಾಕಿ ಸರಿಯಾದ ದಾಖಲಾತಿಗೆ ವ್ಯವಸ್ಥೆ ಮಾಡಬೇಕೆಂದು ಸೂಚಿಸಬಯಸುತ್ತೇನೆ.

## ಸ್ಕೇರ್ಸಿಟಿ ವಿಷಯ ಕುರಿತು:

ಇನ್ನು ಸ್ಕೇರ್ಸಿಟಿ ವಿಷಯವಾಗಿ ಹೇಳಬೇಕಾದರೆ ಮುಖ್ಯವಾಗಿ ದನಕರುಗಳಿಗೆ ಘಾಡರನ್ನು ಒದಗಿಸುವ ಕೆಲಸವಾಗಬೇಕು. ಕೆಲವು ಕಡೆಗಳಲ್ಲಿ ರೈತರ ಬಾವಿಗಳಿಗಾಗಿ ತಗಾಯಿ ಸಾಲ ಕೊಡುತ್ತಾರೆ. ಕೆಲವು ಕಡೆ ಬಾವಿಗಳಲ್ಲಿ ನೀರು ಬರುವುದಿಲ್ಲ. ಇಂತಹ ಬಾವಿಗಳನ್ನು ಇನ್ನೂ ಆಳವಾಗಿ ತೋಡಲು ಮತ್ತು ಇದರಲ್ಲಿನ ಹೂಳನ್ನು ತಗೆಸಿ ನೀರು ಬರುವಂತೆ ಮಾಡಲು ರಿಗ್ ಯಂತ್ರಗಳನ್ನು ಕೊಟ್ಟು ಅದಕ್ಕೂ ತಗಾಯಿ ಸಾಲ ಕೊಡಬಹುದು ಮತ್ತು ಆ ಸಾಲವನ್ನು ಕಂತುಗಳಲ್ಲಿ ವಸೂಲು ಮಾಡಿಕೊಳ್ಳಬಹುದು. ರೈತರ ಬಾವಿಗಳ ಡೀಪನಿಂಗ್‌ಗಾಗಿ 500 ರೂಪಾಯಿ ಸಾಲ ಕೊಡುತ್ತಾರೆ. ಆದರೆ ಇದರಲ್ಲಿ ಮೊದಲ ಕಂತಾಗಿ 250 ರೂಪಾಯಿ ಮುರಿದುಕೊಳ್ಳುತ್ತಾರೆ ಮತ್ತು ರೈತರ ಕೈಗೆ ಸಿಗುವುದು ಕೇವಲ 150 ರೂಪಾಯಿ. ಬಾಕಿ ಒಂದು ನೂರು ರೂಪಾಯಿ ಲಂಚಕ್ಕೆ ಹೋಗುತ್ತದೆ. ಹೀಗಾಗಿ ರೈತರಿಗೆ ಸಾಲದ ಪೂರ್ತಿ ದುಡ್ಡು ಅವರ ಕೈಗೆ ಸಿಗುವುದಿಲ್ಲ. ಲಂಚದ ಹಾವಳಿ ತಪ್ಪಿಸಲು ಯೋಗ್ಯ ವ್ಯವಸ್ಥೆ ಮಾಡಬೇಕು.

## ಸ್ಟಾಂಪ್ ಪೇಪರುಗಳ ಕುರಿತು:

ಇನ್ನು ಸ್ಟಾಂಪ್ಸ್ ಪೇಪರುಗಳ ಬಗ್ಗೆ ಹೇಳಬೇಕಾದರೆ ಜನತೆಗೆ ಬೇಕಾಗುವ ಎರ್ಡು ಹಾಗೂ ನಾಲ್ಕು ರೂಪಾಯಿ ಬೆಲೆಯ ಈ ಪೇಪರುಗಳು

ತಾಲೂಕು ಆಫೀಸುಗಳಲ್ಲಿ ಸಿಗುತ್ತಿಲ್ಲ. ಈಗೇನಾಗಿದೆ ಎಂದರೆ ಕಾಗದಕ್ಕೆ ಎರಡು ರೂಪಾಯಿ ಸ್ಟ್ಯಾಂಪ್ ಹಚ್ಚಬೇಕಾದಲ್ಲಿ ನಾಲ್ಕು ರೂಪಾಯಿಗಳ ಸ್ಟ್ಯಾಂಪ್‌ನ್ನು ಹಚ್ಚಬೇಕಾಗಿದೆ. ಹಳ್ಳಿಗಳ ಜನಗಳಿಗೆ ಸಾಕಷ್ಟು ಸ್ಟ್ಯಾಂಪ್‌ಗಳು ಹಾಗೂ ಸ್ಟ್ಯಾಂಪ್ ಪೇಪರುಗಳನ್ನು ಒದಗಿಸಿಕೊಡಲು ಸರ್ಕಾರ ಕ್ರಮ ತೆಗೆದುಕೊಳ್ಳಬೇಕು ಎಂದು ಈ ಸಮಯದಲ್ಲಿ ಹೇಳಬಯಸುತ್ತೇನೆ.

ನಮ್ಮ ಭಾಗದಲ್ಲಿರುವ ವಕೀಲರು ಕೋರ್ಟಿನಲ್ಲಿ ಅಡ್ಜರ್ನಮೆಂಟ್ ಅಪ್ಲಿಕೇಷನ್ ಹಾಕುವಾಗ ಅದಕ್ಕೆ ಪನ್ನೆರ್ಡಾಣೆಯ ಸ್ಟ್ಯಾಂಪ್ ಹಚ್ಚಬೇಕೆಂದು ಹೇಳುತ್ತಾರೆ. ಈಚೆಗೆ ಹೈಕೋರ್ಟಿನಲ್ಲಿ ಒಂದು ನಿಯಮ ಅಮೆಂಡ್ ಮಾಡಿ, ಅಡ್ಜರ್ನಮೆಂಟ್‌ಗೆ ಹಾಕುವ ಅರ್ಜಿಗೆ ಸ್ಟ್ಯಾಂಪ್ ಹಚ್ಚುವ ಅಗತ್ಯವಿಲ್ಲ ಎಂದು ಮಾಡಿದ್ದಾರೆ. ಈ ಬಗ್ಗೆ ಎಲ್ಲ ಕಡೆಗೂ ಸರಿಯಾದ ಸೂಚನೆ ಕಳಿಸಿಕೊಡಬೇಕಾಗಿ ಕೇಳುತ್ತೇನೆ.

**ನೋಂದಣಿ ವಿಷಯ ಕುರಿತು:**

ಇನ್ನು ರಿಜಿಸ್ಟ್ರೇಷನ್ ವಿಷಯದಲ್ಲಿ ಹೇಳುವುದೇನೆಂರೆ, ನಮ್ಮ ಭಾಗದಲ್ಲಿ ಎಲ್ಲ ಪತ್ರಗಳನ್ನು ರಿಜಿಸ್ಟರ್ ಮಾಡಿದ ಮೇಲೆ ಅವುಗಳ ಫೋಟೋಸ್ಟ್ಯಾಟ್ ಕಾಪಿ ಮಾಡಿ ಇಡುವ ಪದ್ಧತಿ ಇದೆ. ಇದು ಹಳೆಯ ಮೈಸೂರು ಭಾಗಗಳಲ್ಲಿ ಇಲ್ಲ. ಈ ಪದ್ಧತಿಯನ್ನು ಎಲ್ಲಾ ಕಡೆ ಜಾರಿಗೆ ತರಬೇಕೆಂದು ಸಲಹೆ ಮಾಡಬಯಸುತ್ತೇನೆ. ಮರಾಠಿಯಲ್ಲಿರುವ ಪತ್ರಗಳನ್ನು ರಜಿಸ್ಟರ್ ಆಫೀಸುಗಳಲ್ಲಿ ರಿಜಿಸ್ಟರ್ ಮಾಡಲು ತೆಗೆದುಕೊಳ್ಳಬಾರದು ಮತ್ತು ಎಲ್ಲ ಪತ್ರಗಳು ಕನ್ನಡದಲ್ಲೇ ಇರಬೇಕೆಂದು ನಿಯಮ ಮಾಡಬೇಕು. ಇನ್ನು ನಮ್ಮ ರಾಜ್ಯದಲ್ಲಿ ಸಬ್ ರಿಜಿಸ್ಟ್ರಾರ್ ಕಚೇರಿಗಳಲ್ಲಿ ಲಂಚಗುಳಿತನ ಬಹಳ ಹೆಚ್ಚಾಗಿದೆ. ಇದರಿಂದ ಹಳ್ಳಿಗಾಡಿನ ಜನಕ್ಕೆ ಬಹಳ ತ್ರಾಸಾಗುತ್ತಿದೆ, ಇದನ್ನು ತಡೆಗಟ್ಟಬೇಕು.

**ಬರಗಾಲ ಪರಿಹಾರ ಕುರಿತು:**

ವಿಜಾಪೂರ, ಗುಲ್ಬರ್ಗಾ, ಬೀದರ ಜಿಲ್ಲೆಗಳಲ್ಲಿ ಬರಗಾಲ ಪೀಡಿತ ಜನರಿದ್ದಾರೆ. ಇಂತಹ ಜನರ ಮೇಲೆ ಮನಿ ಡಿಕ್ರಿಗಳಾದರೆ ಇವನ್ನು ಎಕ್ಸಿಕ್ಯೂಟ್

ಮಾಡದಂತೆ ಸರ್ಕಾರ ಆದೇಶ ಹೊರಡಿಸಬೇಕೆಂದು ಸಲಹೆ ಮಾಡುತ್ತೇನೆ. ಇದರಿಂದ ಭೂಮಿಯು ಹಸ್ತಾಂತರವಾಗಲು ಅವಕಾಶವಾಗುತ್ತದೆ. ಮುಂಬೈ ರಾಜ್ಯದಲ್ಲಿ ಅಗ್ರಿಕಲ್ಚರಿಸ್ಟ್ ಡೆಟ್ ರಿಲೀಫ್ ಆ್ಯಕ್ಟ್ ಇತ್ತು. ಮೈಸೂರಿನಲ್ಲಿ ಅಗ್ರಿಕಲ್ಚರಿಸ್ಟ್ ಡೆಟ್ ರಿಲೀಫ್ ಆ್ಯಕ್ಟ್ ಬಂದಿದ್ದರೂ ಇನ್ನೂ ಅಮಲಿನಲ್ಲಿ ಬರಲಿಲ್ಲ. ಇದನ್ನು ಬೇಗ ಅಮಲಿನಲ್ಲಿ ತರಲು ಪ್ರಯತ್ನ ಮಾಡಬೇಕೆಂದು ವಿನಂತಿ ಮಾಡಿಕೊಳ್ಳುತ್ತೇನೆ. ಇನ್ನು ನಮ್ಮ ಭಾಗದಲ್ಲಿರುವ ತಲಾಠಿಗಳ ಪಗಾರ ಬಹಳ ಕಡಿಮೆ. ಇವರಿಗೆ ಹೆಚ್ಚು ಪಗಾರ ಕೊಡುವ ವ್ಯವಸ್ಥೆ ಮಾಡಬೇಕು. ಹಳ್ಳಿಗಳ ಜನಕ್ಕೆ ಹೆಚ್ಚು ಸಹಾಯ, ಎಲ್ಲ ಅನುಕೂಲಗಳನ್ನು ಮಾಡಿಕೊಡಬೇಕೆಂದು ಹೇಳಿ ನನ್ನ ಮಾತು ಮುಗಿಸುತ್ತೇನೆ.

## ಜಾಯಂಟ್ ಸಿಲೆಕ್ಟ್ ಕಮಿಟಿ ರಿಪೋರ್ಟ ಮೇಲಿನ ಚರ್ಚೆ

### 10ನೇ ಮೇ 1973

**ಶ್ರೀ ಪಿ.ಎಂ. ಬಾಂಗಿ (ಜಮಖಂಡಿ)**– ಮಾನ್ಯ ಉಪಾಧ್ಯಕ್ಷರೇ ಜಾಯಿಂಟ್ ಸಿಲೆಕ್ಟ್ ಕಮಿಟಿಯವರು ಇಟ್ಟಂಥ ರಿಪೋರ್ಟಿನ ಸಂಬಂಧ ಹಲಕೆಲವು ಸಲಹೆಗಳನ್ನು ಮಾಡಬಯಸುತ್ತೇನೆ. ಈ ಕಮಿಟಿಯ ಸಭೆ ನಡೆದ ಸಮಯದಲ್ಲಿ ನಾನು ಹಾಜರಾಗಿ ಬರಹ ಮೂಲಕ ರೆಪ್ರೆಸೆಂಟೇಷನ್ ಕೊಟ್ಟಿದ್ದೇನೆ. ಕಮಿಟಿಗೆ ನನ್ನ ಸಾಕ್ಷಿಯನ್ನೂ ಕೊಟ್ಟಿದ್ದೇನೆ. ನಾನು ಮಾಡಿದ ಕೆಲವು ಸಲಹೆಗಳನ್ನು ಈ ಕಮಿಟಿಯವರು ಒಪ್ಪಿದ್ದಾರೆ. ಆ ಬಗ್ಗೆ ನಾನು ಅವರಿಗೆ ಅಭಿನಂದನೆ ಸಲ್ಲಿಸುತ್ತೇನೆ. ನನ್ನ ಕೆಲವು ಸಲಹೆಗಳನ್ನು ಕಮಿಟಿಯವರು ಒಪ್ಪಿಲ್ಲ. ಆದುದರಿಂದ ನಾನು ಈ ಸದನದಲ್ಲಿ ಅವುಗಳನ್ನು ಪುನರಪಿ ಹೇಳಿ ನಮ್ಮ ಮಾನ್ಯ ಮಂತ್ರಿಗಳು ಆ ಬಗ್ಗೆ ವಿಚಾರ ಮಾಡಬೇಕೆಂದು ಕೇಳುತ್ತೇನೆ. ಈ ಲ್ಯಾಂಡ್ ರಿಫಾರ್ಮ್ಸ್ ಆ್ಯಕ್ಟನ್ನು ಎರಡು ವಿಭಾಗಗಳನ್ನಾಗಿ ವಿಂಗಡಿಸಬಹುದು. ಮೊದಲನೆಯದು ಉಳುವವನೇ ಭೂ ಮಾಲೀಕ. ಅದಕ್ಕೆ ಸಂಬಂಧಪಟ್ಟದ್ದು ಒಂದರಿಂದ 63 ಕಲಂಗಳು. ಎರಡನೆಯದು ಭೂ ಹಿಡುವಳಿ ಎಷ್ಟು ಇರಬೇಕೆಂಬುದಕ್ಕೆ ಸಂಬಂಧಪಟ್ಟಂತೆ 63 ರಿಂದ ಮುಂದಿನ ಕಲಂಗಳು ಇವೆ. ಮುಂಬೈ ಕಾಯ್ದೆಯಲ್ಲಿ ಎರಡು ವಿಭಾಗಗಳನ್ನು ಮಾಡಿ ಟೆನೆನ್ಸಿ ಕಾಯ್ದೆಯನ್ನು ಸ್ವತಂತ್ರ ಕಾಯ್ದೆ ಮಾಡಿದ್ದಾರೆ.

ಎರಡನೆ ಕಾಯ್ದೆ ಸೀಲಿಂಗ್ ಆ್ಯಕ್ಟ. ಹೀಗಾಗಿ ಅಲ್ಲಿ ರೈತರಿಗೆ ಸಾಕಷ್ಟು ಪರಿಹಾರ ಸಿಕ್ಕಿದೆ. ಹಿಂದೆ ಮುಂಬೈ ಪ್ರಾಂತದಲ್ಲಿದ್ದ ನಮ್ಮ ಉತ್ತರ ಕರ್ನಾಟಕದ ರೈತರಿಗೆ ಮುಂಬೈ ಶಾಸನದಿಂದ ಎಷ್ಟು ಪರಿಹಾರ ಸಿಗುತ್ತಿತ್ತು ಅಷ್ಟು ಪರಿಹಾರ ಈ ಭೂ ಸುಧಾರಣಾ ಕಾಯ್ದೆಯಿಂದ ಸಿಗಲಿಲ್ಲ. ಜಾಯಿಂಟ್ ಸಿಲೆಕ್ಟ್ ಕಮಿಟಿಯ ರಿಪೋರ್ಟ್‌ನಿಂದಲೂ ಸಿಗಲಿಲ್ಲವೆಂದು ವಿಷಾದದಿಂದ ಹೇಳಬೇಕಾಗಿದೆ. ಗೇಣಿದಾರರು ಕಂದಾಯದ 2 ರಿಂದ 5 ಪಟ್ಟು ಗೇಣಿ ಕೊಡಬೇಕೆಂದು ಮುಂಬೈ ಕಾಯ್ದೆಯಲ್ಲಿ ಶಾಸನವಿತ್ತು. ಆದರೆ ಮೈಸೂರು ಕಾಯ್ದೆಯಲ್ಲಿ ಮತ್ತು ಜಾಯಿಂಟ್ ಸಿಲೆಕ್ಟ್ ಕಮಿಟಿ ರಿಪೋರ್ಟ್‌ನಲ್ಲಿ ಕಂದಾಯ ಒಂದು ರೂಪಾಯಿ ಇದ್ದರೆ ಅದರ 10 ಪಟ್ಟು ಗೇಣಿ ಕೊಡಬೇಕೆಂದು 8ನೇ ಕಲಮಿನಲ್ಲಿ ತೋರಿಸಿದೆ. ಆಮೇಲೆ ಮುಂಬೈ ಭಾಗದಲ್ಲಿರತಕ್ಕ ಗೇಣಿದಾರರ ಹಕ್ಕುಗಳನ್ನು ಈ ಕಾಯ್ದೆಯಲ್ಲಿ ಕಸಿದುಕೊಳ್ಳಲಾಗಿದೆ. ಆ ಪ್ರಕಾರ ಒಂದು ರೂಪಾಯಿ ಕಂದಾಯಕ್ಕೆ ಪರಮಾವಧಿ 20 ರೂಪಾಯಿಯಿಂದ 200 ರೂಪಾಯಿಗಳವರೆಗೆ ಮಾಲೀಕರಿಗೆ ಪರಿಹಾರಧನ ಕೊಡಬೇಕೆಂದು ಮುಂಬೈ ಟೆನೆನ್ಸಿ ಕಾಯ್ದೆ ಇದ್ದರೂ ಗೇಣಿದಾರರ ಹಕ್ಕನ್ನು ಈ ಜಾಯಿಂಟ್ ಸಿಲೆಕ್ಟ್ ಸಮಿತಿಯ ರಿಪೋರ್ಟನಿಂದ ಕಸಿದುಕೊಳ್ಳುತ್ತಿದ್ದಾರೆ. ಮುಂಬೈ ಶಾಸನದಲ್ಲಿ ಇದ್ದಂತೆ ಗೇಣಿಯ 5 ಪಟ್ಟು ಪರಿಹಾರಧನ ಅಂದರೆ 20 ರಿಂದ 200 ರೂಪಾಯಿಗಳವರೆಗೆ ಮಾಲೀಕರಿಗೆ ದೊರೆಯುವ ಹಾಗೆ ವ್ಯವಸ್ಥೆ ಮಾಡತಕ್ಕದ್ದು. ಎರ್ಡನೆ ವಿಷಯ ಏನೆಂದರೆ ಈ ಕಾಯ್ದೆಯಿಂದ ಆದಷ್ಟುಮಟ್ಟಿಗೆ ಮುನ್ಸೀಫ್ ಮತ್ತು ಸಿವಿಲ್ ಕೋರ್ಟ್‌ಗೆ ಇದ್ದ ಅಧಿಕಾರ ತಹಶೀಲ್ದಾರರಿಗೆ ಮತ್ತು ಲ್ಯಾಂಡ್ ಟ್ರಿಬ್ಯೂನಲ್‌ಗೆ ಹೋಗಿದೆ. ಆದರೆ 7ನೇ ಕಲಮಿನಲ್ಲಿ ಎವಿಕ್ಟೆಡ್ ಟೆನೆಂಟ್ ಬಗ್ಗೆ ಅಧಿಕಾರವನ್ನು ಕೇವಲ ಮುನ್ಸೀಫ್ ಕೋರ್ಟಿಗೆ ಇಟ್ಟಿದ್ದು, ಇದನ್ನೂ ತಹಶೀಲ್ದಾರರಿಗೆ ಕೊಡಬೇಕು. ಜಾಯಿಂಟ್ ಸಿಲೆಕ್ಟ್ ಕಮಿಟಿಯವರು ಈ ಬಗ್ಗೆ ವಿಚಾರ ಮಾಡಿಲ್ಲ. ಇದನ್ನು ವಿಚಾರ ಮಾಡಬೇಕೆಂದು ನಾನು ಸಲಹೆ ಮಾಡುತ್ತೇನೆ.

ಕುಳಗಳಿಗೆ ಹೆಚ್ಚಿಗೆ ತೊಂದರೆ ಮಾಡುತ್ತಿರುವ ಕಾಯ್ದೆಯ 14 ಮತ್ತು 16ನೇ ಕಲಮುಗಳನ್ನು ತೆಗೆದು ಹಾಕಿ, ಅವರಿಗೆ ಹೆಚ್ಚಿಗೆ ಅನುಕೂಲ ಒದಗಿಸಿಕೊಟ್ಟಿರುವ ಜಾಯಿಂಟ್ ಸಿಲೆಕ್ಟ್ ಕಮಿಟಿಗೆ ನನ್ನ ಅಭಿನಂದನೆಗಳು. ಈ ಕಲಮುಗಳಿಗೆ ರಿಟ್ರಾಸ್ಪೆಕ್ಟಿವ್ ಎಫೆಕ್ಟ್ ಕೊಡಬಹುದಿತ್ತು. ಯಾವ ಭೂಮಾಲೀಕರಿಗೆ 14ನೇ ಕಲಮಿನ ಪ್ರಕಾರ ಜಮೀನು ದೊರೆತಿರುತ್ತದೆ, ಅಂಥವರಿಗೆ ಸಿಲೆಕ್ಟ್

ಕಮಿಟಿಯ ವರದಿಯಿಂದ ಬಾಧೆ ಬರುವುದಿಲ್ಲ. ಇನ್ನು ಮುಂದೆ ಹೈಕೋರ್ಟಿಗೆ ಈ ವಿಷಯ ಹೋದರೆ ಡಿಸ್ಕ್ರಿಮಿನೇಷನ್ ಕಾರಣ ಎರಡೂ ಕಲಮುಗಳು ರದ್ದಾಗಿ ರೈತರಿಗೆ ಯಾವುದೇ ರೀತಿಯ ಪರಿಹಾರ ದೊರಕುವುದಿಲ್ಲ. ಕಂದಾಯ ಮಂತ್ರಿಗಳು ಈಗ ಇದ್ದ ಹುಕುಂಗಳನ್ನು ರೀಓಪನ್ ಮಾಡಿ ಯಾವ ಮಾಲೀಕರು ಜಮೀನುಗಳನ್ನು ತಮ್ಮ ತಾಬಾಕ್ಕೆ ತೆಗೆದುಕೊಂಡಿದ್ದಾರೋ ಅವುಗಳನ್ನು ಪುನರಪಿ ಅದೇ ಕುಳಗಳಿಗೆ ಮರಳಿ ಕೊಡಬೇಕೆಂದು ಈ ಕಾಯ್ದೆಯಲ್ಲಿ ವ್ಯವಸ್ಥೆ ಮಾಡಬೇಕು. 1968 ರ ಮೈಸೂರು ಕಾಯ್ದೆಯ 5ನೇ ಕಲಮಿನಲ್ಲಿ ತಿದ್ದುಪಡಿ ಮಾಡಿ ಭೂಮಾಲೀಕರಿಗೆ ದೊರೆತಂಥ ಜಮೀನುಗಳನ್ನು ಪುರನಪಿ ಕುಳಗಳಿಗೆ, ಗೇಣೀದಾರರಿಗೆ ಕೊಡಿಸಬೇಕು. 44 ನೇ ಕಲಂ ಪ್ರಕಾರ ಕುಳಗಳ ಕಡೆಗೆ ಇದ್ದ ಜಮೀನುಗಳಿಗೆ ಅವರು ಮಾಲೀಕರಾಗುವುದಿಲ್ಲ. ಜಾಯಿಂಟ್ ಸಿಲೆಕ್ಟ್ ಕಮಿಟಿ ರಿಪೋರ್ಟ್ ಪ್ರಕಾರ 20 ವರ್ಷಗಳಾದ ನಂತರ ಗೇಣೀದಾರ ರಿಜಿಸ್ಟರ್ಡ್ ಆಕ್ಯುಪಂಟ್ ಆಗುವ ಸಂಭವವಿದೆ. ಮುಂಬೈ ಕಾಯ್ದೆ ಪ್ರಕಾರ ಟೆನೆನ್ಸಿ ಡಿಕ್ಲೇರ್ ಮಾಡಿದೊಡನೆ ಕುಳಗಳು ಡೀಮ್ಡ್ ಪರ್ಚೇಸರ್ಸ್ ಆಗುತ್ತಾರೆ. ಅದೇ ಪ್ರಕಾರ ಕುಳಗಳು ಡೀಮ್ಡ್ ರಿಜಿಸ್ಟರ್ಡ್ ಅಕ್ಯುಪಂಟ್ಸ್ ಇನ್ ಎಫೆಕ್ಟ್ ಆಗುವಂತೆ ಮಾಡಲು ಕಾಯ್ದೆ ಮಾಡಬೇಕು. 63 (8) ಕಲಮಿನಲ್ಲಿ ಪ್ಲ್ಯಾಂಟೇಶನ್ ಕ್ರಾಪ್‌ಗೆ ವಿನಾಯಿತಿ ಕೊಟ್ಟಿರುವುದು ಸರಿಯಲ್ಲ. ಎಲ್ಲಾ ಕುಳಗಳನ್ನು ಸರಿಸಮಾನವಾಗಿ ತಿಳಿಯತಕ್ಕದ್ದು. ಪ್ಲ್ಯಾಂಟೇಶನ್ ಕ್ರಾಪ್‌ಗೂ 10 ಯೂನಿಟ್ ಸೀಲಿಂಗ್ ಅನ್ವಯಿಸತಕ್ಕದ್ದು. 133ನೇ ಕಲಮಿನಲ್ಲಿ 1ನೇ ಭಾಗ ಈ ರೀತಿ ಇದೆ:

"If any suit instituted in the Court as defined in this Act, involves any issues which are required to be settled, dicided or dealt with by that court under this Act, the same shall be tried as preliminary issues and the suit shall be proceeded with after deciding such preliminary issues"

ಸಿಲೆಕ್ಟ್ ಕಮಿಟಿ ರಿಪೋರ್ಟ್‌ನಲ್ಲಿ ಈ ಕಲಮಿನ ಬಗ್ಗೆ ಯಾವ ದುರಸ್ತಿಯನ್ನೂ ಸೂಚಿಸಿಲ್ಲ. ಭೂಮಾಲೀಕ ಮತ್ತು ಗೇಣಿದಾರ ಉಭಯತ್ರರಲ್ಲೂ ವ್ಯಾಜ್ಯ ಇದ್ದ ಪಕ್ಷದಲ್ಲಿ ಅದನ್ನು ಲ್ಯಾಂಡ್ ಟ್ರಿಬುನಲ್ ಡಿಸೈಡ್ ಮಾಡತಕ್ಕದ್ದು ಎಂದು ಹೇಳಿ, ಲ್ಯಾಂಡ್ ಟ್ರಿಬ್ಯೂನಲ್‌ಗೆ ಅಧಿಕಾರ ಕೊಟ್ಟಿರುತ್ತಾರೆ. ಆದರೆ

ಈ ಕಲಮಿನಲ್ಲಿ ಮುನ್ಸೀಫ್ ಕೋರ್ಟಿಗೆ ಅಧಿಕಾರ ಏಕೆ ಇರಬೇಕು? ಉಳಿದ ವಿಷಯಗಳಲ್ಲಿ ಲ್ಯಾಂಡ್ ಟ್ರಿಬ್ಯೂನಲ್ಲಿಗೆ ಅಧಿಕಾರವಿರುವಾಗ ಇದರಲ್ಲಿ ಏಕೆ ತಾರತಮ್ಯ ಮಾಡಬೇಕು? ನಾನು ಹೇಳಬಯಸುವುದೇನೆಂದರೆ ಮುನ್ಸೀಫ್ ಕೋರ್ಟಿನಲ್ಲಿ ಗೇಣೀದಾರರ ವಿಷಯಕ್ಕೆ ಸಂಬಂಧಪಟ್ಟ ಹಾಗೆ ಯಾವುದಾದರೂ ಕೇಸ್ ಇದ್ದರೆ ಅವುಗಳನ್ನು ತಹಶೀಲ್ದಾರರ ಕಡೆಗೆ ಕಳುಹಿಸತಕ್ಕದ್ದು. ತಹಶೀಲ್ದಾರ್ ಅಥವಾ ಲ್ಯಾಂಡ್ ಟ್ರಿಬ್ಯೂನಲ್ ಕೊಟ್ಟ ನಿರ್ಣಯಗಳನ್ನು ಮುನ್ಸೀಫ್ ಕೋರ್ಟ್ ಮಾನ್ಯ ಮಾಡಿ ಆ ಪ್ರಕಾರವಾಗಿ ಹುಕುಂ ಮಾಡತಕ್ಕದ್ದು ಎಂದು ಈ ಸಮಯದಲ್ಲಿ ಸೂಚಿಸಬಯಸುತ್ತೇನೆ. ಲ್ಯಾಂಡ್ ಟ್ರಿಬ್ಯೂನಲ್‌ನಲ್ಲಿ ವಕೀಲರಿಗೆ ಹಾಜರಾಗಲು ಪರವಾನಿಗಿ ಕೊಟ್ಟಿಲ್ಲ. ಲ್ಯಾಂಡ್ ಟ್ರಿಬ್ಯೂನಲ್ ಕೆಲಸ ನಡೆಯುವ ಸಮಯದಲ್ಲಿ ಅಶಿಕ್ಷಿತ ಗೇಣೀದಾರರಿಗೆ ಇದರಿಂದ ತೊಂದರೆಯಾಗುತ್ತದೆ. ಆ ದೃಷ್ಟಿಯಿಂದ ಲ್ಯಾಂಡ್ ಟ್ರಿಬ್ಯೂನಲ್ ಮುಂದೆ ವಕೀಲರು ಹಾಜರಾಗಿ ಕೆಲಸ ನಿರ್ವಹಿಸುವಂತೆ ಮಾಡಿಕೊಡಬೇಕು. ಕಾಫಿ ಬೋರ್ಡ್ ವ್ಯಕ್ತಿ ಇಲ್ಲದೇ ಇದ್ದಾಗ್ಯೂ ಅದಕ್ಕೆ ವಿನಾಯಿತಿ ಕೊಡಲ್ಪಟ್ಟಿದೆ. ಆದರೆ 107 ನೇ ಕಲಮನ್ನು ತೆಗೆದುಹಾಕಿ ಶೈಕ್ಷಣಿಕ ಸಂಸ್ಥೆಗಳಿಗೆ ಇದ್ದಂಥ ವಿನಾಯಿತಿ ಕಸಿದುಕೊಳ್ಳಲ್ಪಟ್ಟಿದೆ. ಇದು ಸರಿಯಲ್ಲ. ಅನೇಕ ವಿದ್ಯಾ ಸಂಸ್ಥೆಗಳು ಭೂಮಿಯ ಉತ್ಪನ್ನದಿಂದ ನಡೆದಿರುತ್ತವೆ. ಆದರೆ ಸಧ್ಯಕ್ಕೆ ಸರ್ಕಾರ ಶಾಲೆ - ಕಾಲೇಜುಗಳಿಗೆ ಸಂಪೂರ್ಣ ಹಣ ಕೊಡದೆ, ಡಿಫಿಸಿಟ್‌ನ 80 ಪರ್ಸೆಂಟ್ ಗ್ರ್ಯಾಂಟ್ ಕೊಡುತ್ತದೆ. ಉಳಿದ 20 ಪರ್ಸೆಂಟ್ ಹಣ ಏನಿದೆ ಅದನ್ನು ಭೂಮಿಯ ಉತ್ಪನ್ನದಿಂದ ತುಂಬಿಕೊಂಡು ಶಾಲೆ – ಕಾಲೇಜುಗಳನ್ನು ನಡೆಸುತ್ತಿದ್ದಾರೆ. ಸರ್ಕಾರದವರು ಯಾವತ್ತೂ ಕಾಲೇಜುಗಳನ್ನು ವಹಿಸಿಕೊಂಡು ನಡೆಸಿದ ಪಕ್ಷದಲ್ಲಿ ಈ ವಿನಾಯಿತಿ ತೆಗೆಯಬಹುದು. ಆದುದರಿಂದ ಈ ವಿನಾಯಿತಿ ತೆಗೆಯುವುದು ಸರಿಯಲ್ಲ.

ಮತ್ತೊಂದು ವಿಷಯವೇನೆಂದರೆ, ಬೇರೆ ರಾಜ್ಯಗಳಲ್ಲಿ ಭೂಮಿ ಇದ್ದರೆ, ಅದನ್ನು ಲಕ್ಷ್ಯದಲ್ಲಿ ತೆಗೆದುಕೊಂಡು ಸೀಲಿಂಗ್ ಏರಿಯಾ ಫಿಕ್ಸ್ ಮಾಡುವ ಬಗ್ಗೆ ನಮ್ಮ ಈ ಕಾಯ್ದೆಯಲ್ಲಿ ವ್ಯವಸ್ಥೆ ಇಲ್ಲ. ಮುಂಬೈ, ಮದ್ರಾಸ್ ಅಥವಾ ಹಿಂದೂಸ್ತಾನದ ಬೇರೆ ಯಾವುದೇ ರಾಜ್ಯದಲ್ಲಿ ಜಮೀನಿರುವ ಭೂಮಾಲಿಕನಿದ್ದರೆ, ಅದನ್ನು ಲಕ್ಷ್ಯದಲ್ಲಿ ತೆಗೆದುಕೊಂಡು ಸೀಲಿಂಗ್ ಫಿಕ್ಸ್ ಮಾಡಬೇಕು.

ಟೆನೆನ್ಸಿ ಯಿಯರ್ (Tenancy year) ಬಗ್ಗೆ ಕಾಯ್ದೆಯಲ್ಲಿ ದುರಸ್ತಿ ಮಾಡಿಲ್ಲ. ಸಿಲೆಕ್ಟ್ ಕಮಿಟಿ ರಿಪೋರ್ಟ್‌ನಲ್ಲೂ ಇದನ್ನು ಉಲ್ಲೇಖಿಸಿಲ್ಲ. ಇದನ್ನು ಸ್ಪಷ್ಟ ಮಾಡಬೇಕೆಂದು ಪದೇ ಪದೇ ಹೇಳುತ್ತಿದ್ದೇನೆ. ಮಾನ್ಯ ಕಂದಾಯ ಮಂತ್ರಿಗಳು ಟೆನೆನ್ಸಿ ಯಿಯರ್ ವಿವರಿಸಿ ಒಂದು ವಾಕ್ಯ ಹಾಕಬೇಕು.

ಕ್ಷಾಮಗ್ರಸ್ಥ ಪ್ರದೇಶದಲ್ಲಿ 20 ಪರ್ಸೆಂಟ್ ವೇಟೇಜ್ ಕೊಡಬೇಕೆಂದು ಸಿಲೆಕ್ಟ್ ಕಮಿಟಿ ಸೂಚಿಸಿದ್ದು ಸರಿಯಲ್ಲ. ರಾಜ್ಯದಲ್ಲಿರುವ ಎಲ್ಲಾ ಜನರಿಗೆ ಸರಿಸಮಾನವಾದ ಕಾಯ್ದೆ ಅಥವಾ ಒಂದೇ ಭೂ ಹಿಡುವಳಿ ಇರುವಂತೆ ವ್ಯವಸ್ಥೆ ಮಾಡಬೇಕು. ಕ್ಷಾಮಗ್ರಸ್ಥ ನಾಡಿನಲ್ಲಿ ಕೂಡ ಭೂ ಹಿಡುವಳಿಗೆ ಸಂಬಂಧಪಟ್ಟ ಜಮೀನಿನಲ್ಲಿ ಛಲೋ ರೀತಿ ಸಾಗುವಳಿ ಮಾಡಿದರೆ ಸರಿಯಾದ ಉತ್ಪನ್ನ ಬರುತ್ತದೆ. ಆ ದೃಷ್ಟಿಯಿಂದ ವೇಟೇಜ್ ಏನು ಕೊಡಲಾಗಿದೆ ಅದು ಸರಿಯಲ್ಲ ಎಂದು ನಾನು ಹೇಳಬಯಸುತ್ತೇನೆ.

ಇನ್ನೊಂದು ವಿಚಾರ ಈ ಸಮಯದಲ್ಲಿ ಹೇಳುವುದೇನೆಂದರೆ, ಸಧ್ಯಕ್ಕೆ ಮುನ್ಸೀಫ್ ಕೋರ್ಟಿನಲ್ಲಿ ಬೇರೆ ಬೇರೆ ವ್ಯಾಜ್ಯಗಳು – ಲಿಟಿಗೇಷನ್ಸ್ ಪೆಂಡಿಂಗ್ ಇರುತ್ತವೆ. ಈ ಮುನ್ಸೀಫ್ ಕೋರ್ಟಿನಲ್ಲಿ 14ನೇ ಕಲಮಿನ ಪ್ರಕಾರ ದಾಖಲು ಆಗಿ ಪೆಂಡಿಂಗ್ ಇದ್ದಂಥ ಟೆನೆನ್ಸಿ ಕೇಸ್‌ಗಳು, ಲ್ಯಾಂಡ್ ರಿಕವರಿ ಕೇಸ್‌ಗಳು ಇವನ್ನು ವರ್ಗಾವಣೆ ಮಾಡಿ ತಹಶೀಲ್ದಾರರ ಕಡೆಗೆ ಕಳುಹಿಸಬೇಕು ಎನ್ನುವ ವ್ಯವಸ್ಥೆ ಇಲ್ಲ. ಅಂಥ ವ್ಯವಸ್ಥೆ ಮಾಡುವುದು ಅವಶ್ಯ. ಇನ್ನು ರೆಂಟ್ ರಿಕವರಿ ಬಗ್ಗೆ ಹೇಳುವುದಾದರೆ ಈಗ ಮುನ್ಸೀಫ್ ಕೋರ್ಟಿನಲ್ಲಿ ಏನು ಪೆಂಡಿಂಗ್ ಕೇಸ್ ಚಾಲು ಇರುತ್ತದೋ ಅದನ್ನು ತಹಶೀಲ್ದಾರರ ಕಡೆಗೆ ವರ್ಗಾಯಿಸಬೇಕೆನ್ನುವ ವಿಚಾರ ಸಿಲೆಕ್ಟ್ ಕಮಿಟಿ ರಿಪೋರ್ಟಿನಲ್ಲಿ ಇರುವುದಿಲ್ಲ. ಇಷ್ಟು ಹೇಳಿ ಅಧ್ಯಕ್ಷರು ನನಗೆ ಮಾತನಾಡಲು ಇಷ್ಟು ಕಾಲಾವಕಾಶ ಕೊಟ್ಟಿದ್ದಕ್ಕಾಗಿ ಅವರಿಗೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

# ಗಮನಸೆಳೆವ ಪ್ರಶ್ನೆ

## 14ನೇ ಮೇ 1973

## CALLING ATTENTION TO MATTERS OF URGENT PUBLIC IMPORTANCE

**Ref:-** (1) Acute scarcity of drinking water in some talukas of Bijapur District.

**Sri P. M. Bangi (Jamkhandi)**- Madam Speaker, I beg to call the attention of the Minister for Public Works and Electricity to the acute scarcity of drinking water in some talukas of Bijapur District.

Sri H.M. Channabasappa (Minister for Public Works and Electricity)

**Rabakavi-** Banahatti and Jamkhandi are the towns having Municipal Bodies. They are provided with Urban Water Supply Schemes. These towns as also, 23 villages of Jamkhandi taluka, 23 villages of Bilagi taluka and 17 villages of Bagalakot taluka are situated on the banks of the River Krishna. The waters of the river Krishna are the life line for these towns and villages for drinking, irrigation and other purposes. Even in normal years of rainfall, the flow of water in the river becomes thin during summer months. During this year, due to scanty rainfall in the catchment areas, the volume of flow of water in

the river Krishna has decreased to an unprecedented extent. In consequence, supply of water in the water supply schemes and drinking water wells in the towns and villages have had its adverse effects causing scarcity of drinking water.

**Rabakavi** - Banahatti town has a population of 37,509. The town is served by an Urban Water Supply Scheme fed by the river Krishna which has now dried up. To meet the present situation, the existing 31 public drinking water wells have been activised. 3 bore wells have been sunk. Besides, 10 private irrigation wells around the town, having adequate supply of water, are made use of. Pump-sets have been fixed and taps provided to one public and one private drinking water wells. Water in some of the drinking water wells and all the 3 bore wells are stated to be brakish. But all the same, they are utilized for purposes other than drinking. Anticipating that scarcity of drinking water may go worse in the days ahead, the municipal authorities have proposed to deepen the existing wells and to sink some fresh wells. They have also proposed certain improvements to the water supply scheme. A 600 feet long bund has been put up acrose the river Krishna near the head works to impound water if and when let out from Koyana Reservoir.

Jamkhandi Town has a population of 29,981. This town also is served by an urban water supply scheme which again is fed by the River Krishna. It has been possible to supply water from the scheme only on alternate days. But there are 57 public and private drinking water wells. Though 23 of them are having

brakish water, all the wells put together, are meeting the bare requirements of the towners for drinking and other purposes. In order to meet the more difficult situation that may arise in the near future, it has been proposed to lift water from the down stream of Sanal head-works near Alagur. A sum of Rs. 15,000 under 64 Famine Relief has been placed at the disposal of the Assistant Engineer, P.H.E. Sub-Division, Jamkhandi. This device is expected to be finalised soon. Besides, the existing wells are proposed to be desilted and deepened. A 550 feet long bund has been put up, across the river Krishna to impound water, if and when released from Koyana Reservoir.

Out of 23 villages of Jamkhandi taluka, situated on the banks of river Krishna, 12 villages are having no drinking water wells. They are entirely depending upon the river water. Finding that sinking of open wells would not be of use, due to deep black soil and tapping of brakish water, bore wells are proposed to these 12 villages. In fact, bore wells have already been sunk in Tamadaddi and Kankanawadi. As a temporary measure, sinking of pit wells have been provided in some villages and proposed to be taken up in some other villages. Spots from where water can be had from the river Krishna to some villages have been identified. Arrangements are also made for supply of water through tankers to Bidari village, where such a course is found necessary. Two villages - Chinagundi and Kunchanur are served by National Rural Water Supply Schemes.

All the 23 villages of Bilagi taluka situated on the banks of river Krishna are entirely depending on the river water. At

present, they are fetching water from small ponds and ditches in the river bed. Pit wells have been provided wherever necessary and possible. Even these measures may be of no avail by the end of April 1973. Then, water will have to be transported from other sources.

In Bagalakot taluka 17 villages are situated on the banks of river Krishna. Of these, 4 villages do not have drinking water wells. Water in the wells in the 13 villages has gone down because the river has dried up. It is considered that deepening of these wells would not be of much use. Hence, water needs to be transported from other sources. 5 rigs have been deployed in the district of which only two are in working condition. Bore wells are taken up wherever possible.

Ref:- (2) To the urgency of releasing water from the Koyana river Project in the dried-up bed of Krishna river that flows in rainy season:-

The rivers in the Krishna basin receive their waters from the South-West monsoons. The flow in these rivers beyond December is generally very low and during the summer months, the rivers are generally dry.

Many of the villages and towns situated on the banks of river Krishna in Mysore State experience shortage of water during the summer months. This situation is more acute during the recent few years due to the large scale Lift Irrigation, practised

on the banks of river Krishna in Maharashtra State. During last year the Government of Maharashtra who were requested to allow water from their storage reservoir at Koyna for meeting the drinking water needs of the towns and villages situated on the banks of Krishna in Mysore State, had expressed their doubt as to whether such letting down of water would be fully received in Mysore State due to large number of Lift Irrigations in their State over which they had no control. For this reason, Mysore Government have taken up the construction of small anicuts across the river Krishna for providing necessary relief for the population living on the banks of the river. The construction of barrage at Ugar is completed and the construction of a barrage at Rabkavi Banhatti is nearing completion. The construction of barrages at Kallol and Galgali is being taken up.

In order to provide some relief, the Government of Maharashtra was approached last year for releasing water to an extent of 100 cusecs from Koyna dam for the period of one month. The Maharashtra Government agreed to release 3000 day cusecs of water subject to condition that 12 million units of power are supplied free of charge in return. The proposals of Government of Maharashtra was agreed to and 12 million units of power had been supplied. The cost of the power so supplied being Rs. 6.6 lakhs.

As per the agreement reached between the Maharashtra Government and Mysore Government during the current year, 6000 day cusecs of water in three fortnightly instalments during

April and May will be made available from the Koyna Reservoir. As per the agreement reached, Maharashtra Government has to release 1,920 cusecs of water from 23rd April to 27th April 1973 and the second release as scheduled will be from 8th May onwards. It is learnt from the Superintending Engineer, Ghataprabha Canal Circle that the water has reached Manjra Causeway which is about 14 miles from the border and that there is no flow beyond this point as this initial release of water has filled up various pools all along and a part of water has also been lost due to evaporation and absorption. In order to see that this flow continues, the Government of Maharashtra has been requested on 30th April 1973 to release 1000 day cusecs for four days from 1st May to 4th May, 1973. The Chief Engineer, Irrigation Department, Maharashtra was contacted by the Commissioner and Secretary Public Works Department and he has informed that instructions have already been issued to the concerned officers to release water from 1st May 1973.

ಶ್ರೀ ಪಿ. ಎಂ. ಬಾಂಗಿ– ರಬಕವಿ–ಬನಹಟ್ಟಿ ಸಂಬಂಧವಾಗಿ 600 ಫೂಟ್ ಉದ್ದದ ಒಂದು ಬ್ಯಾರೇಜ್ ಹಾಕಲಾಗಿದೆಯೆಂದು ಹೇಳಿದ್ದೀರಿ. ಈ ಬ್ಯಾರೇಜ್ ಎಲ್ಲಿ ಹಾಕಲಾಗಿದೆ ಮತ್ತು ಕೆಲಸ ಪೂರ್ಣ ಆಗಿದೆಯೇ ಹೇಗೆ? ಅದರಲ್ಲಿ ಈ ದಿವಸ ನೀರು ನಿಂತಿಲ್ಲ, ನಿಲ್ಲುವ ಸಂಭವವಿಲ್ಲ. ಈ ವಿಷಯದ ಕಡೆಗೆ ಸರ್ಕಾರದ ಗಮನ ಹೋಗಿದೆಯೇ ಹೇಗೆ? ಜಮಖಂಡಿ ವಿಷಯವಾಗಿ 559 ಫೂಟ್ ಉದ್ದದ ಬ್ಯಾರೇಜನ್ನು ಕೃಷ್ಣಾ ನದಿಯಲ್ಲಿ ಹಾಕುತ್ತೇವೆಂದು ಹೇಳುತ್ತೀರಿ, ಈ ಬ್ಯಾರೇಜ್ ಎಲ್ಲಿ ಹಾಕುತ್ತೀರಿ? ಎಂದು ಹಾಕುತ್ತೀರಿ? ಇದು ಪಕ್ಕಾ ಕಟ್ಟಿದ ಬ್ಯಾರೇಜೇ ಅಥವಾ ಉಸುಕಿನ ಚೀಲ ಹಾಕಿ ಕಟ್ಟಿಸಿದ್ದೇ? ಈ ಬ್ಯಾರೇಜ್‌ನಿಂದ ಏನೂ ಉಪಯೋಗವಾಗುವುದಿಲ್ಲ ಎನ್ನುವ ಕಡೆಗೆ ಸರ್ಕಾರದ ಗಮನ ಹೋಗಿದೆಯೇ? ಎಂದು ತಿಳಿಸಬೇಕು. ಇನ್ನು ಬೋರ್‌ವೆಲ್ಸ್ ವಿಚಾರದಲ್ಲಿ,

5 ರಿಗ್‌ಗಳನ್ನು ವಿಜಾಪೂರ ಜಿಲ್ಹೆಗೆ ಕೊಡಲಾಗಿದೆಂದು ಹೇಳಿದ್ದೀರಿ, ಅದರಲ್ಲಿ ಎರಡು ರಿಗ್‌ಗಳು ಸರಿಯಾಗಿಲ್ಲ. ಜಮಖಂಡಿ, ಬೀಳಗಿ, ಬಾಗಲಕೋಟ, ಈ ಸ್ಥಳಗಳಿಗೆ ಒಂದು ರಿಗ್ ಕೂಡ ಈವರೆಗೆ ಬಂದಿಲ್ಲ. ಈ ಕಡೆಗೆ ಸರ್ಕಾರದ ಗಮನಹೋಗಿದೆಯೇ ಹೇಗೆ? ಒಂದು ರಿಗ್‌ನ್ನಾದರೂ ಜಮಖಂಡಿ, ಬೀಳಗಿ, ಬಾಗಲಕೋಟ ತಾಲೂಕುಗಳಿಗೆ ಕಳುಹಿಸುವರೇ ಎಂದು ಸ್ಪಷ್ಟ ಮಾಡಬೇಕು. ಬೀಳಗಿ ವಿಚಾರ ಮಾಡುವಾಗ 'ಅದರ್ ಸೋರ್ಸನಿಂದ' ನೀರು ತರುತ್ತೇವೆಂದು ಹೇಳಿದ್ದೀರಿ, 'ಅದರ್ ಸೋರ್ಸ' ಎಂದರೆ ಯಾವುದು, ಎಲ್ಲಿಂದ ತರುತ್ತೀರಿ? ನಂತರ ಮೇ, 1, 1973 ರಿಂದ ಕೊಯ್ನಾ ನೀರು ಬಿಡುವ ವ್ಯವಸ್ಥೆ ಬಗ್ಗೆ ಚರ್ಚೆ ಆಗಿದೆ ಎಂದು ಹೇಳಿದ್ದೀರಿ. ಈ ದಿವಸ ಮೇ 14ನೇ ತಾರೀಖು, ಈವರೆಗೆ ಎಷ್ಟು ನೀರು ಮಹಾರಾಷ್ಟ್ರದಿಂದ ಕರ್ನಾಟಕದ ಏರಿಯಾಕ್ಕೆ ಬಂದಿದೆ? ಎಲ್ಲಿಯವರೆಗೆ ಮುಟ್ಟಿದೆ? ನಮ್ಮ ತಾಲೂಕಿನಲ್ಲಿ ಇಲ್ಲಿಯವರೆಗೆ ಒಂದು ಹನಿ ನೀರೂ ಬಂದಿಲ್ಲ. ಈ ಕಡೆ ಸರ್ಕಾರದ ಗಮನ ಹೋಗಿದೆಯೇ ಹೇಗೆ? ಕೊಯ್ನಾ ನೀರನ್ನು ಸಾಕಷ್ಟು ಬಿಡಿಸಿ ಜಮಖಂಡಿ, ಬೀಳಗಿ, ಬಾಗಲಕೋಟ ತಾಲೂಕುಗಳಿಗೆ ನೀರು ಒದಗಿಸುವಿರೋ ಹೇಗೆ? ಕಳೆದ ವರ್ಷ 6 ಲಕ್ಷ ರೂಪಾಯಿ ಎಲೆಕ್ಟ್ರಿಸಿಟಿ ಮಹಾರಾಷ್ಟ್ರಕ್ಕೆ ಕೊಟ್ಟಿದ್ದೀರಿ. ಆದರೆ ಅವರಿಂದ ಏನೂ ನೀರು ಬರಲಿಲ್ಲ.

**ಶ್ರೀ ಎಚ್.ಎಂ. ಚನ್ನಬಸಪ್ಪ**– ಶ್ರೀಮಾನ್ ಬಾಂಗಿಯವರು ಪ್ರಶ್ನೆಗಳನ್ನು ಕೇಳುತ್ತಾ ಒಂದು ಭಾಷಣವನ್ನೇ ಮಾಡಿದರು. ರಿಗ್ಸ್ 5 ಹಾಕಿದ್ದೇವೆ. ಅದರಲ್ಲಿ ಮೂರು ಕೆಟ್ಟುಹೋಗಿವೆ, 2 ಕೆಲಸ ಮಾಡುತ್ತಾ ಇವೆ ಎಂದು ಸ್ಪಷ್ಟವಾಗಿ ಹೇಳಿದ್ದೇನೆ. ಕೆಟ್ಟು ಹೋಗಿರುವುದನ್ನು ರಿಪೇರಿ ಮಾಡಿಸಿ ಕೆಲಸಕ್ಕೆ ತೊಡಗಿಸುತ್ತೇವೆ.

**ಶ್ರೀ ಪಿ. ಎಂ. ಬಾಂಗಿ** – ಅಲ್ಲಿಗೆ ಒಂದು ರಿಗ್‌ನ್ನಾದರೂ ಕಳುಹಿಸಿ.

**ಶ್ರೀ ಎಚ್.ಎಂ.ಚೆನ್ನಬಸಪ್ಪ**– ಎಲ್ಲೆಲ್ಲಿ ನೀರಿನ ಅಭಾವ ಬಹಳ ಕಠಿಣ ಇದೆ, ಅಲ್ಲಿಗೆ ಮೊದಲಿನ ಪ್ರಾಧಾನ್ಯತೆ ಕೊಡಬೇಕಾಗುತ್ತದೆ. ಎಲ್ಲಿ ಅಲ್ಟರ್ನೇಟಿವ್ ಸೋರ್ಸ್ ಇದೆ, ಅಲ್ಲಿಗೆ ಎರಡನೆಯ ಪ್ರಾಧಾನ್ಯತೆ ಕೊಡಬೇಕಾಗುತ್ತದೆ. ಬ್ಯಾರೇಜಸ್‌ನ ವಿಷಯ ಮಾತನಾಡಿದ್ದೇನೆ. ಎರಡು ಬ್ಯಾರೇಜಸ್ ಕಂಪ್ಲೀಟ್

ಆಗತಕ್ಕವುಗಳು ಇವೆ. ಇನ್ನು ಎರಡು ಬ್ಯಾರೇಜಸ್‌ಗಳನ್ನು ಎಲ್ಲೆಲ್ಲಿ ಸಾಧ್ಯವೋ ಮತ್ತು ಅವಶ್ಯಕವೋ ಅಲ್ಲಿ ಹಾಕಿ ಎಂದು ಹುಕುಂ ಮಾಡಿದ್ದೇವೆ. ಅದರಂತೆ ಮಾಡುತ್ತಿದ್ದಾರೆ. ಈಗ ಬಂದಿರತಕ್ಕ ಕಷ್ಟ ಕೃಷ್ಣಾ ನದಿಯಲ್ಲಿ ನೀರಿನ ಫ್ಲೋ ದಿನ ಕ್ರಮೇಣ ಕಡಿಮೆ ಆಗುತ್ತಿದೆ, ಪ್ರಾಕ್ಟಿಕಲ್ ಆಗಿ ನೀರು ನಿಂತು ಹೋಗಿದೆ.

# ರೈತರ ಪರವಾದ ಕಾನೂನನ್ನು ಮಾಡಿರಿ

## 16ನೇ ಮೇ 1973

ಶ್ರೀ ಪಿ.ಎಂ. ಬಾಂಗಿ (ಜಮಖಂಡಿ)– ಮಾನ್ಯ ಉಪಾಧ್ಯಕ್ಷರೇ, ಈ ಮಸೂದೆಯನ್ನು ನಾನು ಬೆಂಬಲಿಸುತ್ತಾ ಈ ಬಗ್ಗೆ ಹಲಕೆಲವು ಸಲಹೆಗಳನ್ನು ಹೇಳಬಯಸುತ್ತೇನೆ.

ಮೊಟ್ಟ ಮೊದಲನೆಯದಾಗಿ ಮೈಸೂರು ರಾಜ್ಯದಲ್ಲಿ ಮೈಸೂರು ಅಗ್ರಿಕಲ್ಚರಲ್ ಡೆಟರ್ಸ ರಿಲೀಫ್ ಆ್ಯಕ್ಟ್ 1966 ರಲ್ಲಿ ಪಾಸ ಆದನಂತರ ಅನೇಕ ಸಾಹುಕಾರರು ಮೈಸೂರು ಹೈಕೋರ್ಟಿನಲ್ಲಿ ರಿಟ್ ಪಿಟಿಷನ್ ಹಾಕಿ ತಡೆಯಾಜ್ಞೆ ತಂದರು. ಕೊನೆಗೆ ಆ ಡೆಟರ್ಸ ರಿಲೀಫ್ ಆ್ಯಕ್ಟ್ ರದ್ದಾಯಿತು. ತದನಂತರ ಮೈಸೂರು ಸರ್ಕಾರದವರು ಸುಪ್ರೀಂ ಕೋರ್ಟಿನಲ್ಲಿ ಅಪೀಲು ದಾಖಲು ಮಾಡಿ 2–3 ವರ್ಷ ಆಗಿದ್ದು, ಅದಿನ್ನೂ ಪೆಂಡಿಂಗ್ ಇದೆ. ಈ ಬಗ್ಗೆ ಮೈಸೂರು ಸರ್ಕಾರದವರು ಒಬ್ಬ ತಜ್ಞ ಅಡ್ವೋಕೇಟನನ್ನು ನೇಮಿಸಿ ಈ ವಿಷಯದಲ್ಲಿ ಕೂಡಲೇ ಹಿಯರಿಂಗ್ ಮಾಡಿಸಿ ಈ ಕಾಯ್ದೆ ಕ್ರಮಬದ್ಧವಾಗಿದೆ ಎಂದು ತೀರ್ಮಾನ ಪಡೆಯಲು ಪ್ರಯತ್ನ ಮಾಡಬೇಕೆಂದು ನಾನು ಈ ಸಮಯದಲ್ಲಿ ಸೂಚಿಸಬಯಸುತ್ತೇನೆ.

ಇನ್ನು ಎರಡನೇ ವಿಷಯ ಏನೆಂದರೆ, ರೈತರ ಆಸ್ತಿಗಳು ಉಳಿಯಬೇಕು ಮತ್ತು ದುಷ್ಕಾಲದಿಂದ ಸಂತ್ರಸ್ತರಾದ ರೈತರಿಗೆ ಹೆಚ್ಚಿನ ಸಹಾಯ ಸಿಗಬೇಕು. ಸಣ್ಣ ರೈತರಿಗೂ ಪರಿಹಾರ ದೊರಕುವಂತೆ ಈ ಕಾಯ್ದೆಯಲ್ಲಿ ದುರಸ್ತಿ ಮಾಡಬೇಕು. ಈಗಾಗಲೇ ಆಗಿರುವ ಡಿಕ್ರಿ ತಡೆಹಿಡಿಯಬೇಕು. ರೈತರ ವಿರುದ್ಧ

ಇರುವ ಪೆಂಡಿಂಗ್ ಪ್ರೊಸೀಡಿಂಗ್ಸ್ ತಡೆಯಬೇಕು. ಇನ್ನು ಮುಂದೆ ಆಗುವ ಡಿಕ್ರಿಗಳು ಕನಿಷ್ಠ ಎರ್ಡು ವರ್ಷ ಜಾರಿಯಲ್ಲಿ ಬರದ ಹಾಗೆ ತಡೆಹಿಡಿಯುವಂತೆ ತಿದ್ದುಪಡಿ ಮಾಡಿ ರೈತರಿಗೆ ಪರಿಹಾರ ಕೊಡಬೇಕು.

ರೈತನಿಗೆ ಅರ್ಬನ್ ಬ್ಯಾಂಕಿನಲ್ಲಿ ಸಾಲ ದೊರೆಯುವ ವ್ಯವಸ್ಥೆಯಾಗಬೇಕು. ಇಂಥ ಬ್ಯಾಂಕುಗಳು ಪ್ರತಿಯೊಂದು ತಾಲೂಕಿನಲ್ಲಿಯೂ ಇದ್ದು ಅವುಗಳಿಂದ ಕೇವಲ ವ್ಯಾಪಾರಿಗಳಿಗೆ ಸಾಲ ಸಿಗುತ್ತಿದೆ. ಇನ್ನು ಮುಂದೆ ಸಹಕಾರ ಮಂತ್ರಿಗಳು ಯಾವತ್ತೂ ಅರ್ಬನ್ ಬ್ಯಾಂಕುಗಳಿಗೆ ಹುಕುಂ ಮಾಡಿ ರೈತರಿಗೆ ಅಡಚಣೆ ಇದ್ದ ಸಮಯದಲ್ಲಿ ಸಾಲ ಕೊಡುವ ವ್ಯವಸ್ಥೆ ಮಾಡಬೇಕೆಂದು ಸೂಚಿಸಿ ನನ್ನ ಮಾತನ್ನು ಮುಗಿಸುತ್ತೇನೆ.

## ನ್ಯಾಯಾಂಗದ ಕುರಿತು

### 16ನೇ ಮೇ 1973

ಶ್ರೀ ಪಿ. ಎಂ. ಬಾಂಗಿ (ಜಮಖಂಡಿ)– ಮಾನ್ಯ ಅಧ್ಯಕ್ಷರೇ, ಕಾನೂನು ಸಚಿವರು ತಂದಂಥ ಈ ಬಿಲ್ಲನ್ನು ನಾನು ಸಂಪೂರ್ಣವಾಗಿ ಸ್ವಾಗತಿಸುತ್ತೇನೆ. ಆದರೆ ಒಂದು ಸಂದೇಹ ಏನೆಂದರೆ, ಸಿಂಗಲ್ ಜಡ್ಜ ಬೆಂಚಿನ ನಿರ್ಣಯ ಕೊನೆಯ ನಿರ್ಣಯವೇ ಹೇಗೆ, ಈ ಬಗ್ಗೆ ಈ ಬಿಲ್ಲಿನಲ್ಲಿ ಯಾವ ರೀತಿಯ ಸ್ಪಷ್ಟೀಕರಣ ಇಲ್ಲ. ನಾನು ಸಲಹೆ ಮಾಡುವುದು ಏನು ಎಂದರೆ, ಹೈಕೋರ್ಟಿನವರು ಅಪೀಲು ನಿರ್ಣಯ ಮಾಡಿದರೂ ಸೆಕೆಂಡ ಅಪೀಲಿಗಾಗಿ ಸುಪ್ರೀಂ ಕೋರ್ಟಿಗೆ ಹೋಗತಕ್ಕ ಅಧಿಕಾರ ಇರತಕ್ಕದ್ದು. ಈ ಬಗ್ಗೆ ತಿದ್ದುಪಡಿ ಮಾಡತಕ್ಕದ್ದು ಎಂದು ಈ ಸಮಯದಲ್ಲಿ ನಾನು ಸಲಹೆ ಮಾಡುತ್ತೇನೆ. ಇನ್ನೊಂದು ವಿಷಯ ಏನೆಂದರೆ, ಈಗ ಸಧ್ಯಕ್ಕೆ ಹೈಕೋರ್ಟಿನಲ್ಲಿ ಪೆಂಡಿಂಗ ಇದ್ದಂಥ ಎಲ್ಲಾ ಚಾಲೂ ಅರ್ಜಿಗಳನ್ನು ಆಯಾ ಕಾಲದಲ್ಲಿ ಇದ್ದಂಥ ನಿಯಮಕ್ಕನುಸಾರ ಐದು ರೂಪಾಯಿ ಟಿಕೆಟ್ ಹಚ್ಚಿ ರಿಟ್ ಪಿಟಿಷನ್ ದಾಖಲು ಮಾಡಿದ್ದಾರೆ. ಆ ಅರ್ಜಿಗಳಿಗೆ ಹೆಚ್ಚಿನ ಕೋರ್ಟ ಫೀ ಹಚ್ಚುವುದು ಅವಶ್ಯಕವಿಲ್ಲವೇ? ಈ ಎರ್ಡು ವಿಷಯಗಳನ್ನು ಸ್ಪಷ್ಟವಾಗಿ ಖುಲಾಸೆ ಮಾಡಬೇಕೆಂದು ನಾನು ಲಾ ಮಿನಿಸ್ಟರ್ ಅವರಿಗೆ ಸಲಹೆ ಮಾಡುತ್ತೇನೆ. ಇಷ್ಟು ಹೇಳಿ, ನನ್ನ ಮಾತನ್ನು ಮುಗಿಸುತ್ತೇನೆ.

# ವಿಶ್ವವಿದ್ಯಾಲಯ ವಿಧೇಯಕದ ಮೇಲಿನ ಚರ್ಚೆ

## 28ನೇ ಮೇ 1973

ಶ್ರೀ ಪಿ. ಎಂ. ಬಾಂಗಿ (ಜಮಖಂಡಿ)– ಮಾನ್ಯ ಅಧ್ಯಕ್ಷಣೀಯವರೇ, ನಮ್ಮ ವಿದ್ಯಾಮಂತ್ರಿಗಳು ತಂದಿರುವ ಯೂನಿವರ್ಸಿಟಿ ಬಿಲ್ಲನ್ನು ಸ್ವಾಗತಿಸುತ್ತಾ ನನ್ನ ಸಲಹೆಗಳನ್ನು ಕೊಡಲಿಚ್ಛಿಸುತ್ತೇನೆ. ಇಡೀ ದೇಶದಲ್ಲಿ ಈ ಬಗ್ಗೆ ಒಂದೇ ಕಾಯ್ದೆ ಇರಬೇಕೆಂಬ ತತ್ವವನ್ನು ಅನುಸರಿಸಿ ಈ ಮಸೂದೆಯನ್ನು ಮಂಡಿಸಿದ್ದಾರೆ. ಇದು ಯೋಗ್ಯವಾಗಿದೆ. ಇದರಲ್ಲಿ ಭಿನ್ನಾಭಿಪ್ರಾಯವಿಲ್ಲ. ಶಕ್ಯವಿದ್ದಷ್ಟು ಪ್ರಜಾಪ್ರಭುತ್ವ ತತ್ವ ಈ ಕಾಯ್ದೆಯಲ್ಲಿ ಅಡಕವಾಗಿರಬೇಕು. ಕರ್ನಾಟಕ ಯೂನಿವರ್ಸಿಟಿ ಆ್ಯಕ್ಟ್ 1949 ರಲ್ಲಿ ಆಯಿತು. ಅದರಲ್ಲಿ ಬಹಳ ಡೆಮೋಕ್ರ್ಯಾಟಿಕ್ ಪ್ರಿನ್ಸಿಪಲ್ಸ್ ಅಡಕವಾಗಿವೆ. ಶಿಕ್ಷಕರು, ಪ್ರಿನ್ಸಿಪಾಲರು, ಹೆಡ್ ಮಾಸ್ತರಗಳು ಇವರುಗಳಿಂದ ಆರಿಸಲ್ಪಟ್ಟವರು ಸಿನೇಟಿನಲ್ಲಿರುವರು. ಅದು ಇಂದಿನವರೆಗೆ ಚೆನ್ನಾಗಿ ನಡೆದುಕೊಂಡು ಬರುತ್ತಿದೆ. ಈಗ ತಂದಿರುವ ಯೂನಿವರ್ಸಿಟಿ ಬಿಲ್ಲು ಸಿಲೆಕ್ಟ್ ಕಮಿಟಿಗೆ ಹೋಗುವುದು. ಅದರಲ್ಲಿ ದೋಷಗಳಿರುವುದನ್ನು ತಿದ್ದಿ ಪ್ರಜಾಪ್ರಭುತ್ವ ತತ್ವಕ್ಕನುಗುಣವಾಗಿ ಮಾಡಿ, ಡಿಕ್ಟೇಟರ್ ಮನೋಭಾವನೆಗೆ ಅವಕಾಶವಿರದಂತೆ ತಿದ್ದುಪಡಿ ಮಾಡಿ ಸಮಿತಿಯವರು ಸಭೆಯ ಮುಂದೆ ತರುವರು ಎಂದು ನಂಬುತ್ತೇನೆ.

ವಿಶ್ವವಿದ್ಯಾನಿಲಯ ಅಟಾನಮಸ್ ಬಾಡಿಯಾದರೂ ಅವಶ್ಯಕತೆ ಬಂದಾಗ ಸರ್ಕಾರ ಕೈಹಾಕಲು ಅವಕಾಶವಿರಬೇಕು. ಮುನ್ಸಿಪಾಲ್ಟಿ ತಪ್ಪು ಮಾಡಿದಾಗ ಡೆಪ್ಯುಟಿ ಕಮೀಷನರ್, ಡಿವಿಜನಲ್ ಕಮಿಷನರ್ ಮುಂತಾದವರು ಕಂಟ್ರೋಲ್ ಮಾಡುವಂತೆ ಯೂನಿವರ್ಸಿಟಿ ದಾರಿ ತಪ್ಪಿದರೆ ಸರಿಪಡಿಸಲು ಸರ್ಕಾರ ಅಧಿಕಾರ ಇಟ್ಟುಕೊಂಡರೆ ಒಳ್ಳೆಯದು. ವಿಶ್ವವಿದ್ಯಾಲಯ ಕೇವಲ ಸರಕಾರಿ ಶಾಖೆ ಆಗಬಾರದು. ಸಿನೇಟಿಗೆ ವಿದ್ಯಾವಂತರು ಆರಿಸಿ ಬರುವಂತಾಗಬೇಕು. ಈ ಪ್ರಕಾರ ಕೆಲವು ಮಾರ್ಪಾಡು ಮಾಡಬೇಕೆಂದು ಸೂಚಿಸಿ ನನ್ನ ಮಾತನ್ನು ಮುಗಿಸುತ್ತೇನೆ.

# ಸಹಕಾರಿ ರಂಗದ ಮೇಲಿನ ಚರ್ಚೆ

## 3ನೇ ಸೆಪ್ಟಂಬರ್ 1973

ಶ್ರೀ ಪಿ.ಎಂ. ಬಾಂಗಿ (ಜಮಖಂಡಿ) – ಸಹಕಾರಿ ರಂಗದಲ್ಲಿ ಪ್ರಜಾಪ್ರಭುತ್ವ ಪದ್ಧತಿ ಇದೆ. ಆದರೆ ಪ್ರೆಸಿಡೆಂಟ್, ವೈಸ್‌ಪ್ರೆಸಿಡೆಂಟ್, ಮ್ಯಾನೇಜಿಂಗ್ ಡೈರೆಕ್ಟರ್ ಸ್ಥಾನಗಳು ವಂಶ ಪರಂಪರೆಯ ಸ್ಥಾನಗಳಾಗಿವೆ. ತಂದೆ ಸತ್ತ ನಂತರ ಮಗನೇ ಪ್ರೆಸಿಡೆಂಟ್ ಆಗುವಂಥ ಪದ್ಧತಿ ಇದೆ, ಅದು ಸಂಪೂರ್ಣ ಹೋಗಬೇಕು. ಆ ದೃಷ್ಟಿಯಿಂದ ಮಾನ್ಯ ಮಂತ್ರಿಗಳು ಈ ಹುದ್ದೆಗಳಿಗೆ 6 ವರ್ಷದ ಅವಧಿ ಹಾಕಿದ್ದಾರೆ. ನಿರಂತರ ಒಬ್ಬರೇ ಆ ಸ್ಥಾನಗಳಲ್ಲಿ ಇರಬಾರದು ಎನ್ನುವ ಕರಾರು ಹಾಕಿದ್ದರೆ ಸಮಾಧಾನವಾಗುತ್ತಿತ್ತು. ಆದಾಗ್ಯೂ ಪ್ರಥಮ ಹೆಜ್ಜೆಯಾಗಿ 6 ವರ್ಷ ಎಂದು ಹಾಕಿರುವುದು ಸರಿ ಇದೆ. ಮಾನ್ಯ ಸದಸ್ಯರಾದ ಶಾಮಣ್ಣನವರು ಹೇಳುವಂತೆ 3 ವರ್ಷ ಮಾಡಿದರೆ, ಇದ್ದವರೇ ಏನಾದರೂ ಮನೂವರ್ ಅಂದರೆ ಉಪಾಯ ಮಾಡಿ ಅಧಿಕಾರ ಉಳಿಸಿಕೊಳ್ಳುವ ಸಂಭವವಿದೆ. ಆ ದೃಷ್ಟಿಯಿಂದ ಆರು ವರ್ಷ ಎಂದು ಹಾಕಿರುವುದು ಸರಿ ಇದೆ.

ಮಾನ್ಯ ಮಂತ್ರಿಗಳು 53 (ಎ) ಕ್ಲಾಜಿಗೆ ಅಮೆಂಡ್‌ಮೆಂಟ್ ತಂದು ಏನು 50 ಪರ್ಸೆಂಟ್ ಟೋಟಲ್ ಶೇರ್ ಕ್ಯಾಪಿಟಲ್ ಅಥವಾ 5 ಲಕ್ಷ ರೂಪಾಯಿ ಎಂದು ಎರ್ಡು ಷರ್ತುಗಳನ್ನು ಹಾಕಿದ್ದಾರೆ, ಅವು ಸರಿಯಾಗಿವೆ. 50 ಪರ್ಸೆಂಟ್‌ಗೆ ಕಡಿಮೆ ಷೇರ್ ಕ್ಯಾಪಿಟಲ್ ಇದ್ದ ಮತ್ತು 5 ಲಕ್ಷಕ್ಕಿಂತಲೂ ಕಡಿಮೆ ಹಣ ಹಾಕಿದ ಸೊಸೈಟಿಗಳ ವಿಚಾರದಲ್ಲಿ ಪ್ರಿಕಾಷನ್ ತೆಗೆದುಕೊಂಡಿಲ್ಲ. ಆ ದೃಷ್ಟಿಯಿಂದ ಪುನರಪಿ ವಿಚಾರ ಮಾಡಿ ಕಡಿಮೆ ಬಂಡವಾಳ ಅಥವಾ ಷೇರ್ ಕ್ಯಾಪಿಟಲ್ ಇದ್ದ ಮಿಕ್ಕ ಸೊಸೈಟಿಗಳಿಗೂ ನಿರ್ಬಂಧ ಹಾಕಬೇಕು ಎಂದು ನನ್ನ ಅಭಿಪ್ರಾಯ. ಕೋ–ಆಪರೇಟೀವ್ ಸೊಸೈಟಿಗಳ ವರ್ಕಿಂಗ್ ನೋಡಿದರೆ ಕೋ ಆಪರೇಟೀವ್ ಮೂವ್‌ಮೆಂಟ್ ಫೈಲ್ ಆಗಲಿಕ್ಕೆ ಹತ್ತಿದೆ. ಎಷ್ಟೋ ಹಣ ಪೋಲಾಗಿದೆ. ಅವುಗಳಿಗೆ ಯಾವುದೇ ನಿರ್ಬಂಧವಿಲ್ಲ. ಸೆಕ್ಷನ್ 30, 69, 72 ಇವೆಲ್ಲ ಲಿಕ್ವಿಡೇಷನ್ ಪ್ರೊಸೀಡಿಂಗ್ಸ್‌ಗೆ ಸಂಬಂಧಪಟ್ಟ ಕಲಮುಗಳು. ಸೆಕ್ಷನ್ 30ರ ಪ್ರಕಾರ ಕ್ರಮ ತೆಗೆದುಕೊಂಡರೂ, ಹಣ ಪೋಲಾದ್ದಕ್ಕೆ ಏನು ಮಾಡಿದರೂ

ಉಪಯೋಗವಾಗುವುದಿಲ್ಲ. ಆ ದೃಷ್ಟಿಯಿಂದ ಪ್ರಿಕಾಷನ್ ತೆಗೆದುಕೊಂಡು 1/3 ದಷ್ಟು ಡೈರೆಕ್ಟರ್‌ಗಳನ್ನು ನೇಮಿಸುವ ಅಧಿಕಾರ ಅಮೆಂಡ್‌ಮೆಂಟಿನಿಂದ ಸರ್ಕಾರಕ್ಕೆ ಸಿಗಲಿದೆ. ಸರ್ಕಾರದ ಹಣ ಅಷ್ಟೇ ಅಲ್ಲ, ಸಾರ್ವಜನಿಕರ ಹಣವನ್ನು ರಕ್ಷಣೆ ಮಾಡುವ ಭಾರ ಸರ್ಕಾರದ ಮೇಲೆ ಇದೆ. ಆ ದೃಷ್ಟಿಯಿಂದ ಸರ್ಕಾರ ತಂದಿರುವ ಸೂಚನೆ ಯೋಗ್ಯವಾಗಿದೆ. ಸೂಚನೆಗೆ ಸಪೋರ್ಟ್ ಮಾಡುತ್ತೇನೆ ಮತ್ತು ಅದಕ್ಕೆ ಬೆಂಬಲ ಕೊಡಬೇಕು ಎಂದು ಮಾನ್ಯ ಸದಸ್ಯರಲ್ಲಿ ವಿನಂತಿ ಮಾಡುತ್ತೇನೆ.

ಮಾನ್ಯ ಶಾಮಣ್ಣನವರು ತಂದಿರತಕ್ಕ ತಿದ್ದುಪಡಿಯನ್ನು ತೀವ್ರವಾಗಿ ವಿರೋಧ ಮಾಡುತ್ತೇನೆ. ನಮ್ಮ ಮಂತ್ರಿಯವರು ತಂದಿರತಕ್ಕ ಕಾಯ್ದೆಗೆ ಮಾನ್ಯ ಶಾಮಣ್ಣನವರು ತಿದ್ದುಪಡಿ ಮಾಡಿ ಅಪೀಲು ಹೋಗಲು ಮತ್ತು ರಿವಿಜನ್‌ಗೆ ಅವಕಾಶ ಇರಬೇಕೆಂದು ಹೇಳಿರುವುದನ್ನು ನೋಡಿದರೆ ಇಂಥ ತಿದ್ದುಪಡಿ ಯಾವ ರೀತಿ ಸಹಕಾರ ಚಳುವಳಿಗೆ ಅನುಕೂಲವಾಗುತ್ತದೆ ಎಂಬುದು ನನಗೆ ಅರ್ಥವಾಗುವುದಿಲ್ಲ. ಕೋಆಪರೇಟಿವ್ ಕಾಯ್ದೆ ಪ್ರಕಾರ ಯಾವುದು ಸಿವಿಲ್ ಕೋರ್ಟಿಗೆ ಹೋಗಲು ಬರುವುದಿಲ್ಲ, ಅಲ್ಲಿ ರಿಟ್ ಪಿಟಿಷನ್ ಹಾಕಲು ಪ್ರತಿಯೊಬ್ಬರಿಗೂ ಅವಕಾಶವಿದೆ. ಅಸಿಸ್ಟಂಟ್ ರಿಜಿಸ್ಟ್ರಾರ್, ಡೆಪ್ಯೂಟಿ ರಜಿಸ್ಟ್ರಾರ್ ಮತ್ತು ಜಾಯಿಂಟ್ ರಿಜಿಸ್ಟ್ರಾರ್ ಇವರ ಪ್ರತಿಯೊಂದು ಹುಕುಮಿನ ಮೇಲೆ ರಿವಿಜನ್ ಮತ್ತು ಅಪೀಲು ಹಾಕಲು ಈಗ ತಂದಿರುವ ಕಾಯ್ದೆಯಲ್ಲಿ ಅವಕಾಶವಿಲ್ಲವೆಂದು ಶ್ರೀಮಾನ್ ಶಾಮಣ್ಣನವರು ಹೇಳುತ್ತಾರೆ. ಆದರೆ ಪ್ರತಿಯೊಂದಕ್ಕೂ ಪ್ರತಿಯೊಬ್ಬರೂ ಅಪೀಲ್ ಮಾಡುತ್ತಾ ಮತ್ತು ರಿವಿಜನ್ ಕೇಳುತ್ತಾ ಹೋದರೆ ಸೊಸೈಟಿಗಳ ವ್ಯವಹಾರವನ್ನು ನಡೆಸಲು ಸಾಧ್ಯವಾಗುವುದಿಲ್ಲ ಎನ್ನುವ ದೃಷ್ಟಿಯಿಂದ ಸರ್ಕಾರದವರು ಈ ಕಾಯ್ದೆಯನ್ನು ತಂದಿರುತ್ತಾರೆ. ಈ ರೀತಿ ಕಾಯ್ದೆ ಇಲ್ಲದೆ ಹೋದರೆ ಯಾವುದೇ ಆರ್ಡರ್ ಮಾಡಿದರೂ ಅದಕ್ಕೆ ಅಪೀಲು ಮಾಡುತ್ತಾ ರಿವಿಜನ್ ಮಾಡಿ ತಡೆಯಾಜ್ಞೆ ಕೇಳುತ್ತಾ ಹೋದರೆ ಹದಗೆಟ್ಟ ಸೊಸೈಟಿಗಳನ್ನು ಲಿಕ್ವಿಡೇಷನ್ ಮತ್ತು ಇನ್ನಿತರ ಕ್ರಮಗಳಿಗೆ ಒಳಪಡಿಸಲು ಬರಲಾರದು. ಸೆಕ್ಷನ್ 30 ರ ಪ್ರಕಾರ ಕ್ರಮ ತೆಗೆದುಕೊಳ್ಳುವುದಕ್ಕೆ ಅವಕಾಶ ಉಳಿಯುವುದಿಲ್ಲ. ಈ ಕಾಯ್ದೆ ತಿದ್ದುಪಡಿಯಲ್ಲಿ ಯಾವ ರೀತಿಯಿಂದಲೂ ರಾಜಕೀಯ ಪ್ರಶ್ನೆ ಉದ್ಭವವಾಗುವುದಿಲ್ಲ. ಅಕ್ರಮ

ವ್ಯವಹಾರ ನಡೆಯದಿರಲು ಅಸಿಸ್ಟಂಟ್ ರಿಜಿಸ್ಟ್ರಾರ್, ಡೆಪ್ಯೂಟಿ ರಿಜಿಸ್ಟ್ರಾರ್, ಜಾಯಿಂಟ್ ರಿಜಿಸ್ಟ್ರಾರ್ ಅವರು ಕೋ ಆಪರೇಟಿವ್ ಆ್ಯಕ್ಟ್ ಪ್ರಕಾರ ಹುಕುಂ ಮಾಡುತ್ತಾ ಇರುತ್ತಾರೆ. ಇವರು ಸರಿಯಾದ ಆರ್ಡರ್ ಮಾಡದಿದ್ದರೆ ರಿಟ್ ಹಾಕಿ ಸ್ಟೇ ತರುವುದಕ್ಕೆ ಯಾವ ದೃಷ್ಟಿಯಿಂದಲೂ ಯಾರಿಗೂ ತೊಂದರೆ ಇರುವುದಿಲ್ಲ ಇದು ಎಲ್ಲಾ ರೀತಿಯಿಂದಲೂ ಸರಿ ಇದೆ. ಆದ್ದರಿಂದ ಇದನ್ನು ಎಲ್ಲರೂ ಸಮರ್ಥನೆ ಮಾಡಬೇಕು.

## ರೇಣುಕಾ ಎಲ್ಲಮ್ಮ ದೇವಸ್ಥಾನದ ಮೇಲಿನ ಚರ್ಚೆ

### 7ನೇ ಸೆಪ್ಟಂಬರ್ 1973

ಶ್ರೀ ಪಿ.ಎಂ. ಬಾಂಗಿ (ಜಮಖಂಡಿ)– ಮಾನ್ಯ ಅಧ್ಯಕ್ಷರೇ, ರೇಣುಕಾ ಎಲ್ಲಮ್ಮ ದೇವಸ್ಥಾನದ ಬಿಲ್ಲನ್ನು ಮಾನ್ಯ ಕಂದಾಯ ಮಂತ್ರಿಗಳು ಇಲ್ಲಿ ಏನು ಮಂಡಿಸಿದ್ದಾರೆ ಅದನ್ನು ನಾನು ಹೃತ್ಪೂರ್ವಕವಾಗಿ ಸ್ವಾಗತಿಸುತ್ತೇನೆ. ಈ ಸಮಯದಲ್ಲಿ ಈ ಬಿಲ್ಲಿನಲ್ಲಿರುವ ಕೆಲವು ಲೋಪ ದೋಷಗಳನ್ನು ಮಾನ್ಯ ಕಂದಾಯ ಮಂತ್ರಿಗಳ ಗಮನಕ್ಕೆ ತರಬಯಸುತ್ತೇನೆ.

ಶ್ರೀಮತಿ ರೇಣುಕಾ ಎಲ್ಲಮ್ಮ ದೇವಸ್ಥಾನ ಬಹಳ ಹಳೆಯ ದೇವಸ್ಥಾನ. ಈ ದೇವಸ್ಥಾನದ ಮಹತ್ವವೇನು ಎನ್ನುವುದನ್ನು ಜನರಿಗೆ ತೋರಿಸಿ ಸಾರ್ವಜನಿಕರಿಗೆ ಇದರ ಬಗ್ಗೆ ಭಕ್ತಿಯನ್ನುಂಟು ಮಾಡಲು ಕೆಲವರು ನಾಟಕಗಳನ್ನು ಆಡುತ್ತಿದ್ದಾರೆ. ಈ ದೇವಸ್ಥಾನದ ಬಗ್ಗೆ ಕೆಲವು ಸಣ್ಣಪುಟ್ಟ ಪುಸ್ತಕಗಳೂ ಬಂದಿವೆ. ಆದರೆ ಈ ಪುರಾತನ ದೇವಸ್ಥಾನದ ಬಗ್ಗೆ ಅಧಿಕೃತವಾದ ಯಾವ ಗ್ರಂಥವೂ ಇದುವರೆಗೆ ಹೊರಬಂದಿಲ್ಲ. ಇದಕ್ಕಾಗಿ ಮಾನ್ಯ ಕಂದಾಯ ಮಂತ್ರಿಗಳು ಈ ದೇವಸ್ಥಾನದ ಸಂಬಂಧ ಒಂದು ಗ್ರಂಥವನ್ನು ತರಲು ಕಮಿಟಿ ನೇಮಿಸಿ ಅಧಿಕೃತ ಗ್ರಂಥ ಮಾಡಿಸಬೇಕೆಂದು ಈ ಸಮಯದಲ್ಲಿ ಹೇಳುತ್ತೇನೆ. ಇನ್ನು ಈ ದೇವಸ್ಥಾನದ ಬಗ್ಗೆ ಹಾಗೂ ಇದರ ಇತಿಹಾಸದ ಬಗ್ಗೆ ಒಂದು ಕಥೆ ಹೇಳುತ್ತಾರೆ.

ಹಿಂದೆ ಕಾಶ್ಮೀರ ದೇಶದಲ್ಲಿ ರೇಣು ಎನ್ನುವ ಅರಸನಿದ್ದ. ಅವನಿಗೆ ಮಕ್ಕಳಿರಲಿಲ್ಲ. ಅದಕ್ಕಾಗಿ ಅವನು ಈಶ್ವರನನ್ನು ಕುರಿತು ತಪಸ್ಸು ಮಾಡಿ

ಮಕ್ಕಳಾಗಬೇಕೆಂದು ಬೇಡಿದನಂತೆ. ಈಶ್ವರನು ಅವನ ಭಕ್ತಿಗೆ ಮೆಚ್ಚಿ ಒಬ್ಬ ಹೆಣ್ಣು ಮಗಳನ್ನು ಅನುಗ್ರಹಿಸಿದನು. ಆ ಹೆಣ್ಣು ಮಗಳಿಗೆ ರೇಣುಕಾದೇವಿ ಎಂದು ಹೆಸರಿಟ್ಟರು. ಆ ರೇಣುಕಾ ದೇವಿಯು ಪಾರ್ವತಿಯ ಭಕ್ತಳಾದುದರಿಂದ ಸಹ್ಯಾದ್ರಿ ಪರ್ವತದಲ್ಲಿ ತಪಸ್ಸು ಮಾಡುತಿದ್ದ ಜಮದಗ್ನಿ ಋಷಿಯನ್ನು ಮದುವೆಯಾದಳು. ಈ ದೇವಸ್ಥಾನದ ಬಳಿ ಈಗಲೂ ರೇಣುಕಾ ದೇವಿಯ ಬಾವಿ ಇದೆ. ಇದು ಸಹ್ಯಾದ್ರಿ ಗುಡ್ಡದಿಂದ ಹರಿಯುವ ಮಲಪ್ರಭಾ ನದಿಗೆ ಸಮೀಪದಲ್ಲಿದೆ. ಮಲಪ್ರಭಾ ಡ್ಯಾಂ ಯೋಜನೆ ಮಾಡುವಾಗಲೂ ಕೂಡ ಈ ಬಾವಿಯನ್ನು ಇದ್ದಂತೆ ಕಾದಿಡಲು ತಕ್ಕ ಬಂದೋಬಸ್ತ ಮಾಡಿದ್ದಾರೆ. ಅಂತಹ ಪತಿಪ್ರತೆಯಾದ ರೇಣುಕಾ ಯಲ್ಲಮ್ಮನವರ ದೇವಸ್ಥಾನವೂ ಇದರ ಸಮೀಪದಲ್ಲೆ ಇದೆ. ಈ ರೇಣುಕಾ ಅಮ್ಮನವರ ಚರಿತ್ರೆ ಹೀಗಿದೆ. ರೇಣುಕಾ ದೇವಿಯವರು ಜಮದಗ್ನಿ ಋಷಿಯನ್ನು ಮದುವೆ ಮಾಡಿಕೊಂಡ ಮೇಲೆ ಇವರಿಗೆ ಮೂರು ಗಂಡು ಮಕ್ಕಳಾದವು. ಇವರ 3 ನೇ ಮಗನಿಗೆ ಪರಶುರಾಮ ಎಂದು ಹೆಸರು ಇಟ್ಟರು. ಈ ದೇವತೆ ಎಲ್ಲರಿಗೂ ಪೂಜ್ಯ ಅಮ್ಮ ಆಗಿದ್ದುದರಿಂದ ಇವರು ಎಲ್ಲಮ್ಮ ಎಂದು ಇಲ್ಲಿನ ಜನ ಕರೆಯುತ್ತಾರೆ. ಎಲ್ಲಮ್ಮ ದೇವತೆಗೆ ಇಷ್ಟು ಪ್ರಭಾವ ಬರಲು ಕಾರಣ ಏನೆಂದರೆ ಹಿಂದೆ ಜಮದಗ್ನಿ ಋಷಿಯು ಯಲ್ಲಮ್ಮನ ಪಾತಿವ್ರತದ ಬಗ್ಗೆ ಕೋಪಬಂದು ಅವರು ತಮ್ಮ ಮಕ್ಕಳನ್ನು ಕರೆದು ಈ ತಾಯಿಯ ತಲೆಯನ್ನು ಕಡಿದು ಹಾಕಬೇಕೆಂದು ಹೇಳಿದಾಗ ಮೊದಲಿನ ಇಬ್ಬರು ಮಕ್ಕಳು ಕಡಿಯಲಿಲ್ಲ. ಮೂರನೆಯ ಮಗನಾದ ಪರಶುರಾಮನು ತಂದೆಯ ಮಾತಿಗೆ ಒಪ್ಪಿ ತಾಯಿಯ ಶಿರಸ್ಸನ್ನು ಕಡಿದನು. ಇದಕ್ಕಾಗಿ ಜಮದಗ್ನಿಯು ಸಂತೋಷಗೊಂಡು ಅವನನ್ನು ಏನು ವರ ಬೇಕು ಎಂದು ಕೇಳಿದಾಗ ಅದಕ್ಕೆ ಪರಶುರಾಮನು ತನ್ನ ತಾಯಿಯನ್ನು ಬದುಕಿಸಿಕೊಡಬೇಕು ಮತ್ತು ಅವರು ಬದುಕಿದ ಮೇಲೆ ಅವರಿಗೆ ಹಿಂದಿನ ಯಾವ ವಿಚಾರಗಳೂ ಅವರ ಜ್ಞಾಪಕಕ್ಕೆ ಬರದಂತೆ ವರ ಬೇಕೆಂದು ಕೇಳಿದನು. ಅದರಂತೆ ಜಮದಗ್ನಿಯು ವರ ಕೊಟ್ಟು ರೇಣುಕಾ ದೇವಿಯನ್ನು ಬದುಕಿಸಿದರು. ಆದರೆ ಅವಳು ಕುಷ್ಠರೋಗಿ ಆಗಲೆಂದು ಶಪಿಸಿದರು. ಇದರಿಂದ ಈ ರೇಣುಕಾ ಅಮ್ಮನವರೇ ರೇಣುಕಾದೇವಿಯಾಗಿದ್ದರು ಎಂದು ಇಲ್ಲಿನ ಜನ ಹೇಳುತ್ತಾರೆ. ಇದರಿಂದ ಇಲ್ಲಿನ ಜನರು ಬಹುವಾಗಿ ಹೇಳುತ್ತಾರೆ, ಈ ರೇಣುಕಾ ದೇವಿಗೆ ಕುಷ್ಠ ರೋಗ ಬಂದಿತ್ತು, ಆಗ ಅವರು ಜೋಗಯ್ಯಾಯೆಂಬ ಶಿವಶರಣರನ್ನು

ಈ ರೋಗ ಹೋಗಬೇಕೆಂದು ಕೇಳಿದಾಗ ಅವರು ಈ ದೇವಸ್ಥಾನದ ಬಳಿ ಇರುವ ಸಹ್ಯಾದ್ರಿ ಪರ್ವತದ ಸಮೀಪದಲ್ಲಿರುವ ಬಾವಿಯಲ್ಲಿ ಸ್ನಾನ ಮಾಡಿದರೆ ಈ ರೋಗ ಪರಿಹಾರವಾಗುತ್ತದೆ ಎಂದು ಹೇಳಿದರು. ಅದರಂತೆ ರೇಣುಕಾ ದೇವಿಯವರು ಈ ಶರಣರ ಬಾವಿಯಲ್ಲಿ ಸ್ನಾನ ಮಾಡಿದ ಕೂಡಲೇ ಕುಷ್ಠ ರೋಗ ಪರಿಹಾರವಾಯಿತು ಮತ್ತು ಒಳ್ಳೆಯ ಶರೀರ ಪ್ರಾಪ್ತವಾಯಿತು ಎಂದು ಹೇಳುತ್ತಾರೆ. ಜೋಗುಳ ಜೋಗಯ್ಯನ ಬಾವಿ ಎಂದು ಈಗಲೂ ಹೆಸರಾಗಿದೆ. ಮಲಪ್ರಭಾ ಪ್ರಾಜೆಕ್ಟ ಅಧಿಕಾರಿಗಳು ಇದರ ಸುತ್ತಮುತ್ತ ಒಂದು ಬಂಡನ್ನು ನಿರ್ಮಾಣ ಮಾಡಿದ್ದಾರೆ. ಇದರಿಂದಾಗಿ ಇದು ಸುರಕ್ಷಿತವಾಗಿರಲು ಅನುಕೂಲವಾಗಿದೆ. ಪ್ರತಿಯೊಬ್ಬರೂ ಈ ಶರಣರ ಜೋಗುಳ ಬಾವಿಗೆ ಹೋಗಿ ಸ್ನಾನ ಮಾಡುವುದಕ್ಕೆ ಮುನ್ನ ಈ ಬಾವಿಯಲ್ಲಿ ಕಾಣಿಕೆಯನ್ನು ಹಾಕಿ ಅನಂತರ ಸ್ನಾನ ಮಾಡಿ ರೇಣುಕಾ ಎಲ್ಲಮ್ಮನವರ ದೇವಸ್ಥಾನಕ್ಕೆ ಬಂದು ಹೋಗುತ್ತಿದ್ದಾರೆ. ಈ ಭಾವಿಯು ಶಿರಸಂಗಿ ಜಮೀನಿನಲ್ಲಿ ಇದ್ದ ಮೂಲಕ ಈ ಕಾಣಿಕೆ ಶಿರಸಂಗಿ ಫಂಡಗೆ ಜಮಾ ಆಗುತ್ತದೆ. ಇದಕ್ಕೆ ಜೋಗಯ್ಯ ಶಿವಶರಣರ ಬಾವಿ, ಜೋಗುಳ ಬಾವಿ ಹಾಗೂ ತೀರ್ಥಕುಂಡ ಅನ್ನುತ್ತಾರೆ. ಷೆಡ್ಯೂಲ್ 27ರಲ್ಲಿ ಇದನ್ನು ಸೇರಿಸಬೇಕಾಗಿತ್ತು ಎಂದು ಇಲ್ಲಿ ಹೇಳಬಯಸುತ್ತೇನೆ. ಈ ಮಸೂದೆಗೆ ರೇಣುಕಾ ಎಲ್ಲಮ್ಮ ದೇವಸ್ಥಾನ ಮಸೂದೆ ಎಂದು ಕರೆಯಲಾಗಿದೆ. ರೇಣುಕಾ ಮತ್ತು ಎಲ್ಲಮ್ಮ ಎನ್ನುವುದು ಒಂದೇ ದೇವತೆಯ ಹೆಸರು. ಆದುದರಿಂದ ರೇಣುಕಾದೇವಿ ಉರ್ಫ ಎಲ್ಲಮ್ಮ ಎಂಬುದಾಗಿ ಹಾಕಬೇಕೆಂದು ನಾನು ಸೂಚಿಸಬಯಸುತ್ತೇನೆ.

ರೇಣುಕಾದೇವಿ ಹೆಣ್ಣು ದೇವತೆ ಇದ್ದ ಮೂಲಕ ಇದಕ್ಕೆ ಶ್ರೀ ಶಬ್ದ ಹಾಕುವುದು ಸರಿಯಲ್ಲ ಎಂದು ಸೂಚಿಸಬಯಸುತ್ತೇನೆ. ಎರಡನೇ ಪುಟದಲ್ಲಿ ಮೂರನೇ ಪುಟದಲ್ಲಿ ಅದೇ ಪ್ರಕಾರ ಉಳಿದ ಪುಟಗಳಲ್ಲಿ ಶ್ರೀ ರೇಣುಕಾ ಎಲ್ಲಮ್ಮ ದೇವಸ್ಥಾನ ಎಂಬುದಾಗಿ ಬರೆಯಲ್ಪಟ್ಟಿದೆ. ಶ್ರೀ ಎನ್ನುವುದಕ್ಕೆ ಬದಲಾಗಿ ಶ್ರೀಮತಿ ಎನ್ನುವ ಶಬ್ದವನ್ನು ಹಾಕಬೇಕು. ಇಲ್ಲದೆ ಹೋದರೆ ರೇಣುಕಾ ಉರ್ಫ ಎಲ್ಲಮ್ಮ ದೇವಸ್ಥಾನ ಎಂಬುದಾಗಿ ನಾಮಕರಣ ಮಾಡಬೇಕೆಂದು ಸೂಚಿಸಬಯಸುತ್ತೇನೆ.

ರೇಣುಕಾ ದೇವಸ್ಥಾನದ ಆಸ್ತಿಯ ವಿವರಗಳನ್ನು 27ನೇ ಪುಟದಲ್ಲಿ ಕೊಡಲಾಗಿದೆ. ಇದರ ಜೊತೆಗೆ ಜಮದಗ್ನೇಶ್ವರ ದೇವಸ್ಥಾನ, ಪರಶುರಾಮ ದೇವಸ್ಥಾನಗಳೂ ಇವೆ. ಈ ಮೂರೂ ಮುಖ್ಯವಾದ ದೇವಸ್ಥಾನಗಳು. ಆದರೆ ಉಳಿದ ದೇವಸ್ಥಾನಗಳಾದ ಮಲ್ಲಿಕಾರ್ಜುನ, ಸಿದ್ದೇಶ್ವರ, ಗಣಪತಿ, ಬ್ರಹ್ಮ ದೇವ, ಹುರಕಲ್ಲವ್ವ ಈ ಪ್ರಕಾರವಾಗಿ ಬೇರೆ ಗುಡಿಗಳನ್ನೂ ಷೆಡ್ಯೂಲ್‌ನಲ್ಲಿ ದೇವಸ್ಥಾನದ ಆಸ್ತಿ ಎಂದು ಬರೆದಿರುತ್ತಾರೆ. ಉಳಿದ ದೇವಸ್ಥಾನಗಳಿಗೆ ಯಾವುದೂ ಉತ್ಪನ್ನವಿಲ್ಲ. ಇತರ ಗುಡಿಗಳನ್ನೂ ಆಸ್ತಿ ಪಟ್ಟಿಯಲ್ಲಿ ಸೇರಿಸಿರುವುದರಿಂದ ಅವನ್ನು ದುರಸ್ತಿ ಮಾಡುವ ಹೊಣೆ ಬೋರ್ಡಿನ ಮೇಲೆ ಬೀಳುತ್ತದೆ. ಕಾರಣ ಉಳಿದ ದೇವಸ್ಥಾನಗಳ ಆಸ್ತಿಯನ್ನು ಎಲ್ಲಮ್ಮ ದೇವಸ್ಥಾನದ ಆಸ್ತಿ ಎಂದು ಪರಿಗಣಿಸಬೇಕೋ ಇಲ್ಲವೋ ಎನ್ನುವುದರ ಬಗ್ಗೆ ವಿಚಾರ ಮಾಡಬೇಕೆಂದು ನಾನು ಸೂಚಿಸಬಯಸುತ್ತೇನೆ.

ಎಲ್ಲಮ್ಮ ದೇವಸ್ಥಾನ ಒಂದು ಗುಡ್ಡವಿದ್ದು ಅದರ ವಿಸ್ತೀರ್ಣ ಕೇವಲ 44 ಗಜ ಎಂಬುದಾಗಿ ಬರೆಯಲ್ಪಟ್ಟಿದೆ. ಆದರೆ ಗುಡ್ಡ ದೊಡ್ಡದಿದ್ದು, ಗುಡ್ಡದ ಮೇಲೆ ಸಾಕಷ್ಟು ಮನೆಗಳೂ ಅಂಗಡಿಗಲೂ ಇವೆ. ಅಲ್ಲಿ ಜನಗಳು ವಾಸ ಮಾಡುತ್ತ ಇದ್ದಾರೆ. ಇವುಗಳು ದೇವಸ್ಥಾನದ ಆಸ್ತಿಯೋ ಇಲ್ಲವೋ ಎನ್ನುವ ಬಗ್ಗೆ ಷೆಡ್ಯೂಲಿನಲ್ಲಿ ಸ್ಪಷ್ಟೀಕರಣವಿಲ್ಲ. ಅದೇ ಪ್ರಕಾರ ಗುಡ್ಡದ ಕೆಳಗೆ ಸೀತಾಫಲ ಮತ್ತು ಮಾವಿನ ಗಿಡಗಳು ಸಾಕಷ್ಟು ಇದ್ದು ಅದರ ಉತ್ಪನ್ನವನ್ನು ಮುನ್ಸಿಪಾಲ್ಟಿ ಉತ್ಪನ್ನವೆಂದು ಪರಿಗಣಿಸಿ ಪ್ರತಿವರ್ಷ ಹರಾಜು ಮಾಡಿ ಉತ್ಪನ್ನವನ್ನು ತೆಗೆದುಕೊಳ್ಳುತ್ತಾರೆ. ಆ ಬಗ್ಗೆ ಷೆಡ್ಯೂಲ್‌ನಲ್ಲಿ ಯಾವ ಪ್ರಕಾರದ ವಿವರಣೆಯೂ ಇಲ್ಲ. ಈ ಬಗ್ಗೆ ಕೂಡ ಮಾನ್ಯ ಕಂದಾಯ ಮಂತ್ರಿಗಳು ವಿಚಾರ ಮಾಡಬೇಕು.

ಈ ದೇವಸ್ಥಾನದ ಚಕಬಂದಿಯ ವಿವರಣೆ ಇಲ್ಲ. ದೇವಸ್ಥಾನಗಳ ಆಸ್ತಿ ಪಟ್ಟಿಯಲ್ಲಿ 129 ಎಕರೆ ಜಮೀನುಗಳಿದ್ದು ಅವು ಉಗರಗೋಳ ಮತ್ತು ಇತರ ಗ್ರಾಮಗಳಲ್ಲಿವೆ ಎಂದು ಬರೆಯಲ್ಪಟ್ಟಿದೆ. ಆದರೆ ಆ ಜಮೀನುಗಳು ಉಗರಗೋಳದ ಎಲ್ಲಮ್ಮ ದೇವತೆಯ ಪೂಜಾರಿಗಳ ಕಬ್ಜಾದಲ್ಲಿದ್ದ ಮೂಲಕ ಆ ಜಮೀನುಗಳ ಉತ್ಪನ್ನ ದೇವಸ್ಥಾನಕ್ಕೆ ಬರಲಾರದು. ಆ ಉತ್ಪನ್ನವನ್ನು

ದೇವಸ್ಥಾನದ ಉತ್ಪನ್ನ ಎಂದು ಪರಿಗಣಿಸುವುದರಿಂದ ತೊಂದರೆಯಾಗುತ್ತದೆ. ಈ ಪ್ರಕಾರವಾಗಿ ಈ ದೇವಸ್ಥಾನದ ಆಸ್ತಿ ಯಾವುದು ಎಂಬ ಬಗ್ಗೆ ಮಾನ್ಯ ಕಂದಾಯ ಮಂತ್ರಿಗಳು ವಿಚಾರ ಮಾಡಬೇಕು.

ನಾಲ್ಕನೆ ಕಲಮಿನಲ್ಲಿ ಬೋರ್ಡ್ ಆಫ್ ಟ್ರಸ್ಟೀಸ್ ವಿಚಾರವನ್ನು ಬರೆದಿರುತ್ತಾರೆ. ಆದರೆ ಈ ಮಸೂದೆಯಲ್ಲಿ ಎಕ್ಸಿಕ್ಯೂಟಿವ್ ಆಫೀಸರನ್ನು ನೇಮಿಸಿ ಯಾವತ್ತೂ ಅಧಿಕಾರ ಮತ್ತು ಆಸ್ತಿಪಾಸ್ತಿಗಳನ್ನು ಅವರಿಗೆ ಕೊಟ್ಟ ಮೇಲೆ, ಮ್ಯಾನೇಜ್‌ಮೆಂಟ್ ಮಾಡುವಂಥ ಜನರಿಗೆ ಬೋರ್ಡ್ ಆಫ್ ಟ್ರಸ್ಟೀಸ್ ಎಂದು ಹೇಳುವುದಕ್ಕೆ ಬರುವುದಿಲ್ಲ. ಆದ್ದರಿಂದ ಇದಕ್ಕೆ ಬೋರ್ಡ್ ಆಫ್ ಮ್ಯಾನೇಜ್‌ಮೆಂಟ್ ಅಥವಾ ಬೋರ್ಡ್ ಆಫ್ ಎಲ್ಲಮ್ಮ ಟೆಂಪಲ್ ಎಂದು ಕರೆದರೆ ಸರಿಯಾಗುತ್ತದೆಂದು ನನ್ನ ಭಾವನೆ.

24 ನೇ ಕ್ಲಾಜಿನಲ್ಲಿ ಮಾಡಿಫಿಕೇಷನ್ ಆಫ್ ಸರ್ಟನ್ ಎನಾಕ್ಟ್‌ಮೆಂಟ್ಸ್ ಎನ್ನುವ ವಿಚಾರ ಹೇಳಿದ್ದಾರೆ. ವಿಲೇಜ್ ಪಂಚಾಯತ್ ಆ್ಯಂಡ್ ಲೋಕಲ್ ಬೋರ್ಡ್ಸ್ ಆ್ಯಕ್ಟ್, ಮೈಸೂರು ಮುನ್ಸಿಪಾಲ್ಟೀಸ್ ಆ್ಯಕ್ಟ್, ಮುಂಬೈ ಪಬ್ಲಿಕ್ ಟ್ರಸ್ಟ್ ಆ್ಯಕ್ಟ್ ಇವುಗಳನ್ನು ದುರಸ್ತಿ ಮಾಡುವುದಾಗಲೀ, ರದ್ದು ಮಾಡುವುದಾಗಲೀ, ಮಾಡಬೇಕಾದರೆ ಬೇರೆ ಕಾಯ್ದೆ ಮಾಡಿ ಅದರ ಮೂಲಕ ಮಾಡಬೇಕೇ ಹೊರತು ನೋಟಿಫಿಕೇಷನ್ ತೆಗೆದು ಮಾಡಲಿಕ್ಕೆ ಬರಲಾರದು. ಇದು ಡೆಲಿಗೇಟೆಡ್ ಲೆಜಿಸ್ಲೇಷನ್. ಸರ್ಕಾರಕ್ಕೆ ಅಧಿಕಾರ ಕೊಡುವುದು ಕಾಯ್ದೆ ದೃಷ್ಟಿಯಿಂದ ಯೋಗ್ಯವಾಗಲಾರದೆಂದು ನನ್ನ ಅಭಿಪ್ರಾಯ. 38 ನೇ ಕ್ಲಾಜಿನಲ್ಲಿ ಆಸ್ತಿಯ ವಿಲೇವಾರಿ ಮಾಡುವುದರ ಮೇಲೆ ನಿರ್ಬಂಧಗಳನ್ನು ಹಾಕಿದ್ದು ಸರಿಯಾಗಿದೆ.

ಕ್ಲಾಜ್ 40ರಲ್ಲಿ ಮೃತ್ಯು ಪತ್ರದ ನಕಲನ್ನು ಎಕ್ಸಿಕ್ಯೂಟಿವ್ ಆಫೀಸರಿಗೆ ಕಳುಹಿಸಿಕೊಡುವುದು ಮೃತ್ಯು ಪತ್ರವನ್ನು ಚಲಾಯಿಸುವವರ ಕರ್ತವ್ಯವೆಂಬುದಾಗಿ ಹೇಳಿದ್ದಾರೆ. ಸಾಮಾನ್ಯವಾಗಿ ಇಂಥ ಪತ್ರಗಳು ನೋಂದ ಆಗುತ್ತವೆ. ಇವುಗಳ ನೋಂದಣಿ ಮಾಡುವ ಅಧಿಕಾರಿಗಳು ಎಕ್ಸಿಕ್ಯೂಟಿವ್ ಆಫೀಸರಿಗೆ ಅದರ ನಕಲನ್ನು ಕಳುಹಿಸಿಕೊಡಬೇಕೆಂದು ಈ ಕ್ಲಾಜಿನಲ್ಲಿ ಪದ ಪ್ರಯೋಗ ಮಾಡಿ ಇದನ್ನು ದುರಸ್ತಿ ಮಾಡಬೇಕೆಂದು ಈ ಸಮಯದಲ್ಲಿ ನಾನು ಸೂಚಿಸಬಯಸುತ್ತೇನೆ.

ಮಾನ್ಯ ಅಧ್ಯಕ್ಷರೆ ಇದು ಬಹಳ ಮಹತ್ವದ ಬಿಲ್ಲು. ಸವದತ್ತಿ ಮುನ್ಸಿಪಾಲ್ಟಿಯಲ್ಲಿ ಅಲ್ಲಿಗೆ ಬರುವಂಥ ಯಾತ್ರಾರ್ಥಿಗಳಿಂದ ಹಣ ವಸೂಲಿ ಮಾಡಿ ರಸ್ತೆ ಮತ್ತು ವಾಟರ್ ಸಪ್ಲೈ ಬೋರ್ಡಿಗೆ ಆ ಹಣವನ್ನು ಖರ್ಚು ಮಾಡುತ್ತಾರೆ. ಇದು ಸಮಾಧಾನಕರವಾಗಿಲ್ಲ. ಅದೇ ಪ್ರಕಾರ ಎಲ್ಲಮ್ಮ ದೇವಸ್ಥಾನಕ್ಕೆ ಬರುವ ಕಾಣಿಕೆಯನ್ನು ತೆಗೆದುಕೊಂಡು ಕೆಲಸ ಮಾಡುತ್ತಿದ್ದಾರೆ. ಎಷ್ಟೋ ಪೂಜಾರಿಗಳು ಕಾಣಿಕೆಯನ್ನು ತೆಗೆದುಕೊಂಡು ಸರಿಯಾಗಿ ಉಪಯೋಗ ಮಾಡುತ್ತಿಲ್ಲ. ಆ ದೃಷ್ಟಿಯಿಂದ ಈ ಮಸೂದೆಯನ್ನು ಮಾನ್ಯ ಮಂತ್ರಿಗಳು ಏನು ತಂದಿದ್ದಾರೆ ಅದು ಬಹಳ ಸರಿಯಾಗಿದೆ. All comprehensive ಮಸೂದೆ ತಂದರೆ ಒಳ್ಳೆಯದು ಆಗುತ್ತದೆ. 10 ಕೋಟಿ ರೂಪಾಯಿಗಳ ಬೆಲೆ ಬಾಳುವ ಬಂಗಾರ, ಆಭರಣಗಳು ಮತ್ತು 4 ಸಾವಿರ ಎಕರೆ ಜಮೀನುಗಳ ಒಳ್ಳೆಯ ಆಸ್ತಿ ಇರುತ್ತದೆಂದು ಮಾನ್ಯ ಮಂತ್ರಿಗಳು ಮೊನ್ನೆ ದಿವಸ ಪ್ರಶ್ನೆಗೆ ಉತ್ತರ ಕೊಡುತ್ತಾ ಹೇಳಿದ್ದಾರೆ. ಆ ದೃಷ್ಟಿಯಿಂದ ಸಧ್ಯಕ್ಕೆ ಎಲ್ಲಮ್ಮ ದೇವಸ್ಥಾನದ ಬಿಲ್ ಯೋಗ್ಯ. ಯಾವತ್ತು ದೇವಸ್ಥಾನಕ್ಕೆ ಅನ್ವಯಿಸುವಂಥ ಒಂದು ಮಸೂದೆಯನ್ನು ತರಬೇಕೆಂದು ಇವತ್ತಿನ ದಿವಸ ವಿನಂತಿ ಮಾಡಿಕೊಂಡು ನನ್ನ ಭಾಷಣವನ್ನು ಮುಗಿಸುತ್ತಿದ್ದೇನೆ.

## ಟಿಪ್ಪಣಿ ರೂಪದ ಬಿಡಿ ಪ್ರಶ್ನೆಗಳು

### 11ನೇ ಸೆಪ್ಟಂಬರ್ 1973

**Sri P. M. Bangi (Jamkhandi)-** Will the Minister for Co-operation be pleased to state.

a) whether the Urban Co-operative Banks in the State are not sanctioning loans to weaker sections of the community who have neither immovable nor movable property of their own

b) whether the Government intends to issue orders to the Urban Co-operative Banks in the State to advance loans to the weaker sections of the community and also to the small artisans and small scale industrialists by taking personal bond and sureties and also by providing subsidy by way of outright grants to induce these Banks to advance loans to such class of persons?

Sri Shankar Alva (Minister for Co-operation)

a) No.

b) No.

**ಶ್ರೀ ಪಿ. ಎಂ. ಬಾಂಗಿ–** ನಮ್ಮ ರಾಜ್ಯದಲ್ಲಿ ಸುಮಾರು 200 ಇಂಥ ಬ್ಯಾಂಕುಗಳಿದ್ದು, ಯಾವ ಯಾವ ಬ್ಯಾಂಕ್‌ಗಳು ಕಳೆದ 5 ವರ್ಷಗಳಲ್ಲಿ ಆಸ್ತಿ ಇಲ್ಲದವರಿಗೆ ಸಾಲ ಕೊಟ್ಟಿವೆ ?

**ಶ್ರೀ ಎ. ಶಂಕರ ಆಳ್ವ–** 143 ಅರ್ಬನ್ ಕೋಆಪರೇಟಿವ್ ಬ್ಯಾಂಕುಗಳು ಇದ್ದ ಹಾಗೆ ಕಾಣುತ್ತದೆ. ಅವರ ಬೈಲಾ ಪ್ರಕಾರ ಹೆಚ್ಚಿಗೆ ಬ್ಯಾಂಕ್‌ಗಳಲ್ಲಿ ಜಮೀನು ತೆಗೆದುಕೊಳ್ಳದೇ ಸಾಲ ಕೊಡುವುದಿಲ್ಲ. ಪ್ರತ್ಯೇಕವಾಗಿ ಅಂಥ ಬ್ಯಾಂಕ್‌ಗಳಿದ್ದರೆ, ನಮ್ಮ ತಿಳುವಳಿಕೆಗೆ ಬಂದಿಲ್ಲ. ಕೆಲವು ಇದ್ದರೆ ಕೊಡಲಿಕ್ಕೆ ಸಾಕು.

**ಶ್ರೀ ಪಿ. ಎಂ. ಬಾಂಗಿ–** ಇಂಥ ಬ್ಯಾಂಕು ಯಾರಿಗೂ ಜಮೀನು ಮತ್ತು ಸ್ಥಿರ ಆಸ್ತಿ ಕೊಲ್ಯಾಟರಲ್ ಸೆಕ್ಯೂರಿಟಿ ತೆಗೆದುಕೊಳ್ಳದೆ ಸಾಲ ಕೊಡಬಾರದು ಎಂದು ರಿಸರ್ವ ಬ್ಯಾಂಕ್ ಇನ್‌ಸ್ಟೆಕ್ಷನ್ ರಿಪೋರ್ಟ್ ಮತ್ತು ಗವರ್ನ್‌ಮೆಂಟ್ ಆಡಿಟರ್ ರಿಪೋರ್ಟಿನಲ್ಲಿ ಇನ್‌ಸ್ಟ್ರಕ್ಷನ್ ಇದ್ದು ಆ ಪ್ರಕಾರ ಎಲ್ಲಾ ಬ್ಯಾಂಕುಗಳಿಗೂ ಆಡಿಟ್ ರಿಪೋರ್ಟ್ ಇನ್‌ಸ್ಪೆಕ್ಷನ್ ನೋಟ್ಸ್ ಬಂದಿದೆಯೇ. ಇಂಥಾ ಕಡೆ ಮಾನ್ಯ ಮಂತ್ರಿಗಳ ಗಮನ ಹೋಗಿದೆಯೇ?

ಶ್ರೀ ಎ. ಶಂಕರ ಆಳ್ವ– ನನ್ನ ತಿಳುವಳಿಕೆಗೆ ಬಂದಿದ್ದು ಇಲ್ಲ. ನಾನು ವಿಚಾರಿಸುತ್ತೇನೆ.

ಶ್ರೀ ಪಿ. ಎಂ. ಬಾಂಗಿ– ಅಂಥ ಇನ್‌ಸ್ಟೆಕ್ಷನ್ ನೋಟ್ಸ್ ಮತ್ತು ನಿರ್ಬಂಧಗಳು ಇದ್ದರೆ ಅದನ್ನು ಸಡಿಲಿಸಿ ಬಡ ಜನರಿಗೆ ಸಾಲ ಸಿಗುವಂತೆ ಏರ್ಪಾಡು ಮಾಡುತ್ತೀರಾ ಹೇಗೆ?

ಶ್ರೀ ಎ. ಶಂಕರ ಆಳ್ವ– ಬ್ಯಾಂಕ್‌ನವರು, ಅವರ ಬೈಲಾಸ್‌ನಲ್ಲಿ ಹೇಗೆ ಸಾಲ ಕೊಡಬೇಕು ಎಂದು ನಿರ್ಣಯಿಸಬೇಕಾಗುತ್ತದೆ. ಹೆಚ್ಚಾಗಿ ರಿಸರ್ವ್ ಫಂಡ್, ಡಿಪಾಸಿಟರ್ಸ್ ಹಣದ ಮೇಲೆ ಹೋಗುತ್ತದೆ. ಆದರೂ ಜಾಮೀನು ತೆಗೆದುಕೊಂಡೇ ಸಾಲ ಕೊಡಬೇಕಾಗುತ್ತದೆ.

## ಟಿಪ್ಪಣಿ ರೂಪದ ಬಿಡಿ ಪ್ರಶ್ನೆಗಳು

### 25ನೇ ಸೆಪ್ಟಂಬರ್ 1973

**Sri P. M. Bangi (Jamkhandi)**– Will the Minister for Agriculture and Forests be pleased to state:-

a) whether the houseless and landless weavers of Banahatti and their representative M.L.A. had applied to Minister to 'deforest' the area already occupied by hutmen and grant them the sites on which they have erected huts and are living there for more than 30 years;

b) if so, the reason why the area where the huts have been erected by the landless and houseless handloom workers *has not* been deforested and that the sites are not granted for handloom weavers so far;

c) whether the handloom weavers who have occupied the forest area near Banahatti are harassed by Forest Guards for not vacating the sites;

d) whether the Government has any proposal to deforest the necessary area of the Banahatti forest and grant the sites free of cost to houseless and landless handloom weavers of Banahatti; if so, the time within which the sites would be granted?

Sri K.H. Patil (Minister for Agriculture and Forest)-

a) Yes.

b) The matter is under consideration.

c) No. Eviction proceedings have been stayed.

d) Final report from the Chief Conservator of Forests is awaited.

**ಶ್ರೀ ಪಿ. ಎಂ. ಬಾಂಗಿ–** ನನ್ನ 'ಬಿ' ಪ್ರಶ್ನೆಗೆ ಉತ್ತರವಾಗಿ ಈ ವಿಷಯವು ಪರಿಶೀಲನೆಯಲ್ಲಿದೆ ಎಂದು ಹೇಳಿದ್ದೀರಿ. ಈ ಬಗ್ಗೆ ತಮ್ಮ ಕಡೆ ಅರ್ಜಿ ಕೊಟ್ಟು ಒಂದು ವರ್ಷವಾದರೂ ಏನೂ ಪ್ರಗತಿಯಿಲ್ಲ. ನಿವೇಶನ ಇಲ್ಲದವರಿಗೆ, ಲಕ್ಷಾವಧಿ ನಿವೇಶನಗಳನ್ನು ಹಳ್ಳಿಗಳಲ್ಲಿ ಕೊಡುತ್ತೇವೆ ಎಂದು ಸರ್ಕಾರದ ಪರವಾಗಿ ಏನು ಹೇಳಿದ್ದೀರೋ ಆ ಪ್ರಕಾರ ಅಲ್ಲಿ ನಿವೇಶನ ಇಲ್ಲದ ಬಡ ನೇಕಾರರಿಗೆ ನಿವೇಶನಗಳನ್ನು ಕೊಡುವುದು ಉಚಿತವಲ್ಲವೇ? ತಾವು ದೊಡ್ಡ ಮನಸ್ಸು ಮಾಡಿ ಅವರಿಗೆ ನಿವೇಶನಗಳನ್ನು ಕೊಡುತ್ತೀರಾ?

ಶ್ರೀ ಕೆ.ಎಚ್. ಪಾಟೀಲ್– ಕೊಡಬೇಕು ಎನ್ನುವುದರ ಸಲುವಾಗಿಯೇ ತಡವಾಗಿದೆ. ಸರ್ಕಾರದವರು ಅವರಿಗೆ ಎಷ್ಟೆಷ್ಟು ನಿವೇಶನಗಳನ್ನು ಕೊಟ್ಟರೆ ಸೂಕ್ತವಾದೀತು ಎನ್ನುವುದನ್ನು ಪರಿಶೀಲನೆ ಮಾಡಬೇಕು, ಅದರ ಸಲುವಾಗಿ ತಡವಾಗಿದೆ.

## ಸೀಡ್ ಫಾರಂ ಮಸೂದೆಯ ಮೇಲಿನ ಚರ್ಚೆ

### (27ನೇ ಸೆಪ್ಟಂಬರ್ 1973)

**ಶ್ರೀ ಪಿ. ಎಂ. ಬಾಂಗಿ (ಜಮಖಂಡಿ)**– ಅಧ್ಯಕ್ಷರೇ, ಮಾನ್ಯ ಕೃಷಿ ಮಂತ್ರಿಗಳು ಸಭೆಯ ಮುಂದೆ ಮಂಡಿಸಿರತಕ್ಕ ಈ ಸೀಡ್ ಫಾರಂ ಮಸೂದೆಯನ್ನು ನಾನು ಸಂಪೂರ್ಣ ಅನುಮೋದಿಸುತ್ತೇನೆ ಮತ್ತು ಸ್ವಾಗತಿಸುತ್ತೇನೆ. ಆದರೆ ಈ ಸೀಡ್ ಫಾರಂ ಬಿಲ್ಲಿನಲ್ಲಿ ಹೆಚ್ಚಿಗೆ ಹಾರ್ಟಿಕಲ್ಚರಿಗೆ ಸಂಬಂಧ ಇರುವುದರಿಂದ ಇದರಿಂದ ವ್ಯವಸಾಯಗಾರರಿಗೆ ಅಷ್ಟು ಪ್ರಯೋಜನ ಬೀಳುವುದಿಲ್ಲ. ವ್ಯವಸಾಯಗಾರರಿಗೂ ಅನುಕೂಲ ಮಾಡಿಕೊಡಲು ಒಂದು ಸಮಗ್ರ ಬಿಲ್ಲನ್ನು ಮಾಡಬೇಕೆಂದು ಸರ್ಕಾರಕ್ಕೆ ಸೂಚಿಸಬಯಸುತ್ತೇನೆ. ನಮ್ಮ ಭಾಗದಲ್ಲಿ ಜೋಳ, ಗೊಂಜಾಳ, ಸಜ್ಜಿ ಇವುಗಳ ಇಂಪ್ರೂವ್ಡ್ ತಳಿಗಳನ್ನು ಬಿತ್ತಿದ ಕಡೆ, ಬಿತ್ತಿದಜಾಗದಿಂದ 650 ಫೂಟ್ ತನಕ ಯಾರೂ ಅದೇ ತಳಿಯನ್ನು ಬಿತ್ತಬಾರದೆಂದು ನಿರ್ಬಂಧ ಹಾಕಿದರೆ ಒಳ್ಳೆಯದು. ಇಂಥ ವ್ಯವಸಾಯಗಾರರಿಗೆ ಯಾವ ವಿಧವಾದ ರಕ್ಷಣೆಯನ್ನೂ ಸರ್ಕಾರ ಕೊಟ್ಟಿಲ್ಲ. ಅಲ್ಲದೆ ಈ ಬಿಲ್ಲಿನಲ್ಲಿ ಸರ್ಕಾರದ ಮೊನಾಪಲಿಗೆ ಪ್ರಾವಿಜನ್ ಇಟ್ಟುಕೊಳ್ಳಬೇಕಿತ್ತು, ಅದನ್ನೂ ಇದರಲ್ಲಿ ಹಾಕಿಲ್ಲ. ಆದುದರಿಂದ ಈ ಮಸೂದೆಗೆ ಕೆಲವು ತಿದ್ದುಪಡಿಗಳಾಗಬೇಕಾದದ್ದು ಅವಶ್ಯಕ.

ಇನ್ನು ಈ ಮಸೂದೆಯ ಕಲಂ 4 ರಲ್ಲಿ ಯಾರಾದರೂ ಸರಕಾರದ ಹುಕುಮಿಗೆ ವ್ಯತಿರಿಕ್ತವಾಗಿ ಬೆಳೆ ಇಟ್ಟ ಪಕ್ಷದಲ್ಲಿ ಅಂಥವರಿಗೆ 500 ರೂಪಾಯಿ ದಂಡ ಹಾಕುವುದಕ್ಕೂ ಮತ್ತು ಅಂಥ ಬೆಳೆಯನ್ನು ಅಲ್ಲಿಂದ ಕಿತ್ತೊಗೆದಾಗ ಅವನಿಗೆ ಪರಿಹಾರ ಕೊಡಬೇಕಾದ್ದು ಅಗತ್ಯ. ಅದನ್ನೂ ಕೂಡ ಇದರಲ್ಲಿ ಅಡಕ

ಮಾಡಬೇಕು. ಇನ್ನು ಮಾದರಿ ಬಿತ್ತನೆ ಬೀಜಗಳನ್ನು ತಯಾರಿಸತಕ್ಕ ರೈತನಿಗೆ ರಕ್ಷಣೆ ಬೇಕು. ಆ ದೃಷ್ಟಿಯಿಂದ ಇದರಲ್ಲಿ ಒಂದು ಕಲಮನ್ನು ಸೇರಿಸಬೇಕು. ಆದುದರಿಂದ ಈ ಎಲ್ಲಾ ವಿಚಾರಗಳನ್ನು ಸೇರಿಸಿ ತಿದ್ದುಪಡಿ ಮಾಡಬೇಕೆಂದು ಸೂಚನೆ ಮಾಡುವುದಕ್ಕೆ ಇಷ್ಟಪಡುತ್ತೇನೆ. ಸರ್ಕಾರದ ಸೀಡ್ ಫಾರಂ ಅಗತ್ಯ ಇದ್ದು ಅದನ್ನು ಕೂಡಲೇ ಮಾಡಬೇಕೆಂದು ಹೇಳಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

## ಸ್ವಕ್ಷೇತ್ರ ಸಂಬಂಧಿ ಟಿಪ್ಪಣಿ ರೂಪದ ಪ್ರಶ್ನೆಗಳು

**(28th September, 1973)**

**Sri P. M. Bangi (Jamkhandi)**– Will the Minister for Industries be pleased to state:-

a) whether it is a fact that Sri Rathod, Minister of State for Fisheries visited Weavers' Centres at (1) Chadachan (2) Banahatti (3) Jamkhandi (4) Rampur (5) Rabakavi (6) Teradal (7) Hunagund (8) Ilakal (9) Guledagud and (10) Sulebhavi in Bijapur district to study hardship and needs of suffering weavers in the drought affected areas of the district with concurrence of the Chief Minister on 4th, 5th, and 6th April 1973.

b) whether he has submitted the report this week proposing immediate reliefs to suffering weavers by supplying sufficient yarn and interest free loans to poor weavers;

c) whether the report will be placed before this House?

Sri S.M. Krishna (Minister for Industries)-

a) Yes

b) Yes

c) No - as the Report is of administrative nature.

ಶ್ರೀ ಪಿ. ಎಂ. **ಬಾಂಗಿ**– (ಅ) ಪ್ರಶ್ನೆಗೆ ಉತ್ತರವಾಗಿ 'ಹೌದು' ಎಂಬುದಾಗಿ ಹೇಳಿದೆ. ಎಷ್ಟೇ ಕಷ್ಟಪಟ್ಟರೂ ಅಲ್ಲಿನ ನೇಕಾರರಿಗೆ ಸಾಕಷ್ಟು ನೂಲು ಕೊಟ್ಟಿಲ್ಲ. ಮಾನ್ಯ ಶ್ರೀ ಕೆ.ಟಿ. ರಾಠೋಡ ಇದರ ಬಗ್ಗೆ ಶಿಫಾರಸು ಮಂಡಿಸಿದ್ದರೂ ಇನ್ನೂ ಆ ನೇಕಾರರಿಗೆ ಇಂಟರೆಸ್ಟ್ ಫ್ರೀ ಲೋನ ಕೊಟ್ಟಿಲ್ಲದೇ ಇರಲು ಕಾರಣವೇನು?

ಶ್ರೀ **ಎಸ್.ಎಂ. ಕೃಷ್ಣ**– ಮಾನ್ಯ ಕೆ.ಟಿ. ರಾಠೋಡ ಮಂತ್ರಿಗಳು ಕೆಲವಾರು ಶಿಫಾರಸ್ಸುಗಳನ್ನು ಮಂಡಿಸಿದರು. ಆ ಶಿಫಾರಸುಗಳು ಕಾರ್ಯ್ಯಾಚರಣೆಯಾಗಬೇಕಾದರೆ ಸುಮಾರು 20 ಸಾವಿರ ನೇಕಾರರಿಗೆ ಬಿಜಾಪುರ ಜಿಲ್ಲೆಯೊಂದರಲ್ಲಿಯೇ ಪ್ರತಿಯೊಬ್ಬರಿಗೂ 250 ರೂಪಾಯಿಗಳಂತೆ ಸಾಲ ಕೊಟ್ಟರೆ ಸುಮಾರು 50 ಲಕ್ಷ ರೂಪಾಯಿಗಳನ್ನು ಸಹಾಯ ಕೊಡಬೇಕಾಗುತ್ತದೆ. ಇದು ಕೇವಲ ಬಿಜಾಪುರ ಜಿಲ್ಲೆಗೆ ಮಾತ್ರ ಸೀಮಿತವಾಗುವುದಿಲ್ಲ. ಬಿಜಾಪುರ, ಬೆಳಗಾಂ, ಧಾರವಾಡ, ಮಂಡ್ಯ ಜಿಲ್ಲೆಗಳಲ್ಲಿಯೂ ನೇಕಾರರು ಇದ್ದಾರೆ. ಸರ್ಕಾರ ಈ ಒಂದು ಜಿಲ್ಲೆಯಲ್ಲಿ ಒಂದು ಕಡೆಯೇ ಸುಮಾರು 50 ಲಕ್ಷ ರೂಪಾಯಿಗಳನ್ನು ಖರ್ಚು ಮಾಡುವುದಕ್ಕೆ ಸಿದ್ಧವಾದರೆ ಮಿಕ್ಕ ಎಲ್ಲಾ ಜಿಲ್ಲೆಗಳಲ್ಲಿಯೂ ಈ ರೀತಿಯಾಗಿಯೇ ಖರ್ಚುಮಾಡಬೇಕಾದ ಪರಿಸ್ಥಿತಿ ಬರುತ್ತದೆ. ಅದು ನ್ಯಾಯವಾದಂಥ ಬೇಡಿಕೆಯೇನೋ ಸರಿ. ಆದರೆ ರಾಜ್ಯ ಸರ್ಕಾರ ಈಗ ಎದುರಿಸುತ್ತಿರುವ ಆರ್ಥಿಕ ಬಿಕ್ಕಟ್ಟಿನ ಚೌಕಟ್ಟಿನಲ್ಲಿ ನಾವು ಸುಮಾರು *50* ಲಕ್ಷ ರೂಪಾಯಿಗಳನ್ನು ಇಲ್ಲಿ ಒದಗಿಸುವುದಕ್ಕೆ

ಸಾಧ್ಯವಾಗುವುದಿಲ್ಲವೆಂಬುದು ಒಂದು. ಇದಕ್ಕೆ ಬದಲಾಗಿ ನಾವು ಈಗಾಗಲೇ 17 ರಿಲೀಫ಼ ಸೆಂಟರುಗಳನ್ನು ಪ್ರಾರಂಭ ಮಾಡಿದ್ದೇವೆ. ಅದಕ್ಕಾಗಿ ಸುಮಾರು 22 ರಿಂದ 80 ಲಕ್ಷ ರೂಪಾಯಿಗಳವರೆಗೂ ಈಗಾಗಲೇ ಖರ್ಚು ಮಾಡುತ್ತಿದ್ದೇವೆ. ಇದು ಮಾನ್ಯ ಸದಸ್ಯರಾದ ಶ್ರೀ ಬಾಂಗಿಯವರಿಗೂ ಗೊತ್ತಿದೆ. ಆದರೆ ನಮಗೆ ಈಗ ಇರತಕ್ಕ ಆರ್ಥಿಕ ಬಿಕ್ಕಟ್ಟಿನ ಇತಿಮಿತಿಗಳನ್ನು ನೋಡಿಕೊಂಡು ನಾವು ಈ ವಿಚಾರದಲ್ಲಿ ಒಂದು ತೀರ್ಮಾನವನ್ನು ತೆಗೆದುಕೊಳ್ಳಬೇಕಾಗುತ್ತದೆ.

**ಶ್ರೀ ಪಿ. ಎಂ. ಬಾಂಗಿ**– ಮಾನ್ಯ ಶ್ರೀ ಕೆ.ಟಿ. ರಾಠೋಡ ಮಂತ್ರಿಗಳು ಮೀನುಗಾರಿಕೆಯವರಿಗೆ ಸುಮಾರು 30 ಲಕ್ಷ ರೂಪಾಯಿಗಳನ್ನು ಪರಿಹಾರ ರೂಪವಾಗಿ ಕೊಟ್ಟರು. ಅದೇ ರೀತಿಯಾಗಿ ಕನಿಷ್ಟಪಕ್ಷ ತಾವು ನೇಕಾರರಿಗೆ ಪ್ರತಿಯೊಬ್ಬರಿಗೆ ಕೇವಲ 500 ರೂಪಾಯಿ ಇಂಟರೆಸ್ಟ್ ಫ್ರೀ ಲೋನಾಗಿ ಕೊಟ್ಟರೆ ಅದರಿಂದ ಅವರಿಗೆ ಬಹಳ ಅನುಕೂಲವಾಗುತ್ತದೆ. ಇದನ್ನು ಮಾನ್ಯ ಮಂತ್ರಿಗಳು ವಿಚಾರ ಮಾಡುತ್ತಾರೆಯೇ?

**ಶ್ರೀ ಎಸ್.ಎಂ. ಕೃಷ್ಣ**– ಈಗಾಗಲೇ ಬಿಜಾಪುರ ಜಿಲ್ಲೆಯಲ್ಲಿ ಕೋ–ಆಪರೇಟಿವ್ ಬ್ಯಾಂಕ ವತಿಯಿಂದ ಒಂದಷ್ಟು ಹಣವನ್ನು ಅಲ್ಲಿನ ನೇಕಾರರಿಗೆ ಸಾಲದ ರೂಪದಲ್ಲಿ ಕೊಟ್ಟಿದ್ದಾರೆ. ಅದೂ ಅಲ್ಲದೆ ಇನ್ನೂ ಹೆಚ್ಚಿನ ಹಣವನ್ನು ಈ ಜಿಲ್ಲಾ ಕೋ–ಆಪರೇಟಿವ್ ಬ್ಯಾಂಕಿಗೆ ಕೊಡಬೇಕೆಂದು ಸರ್ಕಾರದವರು ರಿಜರ್ವ ಬ್ಯಾಂಕಿನವರಿಗೆ ಶಿಫಾರಸುಮಾಡುತ್ತಾರೆ.

**ಶ್ರೀ ಕೆ.ಆರ್. ಶ್ರೀನಿವಾಸುಲು ನಾಯ್ಡು**– ಬೆಂಗಳೂರಿನ ಕಬ್ಬನಪೇಟೆ, ಸಂಪಂಗಿರಾಮ ನಗರಗಳಲ್ಲಿಯೂ ನೇಕಾರರಿಗೆ ರಿಲೀಫ್ ಮೆಷರ್ಸನ್ನು ಯಾವರೀತಿ ಬಿಜಾಪುರ ಜಿಲ್ಲೆಯಲ್ಲಿ ಒದಗಿಸುತ್ತೀರೋ ಆ ರೀತಿಯಾಗಿ ಒದಗಿಸಿಕೊಡುತ್ತೀರಾ?

**ಅಧ್ಯಕ್ಷರು**– ಈಗ ಆ ಪ್ರಶ್ನೆ ಉದ್ಭವಿಸುವುದಿಲ್ಲ.

**Sri Mallikarjun Kharge-** Government is kind enough to start collective weaving centres in drought affected areas. Will the Government continue this scheme at least for one year?

**Sri S.M. Krishna-** This was part of the drought relief programme, the State Government had taken up. Now the question of continuing these relief centres is engaging active consideration of Government.

**ಶ್ರೀ ಪಿ. ಎಂ. ಬಾಂಗಿ–** ವಿಜಾಪೂರ ಜಿಲ್ಹೆಯಲ್ಲಿ ಕೇವಲ 3 ರಿಲೀಫ್ ಸೆಂಟರುಗಳನ್ನು ತೆರೆದಿದ್ದು ಸ್ವಲ್ಪ ಜನರಿಗೆ ಅಂದರೆ ಕೇವಲ 300 ಜನರಿಗೆ ಮಾತ್ರ ಅದರಿಂದ ಪ್ರಯೋಜನವಾಗಿದೆ. ಅಲ್ಲಿರತಕ್ಕವರು 32 ಸಾವಿರ ಜನ ನೇಕಾರರು ಅಂದ ಮೇಲೆ ಉಳಿದ ನೇಕಾರರಿಗೆ ಇವತ್ತಿಗೂ ನೂಲನ್ನು ಕೊಟ್ಟಿಲ್ಲ. ಅವರು ನಿರ್ಗತಿಕರಾಗಿದ್ದಾರೆ. ಇದರ ಪರಿಣಾಮವಾಗಿ ಅನೇಕರು ಉಪವಾಸ ಮಾಡುತ್ತಿದ್ದಾರೆ. ಆದ್ದರಿಂದ ಅವರ ಬಗ್ಗೆ ಸರ್ಕಾರ ಈಗಲಾದರೂ ಗಮನಿಸುತ್ತಿದೆಯೇ?

**ಶ್ರೀ ಎಸ್.ಎಂ. ಕೃಷ್ಣ–** ನೇಕಾರರಿಗೆ ಬಹಳ ಕಷ್ಟ ಪರಿಸ್ಥಿತಿ ಬಂದಿದೆಯೆಂಬುದು ಸರ್ಕಾರದವರಿಗೆ ಗೊತ್ತಿದೆ. ಅದಕ್ಕಾಗಿ ಈಗಾಗಲೇ ಸರ್ಕಾರ ಅವರಿಗೆ ನೂಲು ವಿತರಣೆ ಮಾಡುವ ಜವಾಬ್ದಾರಿ ಹೊತ್ತುಕೊಂಡಿದೆ. 40 ನಂಬರ್ ಕೌಂಟಿನ ನೂಲಿನವರೆಗೂ ಡಿ–ಕಂಟ್ರೋಲ್ ಮಾಡಿದ್ದೇವೆ. ಅದಕ್ಕೆ ಮೇಲ್ಪಟ್ಟ ನಂಬರ್ ಕೌಂಟಿನ ನೂಲನ್ನು ಹೆಚ್ಚಿಗೆ ಸ್ಟಾಕ್ ಮಾಡದೆ ಈಗ ಪ್ರತಿಯೊಂದು ಜಿಲ್ಲೆಯಲ್ಲಿಯೂ ಹಂಚಿದ್ದೇವೆ. ದೇಶದಲ್ಲಿರತಕ್ಕ ನೂಲಿನ ಅಭಾವ ಪರಿಸ್ಥಿತಿಯನ್ನು ಗಮನಿಸಿಕೊಂಡು ನಮ್ಮ ರಾಜ್ಯದಲ್ಲಿರತಕ್ಕ ಮಿಲ್ಲುಗಳು ಏನಿವೆಯೋ ಅವು ಎಲ್ಲ ನೂಲನ್ನೂ ನಮ್ಮ ರಾಜ್ಯದಲ್ಲಿಯೇ ಉಪಯೋಗಿಸಿಕೊಳ್ಳುವುದಕ್ಕೆ ತಕ್ಕ ಏರ್ಪಾಡು ಮಾಡುತ್ತೇವೆ. ಆದ್ದರಿಂದ

ಸರ್ಕಾರ ನೇಕಾರರ ಒಳಿತಿಗೋಸ್ಕರ ಎಲ್ಲವನ್ನೂ ಮಾಡುವುದಕ್ಕೆ ಸಾಧ್ಯವಾಗದೇ ಹೋದರೂ ಸಾಕಾದಷ್ಟು ಕೆಲಸಕಾರ್ಯಗಳನ್ನು ಈಗಾಗಲೇ ಮಾಡಿದೆ.

## ಉತ್ತರ ಕರ್ನಾಟಕದವರಿಗೆ ಸಾಕಷ್ಟು ಆಹಾರ ಧಾನ್ಯ ಪೂರೈಸಿರಿ

### (28ನೇ ಸೆಪ್ಟಂಬರ್ 1973)

ಶ್ರೀ ಪಿ. ಎಂ. ಬಾಂಗಿ (ಜಮಖಂಡಿ)– ಮಾನ್ಯ ಅಧ್ಯಕ್ಷಣಿಯವರೇ, ಮಾನ್ಯ ಶಾಸಕರಾದ ಶ್ರೀಮಾನ್ ರಾಜಶೇಖರ ಮೂರ್ತಿಯವರು ಇದುವರೆಗೆ ಪ್ರೊಕ್ಯೂರಮೆಂಟ್, ಬಫರ್ ಸ್ಟಾಕ್ ಮತ್ತು ಡಿಸ್ಟ್ರಿಬ್ಯೂಷನ್ ಬಗ್ಗೆ ಸಾಕಷ್ಟು ವಿವರವಾಗಿ ಹೇಳಿದ್ದಾರೆ. ನಾನು ಇದೇ ವಿಷಯದ ಬಗ್ಗೆ ಹೇಳುವುದಕ್ಕೆ ಹೋಗುವುದಿಲ್ಲ. ಇಂದಿನ ಆಹಾರ ಹಂಚಿಕೆ ವಿಷಯದಲ್ಲಿ ಸಾಕಷ್ಟು ದೋಷಗಳಿವೆ. ಈ ದೋಷಗಳನ್ನು ಸರ್ಕಾರದವರು ತಿದ್ದಬೇಕೆಂದು ಈ ಸಮಯದಲ್ಲಿ ಸೂಚಿಸಬಯಸುತ್ತೇನೆ. ಸರ್ಕಾರದವರು ಷಹರ ಮತ್ತು ಹಳ್ಳಿಗಳಲ್ಲಿ ಆಹಾರ ವಿತರಣೆ ಮಾಡುವುದಕ್ಕಾಗಿ ರೇಷನ್ ಕಾರ್ಡುಗಳನ್ನು ಕೊಡುತ್ತಿದ್ದಾರೆ. ರೇಷನ್ ಕಾರ್ಡುಗಳಲ್ಲಿ ಇರುವ ಜನರ ಸಂಖ್ಯೆಗೂ ಸೆನ್ಸಸ್‌ನಲ್ಲಿರುವ ಜನರ ಸಂಖ್ಯೆಗೂ ಸಾಕಷ್ಟು ವ್ಯತ್ಯಾಸಗಳು ಕಂಡುಬರುತ್ತವೆ. ಉದಾಹರಣೆಗೆ ಹೇಳಬೇಕಾದರೆ ಜಮಖಂಡಿಯಲ್ಲಿ ಸೆನ್ಸಸ್ ಪ್ರಕಾರ 30 ಸಾವಿರ ಜನಸಂಖ್ಯೆ ಇದ್ದರೆ, ರೇಷನ್ ಕಾರ್ಡಿನ ಲೆಖ್ಖದಲ್ಲಿ 40 ಸಾವಿರ ಇದೆ. ಅದೇ ಪ್ರಕಾರ ಬನಹಟ್ಟಿಯಲ್ಲಿ ಸೆನ್ಸಸ್ ಪ್ರಕಾರ 40 ಸಾವಿರ ಜನ ಸಂಖ್ಯೆ ಇದ್ದರೆ ರೇಷನ್ ಕಾರ್ಡ ಪ್ರಕಾರ 54 ಸಾವಿರ ಜನಸಂಖ್ಯೆಯಾಗುತ್ತದೆ. ಇದರ ಜೊತೆಗೆ ತಹಶೀಲದಾರರು ಪ್ರತಿದಿವಸವೂ ಐದಾರು ಹೊಸ ರೇಷನ್ ಕಾರ್ಡುಗಳನ್ನು ವಿತರಣೆ ಮಾಡುತ್ತಿದ್ದಾರೆ. ಅಂದರೆ ತಿಂಗಳಿಗೆ ಒಂದು ಸಾವಿರ ಯುನಿಟ್‌ಗಳಷ್ಟು ಹೆಚ್ಚಿಗೆ ಕೊಡಲಿಕ್ಕೆ ಪ್ರಯತ್ನ ಮಾಡಿದ್ದಾರೆ. ಈ ರೀತಿ ಬೋಗಸ್ ಕಾರ್ಡುಗಳನ್ನು ಕೊಡುತ್ತಿರುವುದರಿಂದ ನಿಜವಾದ ಕೂಲಿಕಾರರಿಗೆ ಸಾಕಷ್ಟು ಆಹಾರಧಾನ್ಯಗಳು ಸಿಗುತ್ತಿಲ್ಲ. ಷಹರುಗಳಲ್ಲಿ ವಿತರಣೆ ಮಾಡುವ ಕಾರ್ಡುಗಳಲ್ಲಿ ಮನಸಿಪಾಲಿಟಿ ನಂಬರ್‌ಗಳನ್ನಾಗಲೀ ಅಥವಾ ಸಿಟಿ ಸರ್ವೆ ನಂಬರುಗಳನ್ನಾಗಲೀ ದಾಖಲು

ಮಾಡುತ್ತಿಲ್ಲ. ಇದರಿಂದ ಬೋಗಸ್ ಕಾರ್ಡುಗಳನ್ನು ತನಿಖೆ ಮಾಡುವುದು ಕಷ್ಟವಾಗಿದೆ. ಕಾಳಸಂತೆಕೋರರು ಈ ಬೋಗಸ್ ಕಾರ್ಡುಗಳ ಮೂಲಕ ಆಹಾರ ಧಾನ್ಯಗಳನ್ನು ಕಲೆಹಾಕಿ, ಧಾರಣೆಗಳು ಹೆಚ್ಚುವಂತೆ ಮಾಡುತ್ತಿದ್ದಾರೆ. ಧಾರಣೆಗಳು ಹೆಚ್ಚುವುದಕ್ಕೆ ಇವರೇ ಕಾರಣರಾಗಿದ್ದಾರೆಂದು ಧಾರಾಳವಾಗಿ ಹೇಳಬಯಸುತ್ತೇನೆ. ಇದೇ ಪ್ರಕಾರ ಕೃಷ್ಣಾ ನದಿಯ ದಡದಲ್ಲಿನ ಹಳ್ಳಿಗಳಲ್ಲಿ ಸಾಕಷ್ಟು ಜೋಳವನ್ನು ರೈತರು ಬೆಳೆಯುತ್ತಿದ್ದರೂ ಅದರ ಬಗ್ಗೆ ಯಾರೂ ಡಿಕ್ಲರೇಷನ್ ಕೊಡುವುದಿಲ್ಲ ಮತ್ತು ತಮ್ಮಲ್ಲಿರುವಂಥ ಜೋಳವನ್ನು ಏಜೆಂಟರ ಮೂಲಕ ಅಥಣಿ ಮಾರ್ಗವಾಗಿ ಮಹಾರಾಷ್ಟ್ರಕ್ಕೆ ಸಾಗಿಸುವುದಕ್ಕೆ ಪ್ರಯತ್ನ ಮಾಡಿದ್ದಾರೆ. ಪ್ರತಿಯೊಂದು ಹಳ್ಳಿಯಲ್ಲಿಯೂ ಈ ಏಜೆಂಟರು ಇದ್ದಾರೆ. ಇವರು ಪ್ರತಿ ಕ್ವಿಂಟಲ್ಲಿಗೆ 5 ರೂಪಾಯಿಯಂತೆ ಕಮೀಷನ್ ಪಡೆಯುವುದರ ಮೂಲಕ ಸಹಸ್ರಾರು ರೂಪಾಯಿಗಳನ್ನು ಗಳಿಸುತ್ತಿದ್ದಾರೆ. ಇದನ್ನು ವಿಜಾಪುರದ ಡಿ. ಸಿ. ಮತ್ತು ಜಮಖಂಡಿಯ ತಹಶೀಲ್ದಾರಿಗೆ ತಿಳಿಸಲಾಗಿದ್ದರೂ ಏನೂ ಉಪಯೋಗವಾಗಿಲ್ಲ. ಇದೇ ಪ್ರಕಾರ ಧಾರವಾಡ ಜಿಲ್ಹೆಯಲ್ಲಿ ಸಾಕಷ್ಟು ಆಹಾರಧಾನ್ಯವನ್ನು ಬೆಳೆಯುತ್ತಿದ್ದು, ಆ ಧಾನ್ಯಗಳು ನಮ್ಮ ಜಮಖಂಡಿ ಮತ್ತು ಅಥಣಿ ಮಾರ್ಗವಾಗಿ ಮಹಾರಾಷ್ಟ್ರಕ್ಕೆ ಸಾಕಷ್ಟು ಪ್ರಮಾಣದಲ್ಲಿ ಹೋಗುವುದಕ್ಕೆ ಪ್ರಾರಂಭವಾಗಿದೆ. ಮಹಾರಾಷ್ಟ್ರದ ಬಾರ್ಡರಿಗೆ ಕರ್ನಾಟಕದಿಂದ ಆಹಾರ ಧಾನ್ಯ ಕಳ್ಳತನದಲ್ಲಿ ಸಾಗಾಣಿಕೆ ಮಾಡುವುದನ್ನು ತಪ್ಪಿಸಲು ಸಾಕಷ್ಟು ಪೋಲೀಸ್ ಬಂದೋಬಸ್ತ ಮಾಡಬೇಕು. ಕರ್ನಾಟಕದಲ್ಲಿ ಆಹಾರಧಾನ್ಯ ಕಡಿಮೆ ಇರುವಾಗ ಅದು ಮಾರಲು ಬೇರೆ ರಾಷ್ಟ್ರಗಳಿಗೆ ಹೋಗುವುದನ್ನು ತಪ್ಪಿಸಬೇಕು. ನಮ್ಮ ಉತ್ತರ ಕರ್ನಾಟಕದ ಜನರು ಆಹಾರ ಧಾನ್ಯದ ಕೊರತೆ ಇದ್ದರೂ ಸಹನಶೀಲರು ಮತ್ತು ಸರ್ಕಾರದವರನ್ನೇ ದವಸಕ್ಕಾಗಿ ನಂಬಿದ್ದಾರೆ. ಆದುದರಿಂದ ಮಹಾರಾಷ್ಟ್ರಕ್ಕೆ ಹೋಗುವ ಧಾನ್ಯವನ್ನು ತಪ್ಪಿಸಬೇಕೆಂದೂ, ಇದಕ್ಕೆ ತಕ್ಕ ವ್ಯವಸ್ಥೆ ಮಾಡಬೇಕೆಂದೂ ಸರ್ಕಾರಕ್ಕೆ ಸೂಚಿಸಬಯಸುತ್ತೇನೆ. ಇದೇ ಪ್ರಕಾರ ಭೂಮಿ ಇದ್ದರೂ ಅದರಲ್ಲಿ ಯಾವ ಬೆಳೆ ಬರದಿದ್ದ ಮೂಲಕ ಕೂಲಿ ಮಾಡುವ ಕೃಷಿ ಕೂಲಿಕಾರರಿಗೆ ಮತ್ತು ನೇಕಾರ ಕೂಲಿಕಾರರಿಗೆ ಆಹಾರಧಾನ್ಯ ಕೊಡುವ ವ್ವವಸ್ಥೆ ಮಾಡಬೇಕು. ಈಗ ಒಬ್ಬರಿಗೆ ಕೊಡುವ ಎರಡು ಕೆ.ಜಿ. ಧಾನ್ಯ ಸಾಲದು. ಇದನ್ನು ಹೆಚ್ಚಿಸಬೇಕು. ಕನಿಷ್ಟಪಕ್ಷ ಒಕ್ಕಲುತನ ಮಾಡುವ *ಕೂಲಿಕಾರರಿಗೆ*, ನೇಕಾರ ಕೂಲಿಕಾರರಿಗೆ ಆರು

ಕೆ.ಜಿ.ಗಳಷ್ಟು ಧಾನ್ಯ ಒದಗಿಸುವ ವ್ಯವಸ್ಥೆಯನ್ನು ಸರ್ಕಾರ ಮಾಡಬೇಕು. ಇದೇ ರೀತಿ ಸರ್ಕಾರ ಇತರ ಕಡೆಗಳಲ್ಲಿ ಗೋದಿ ಹಿಟ್ಟು, ಮೈದಾ ಇತ್ಯಾದಿಗಳನ್ನು ಕೊಡುತ್ತಿರುವಂತೆ ನಮ್ಮ ಭಾಗದ ಜನರಿಗೂ ಕೊಡಬೇಕು. ನಮ್ಮ ಉತ್ತರ ಕರ್ನಾಟಕದ ಜನರು ಬಹಳ ಸಹನಶೀಲರು. ಸರ್‌ಪ್ಲಸ್ ಏರಿಯಾಗಳಾದ ಹಾಸನ, ಮಂಡ್ಯ, ರಾಣೇಬೆನ್ನೂರು ಇಲ್ಲೆಲ್ಲಾ ಲೂಟಿಗಳಾದುವು. ಆದರೆ ನಮ್ಮ ಭಾಗದಲ್ಲಿ ಯಾವ ಲೂಟಿ ಆಗಲಿಲ್ಲ. ಇದಕ್ಕಾಗಿ ಸರ್ಕಾರ ಉತ್ತರ ಕರ್ನಾಟಕದ ಜನತೆಗೆ ಸಾಕಷ್ಟು ಆಹಾರ ಧಾನ್ಯ ವ್ಯವಸ್ಥೆ ಮಾಡಬೇಕೆಂದು ಕೇಳುತ್ತೇನೆ. ನಮ್ಮ ಜನಕ್ಕೆ ಸರಕಾರದ ಮೇಲೆ ಪೂರ್ಣ ವಿಶ್ವಾಸವಿದೆ ಎಂದು ಹೇಳಿ ನನ್ನ ನಾಲ್ಕು ಮಾತುಗಳನ್ನು ಮುಗಿಸುತ್ತೇನೆ.

# ರಾಜ್ಯಪಾಲರ ಭಾಷಣದ ಮೇಲಿನ ಚರ್ಚೆ

## 17ನೇ ಫೆಬ್ರವರಿ 1974

**ಶ್ರೀ ಪಿ. ಎಂ. ಬಾಂಗಿ (ಜಮಖಂಡಿ)**– ಮಾನ್ಯ ಅಧ್ಯಕ್ಷರೇ, ಶ್ರೀಮಾನ್ ನಾಯ್ಡುರವರು ರಾಜ್ಯಪಾಲರು ಮಾಡಿದ ಭಾಷಣಕ್ಕೆ ತಂದಿರುವ ವಂದನಾರ್ಪಣೆ ನಿರ್ಣಯವನ್ನು ಬೆಂಬಲಿಸುತ್ತಾ, ಕೆಲವು ಮಾತುಗಳನ್ನಾಡಲು ನಿಂತಿದ್ದೇನೆ. ನಮ್ಮ ರಾಜ್ಯಪಾಲರಾದ ಶ್ರಿ ಮೋಹನಲಾಲ್ ಸುಖಾದಿಯಾ ಅವರು ಜನಸಾಮಾನ್ಯರ ಕಷ್ಟಗಳನ್ನು ಅರಿತುಕೊಂಡ ರಾಜ್ಯಪಾಲರೂ ಆಗಿದ್ದಾರೆ. ಜನಸಾಮಾನ್ಯರಿಗೋಸ್ಕರ ಮಾಡಿರುವಂಥ ಕೆಲಸಗಳು ಯಾವವು ಮತ್ತು ಮುಂದೆ ಆಗತಕ್ಕ ಕೆಲಸಗಳೇನು ಎನ್ನುವುದರ ಬಗ್ಗೆ ಸಾಕಷ್ಟು ವಿಚಾರಗಳನ್ನು ರಾಜ್ಯಪಾಲರು ತಮ್ಮ ಭಾಷಣದಲ್ಲಿ ಹೇಳಿದ್ದಾರೆ. ಈ ಭಾಷಣದಲ್ಲಿ ಯಾವ ಅಂಶಗಳೂ ಸತ್ಯಕ್ಕೆ ದೂರವಾದಂತಹವು ಇಲ್ಲ. ಇದರ ಬಗ್ಗೆ ನಮ್ಮ ಮಾನ್ಯ ವಿರೋಧ ಪಕ್ಷದ ನಾಯಕರು ಒಂದೆರಡು ತಾಸುಗಳಷ್ಟು ಮಾಡಿದ ಭಾಷಣವನ್ನು ಕೇಳಿದಾಗ ನಮ್ಮ ಸರ್ಕಾರ ಏನೂ ಮಾಡಿಲ್ಲ, ರಾಜ್ಯದ ಬಡ ಜನರ ಸಲುವಾಗಿ ಏನೂ ಕೆಲಸ ಮಾಡಲಿಲ್ಲ ಎನ್ನುವ ಧಾಟಿಯಲ್ಲಿ ಹೇಳಿದರು. ವಿರೋಧ ಪಕ್ಷದ ನಾಯಕರು ಈ ರೀತಿ ಭಾಷಣ ಮಾಡುವುದು ಸರಿಯಲ್ಲವೆಂದು ನಾನು ಇಲ್ಲಿ ಹೇಳಬಯಸುತ್ತೇನೆ

ನಮ್ಮ ಸರ್ಕಾರದವರು ಈಚೆಗೆ ಭೂ ಸುಧಾರಣೆ ಕಾಯ್ದೆ ಜಾರಿಗೆ ಬರುವಂತೆ ಮಾಡಿ ಲಕ್ಷಾಂತರ ಗೇಣಿದಾರರು ಅವರ ಭೂಮಿಯ ಮಾಲ್ಕಿ ಹಕ್ಕು ಪಡೆಯುವಂತೆ ವ್ಯವಸ್ಥೆ ಮಾಡಿ ಲಕ್ಷಾಂತರ ಹೆಕ್ಟೇರು ಭೂಮಿ ಸರ್‌ಪ್ಲಸ್ ಲ್ಯಾಂಡ್ ಆಗುತ್ತದೆ ಎಂದು ಹೇಳಿದ್ದಾರೆ. ಬಡವರು, ಮನೆ ಇಲ್ಲದಂಥವರು, ಭೂಮಿ ಇಲ್ಲದದಂಥವರು ಹೀಗೆ ಲಕ್ಷಾಂತರ ಜನರಿಗೆ ಹಂಚಲು ಸಾಕಷ್ಟು ಭೂಮಿ ಸಿಕ್ಕಿದೆ. ಉದರ ನಿಮಿತ್ತ ಭೂಮಿಯನ್ನೇ ನಂಬಿಕೊಂಡಿರುವ ಜನರಿಗೆ ಸಹಾಯ ಮಾಡುವುದಕ್ಕೋಸ್ಕರ ಇಂಥ ಒಂದು ಉತ್ತಮ ಕಾಯ್ದೆ ಮಾಡಿ ರಾಷ್ಟ್ರಪತಿಯವರ ಮುದ್ರೆಯನ್ನೂ ದೊರಕಿಸಿಕೊಂಡಿದ್ದಾರೆ ಮತ್ತು ಬರುವ ಮಾರ್ಚ ಒಂದನೇ ತಾರೀಖಿನಿಂದಲೇ ಇದನ್ನು ಜಾರಿಗೆ ತರುತ್ತೇವೆಂದೂ ಸರಕಾರದವರು ಹೇಳಿದ್ದಾರೆ. ಇದು ಸಾಮಾನ್ಯ ಸಂಗತಿಯಲ್ಲ. ಇದೇ ಪ್ರಕಾರ

2 ಲಕ್ಷ 50 ಸಾವಿರ ನಿವೇಶನಗಳನ್ನು ಫುಟ್‌ಪಾತಿನ ಮೇಲೆ ನಿಂತಿರುವ ಬಡ ಜನಕ್ಕೆ ಹಂಚುವ ವ್ಯವಸ್ಥೆ ಮಾಡಿ ಅವರಿಗೆ ಅನುಕೂಲ ಮಾಡಿಕೊಟ್ಟಿದ್ದಾರೆ.

ಅದೇ ಪ್ರಕಾರ ಸರ್ಕಾರದವರು ಜನತಾ ಗೃಹನಿರ್ಮಾಣ ಕಾರ್ಯಕ್ರಮವನ್ನು ಕೈಗೊಂಡು ಮುಂದಿನ ಸಾಲಿನಲ್ಲಿ ಸಹಸ್ರಾರು ಮನೆಗಳನ್ನು ಕಟ್ಟಿಸುವ ವ್ಯವಸ್ಥೆ ಮಾಡಿದ್ದಾರೆ. ಅದಕ್ಕಾಗಿ 5 ಕೋಟಿ ರೂಪಾಯಿಗಳನ್ನು ಬಜೆಟ್ಟಿನಲ್ಲಿ ಮಂಜೂರು ಮಾಡಿದ್ದಾರೆ. ಬಡಜನರ ಅನುಕೂಲಕ್ಕೋಸ್ಕರ ಬೇರ ಬೇರೆ ಕಾಯ್ದೆಗಳನ್ನು ಮಾಡಿದ್ದಾರೆ. ಮಿನಿಮಮ್ ವೇಜಸ್ ಆ್ಯಕ್ಟ್ ಮುಂತಾದ ಕಾಯ್ದೆಗಳನ್ನು ಮಾಡುವುದರ ಮೂಲಕ ಬಡಜನರಿಗೆ ಸಾಕಷ್ಟು ಪ್ರಯೋಜನವನ್ನು ಈ ನಮ್ಮ ಸರ್ಕಾರ ಮಾಡಿದೆ.

ಬೇರೆ ರಾಜ್ಯಗಳಲ್ಲಿ ಕಾಯ್ದೆ ಮತ್ತು ಸುವ್ಯವಸ್ಥೆ ಸರಿಯಿಲ್ಲ. ಆದರೆ ನಮ್ಮ ರಾಜ್ಯದಲ್ಲಿ ಶಾಸನ ಸುವ್ಯವಸ್ಥೆಯನ್ನು ನಮ್ಮ ಸರ್ಕಾರ ಚೆನ್ನಾಗಿ ಕಾಪಾಡಿಕೊಂಡು ಬಂದಿದೆ ಎಂದು ಹೇಳಲು ನನಗೆ ಸಂತೋಷವಾಗುತ್ತದೆ. ಕಳೆದ ಡಿಸೆಂಬರ್ 12 ಮತ್ತು 18 ನೇ ತಾರೀಖಿನ ದಿವಸ ಜಮಖಂಡಿ, ಅಥಣಿ, ಮುಧೋಳದಲ್ಲಿ ಗೂಂಡಾ ಜನರು ದೌರ್ಜನ್ಯ ನಡೆಸಿದರು. ಕೋಲ್ಹಾಪೂರ ಮುಂತಾದ ಗಡಿ ಭಾಗಗಳಿಂದ ಕನ್ನಡಿಗರು ಅಲ್ಲಿಯ ಮರಾಠಿಗರ ದೌರ್ಜನ್ಯಕ್ಕೊಳಗಾಗಿ ನಮ್ಮಲ್ಲಿಗೆ ವಲಸೆ ಬಂದ ನಂತರ ಸ್ಥಳೀಯ ಜನರು ಇಲ್ಲಿ ವಿಧ್ವಂಸಕ ಕಾರ್ಯಗಳನ್ನು ನಡೆಸಿದರು. ಗಲಾಟೆ ಪ್ರಾರಂಭವಾಗಿದ್ದು ಸರ್ಕಾರಕ್ಕೆ ತಿಳಿದಕೂಡಲೇ ತಕ್ಕ ಪೊಲೀಸ್ ಬಂದೋಬಸ್ತ ಮಾಡಿ ಗುಂಡಾ ಜನರ ಮೇಲೆ ಕ್ರಿಮಿನಲ್ ಕೇಸುಗಳನ್ನು ಹಾಕಿ, ನೂರಾರು ಜನರನ್ನು ಬಂಧಿಸಿ ಜೈಲಿನಲ್ಲಿಟ್ಟರು. ಅನಂತರ ನಮ್ಮ ಭಾಗದಲ್ಲಿ ಗುಂಡಾಗಿರಿ ನಡೆದಿಲ್ಲ. ಶಾಸನ-ಸುವ್ಯವಸ್ಥೆ ಈಗ ಸರಿಯಾಗಿದೆ.

ಇನ್ನು ನಮ್ಮ ಭಾಗದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಬೆಳೆ ಬಂದಿದ್ದರು ಸಹ ಶ್ರೀಮಂತರು ಮತ್ತು ದೊಡ್ಡ ದೊಡ್ಡ ರೈತರು ತಮ್ಮ ಜಮೀನಿನಲ್ಲಿ ಬೆಳೆದ ಬೆಳೆಯ ಬಗ್ಗೆ ಡಿಕ್ಲರೇಷನ್ ಕೊಡದೆ ತಾವೇ ಇಟ್ಟುಕೊಂಡಿದ್ದರು. ನಮ್ಮ ಆಹಾರ ಮಂತ್ರಿಗಳು ಅದನ್ನೆಲ್ಲಾ ಜಪ್ತಿ ಮಾಡಿಸಿ ಸರ್ಕಾರಕ್ಕೆ ತೆಗೆದುಕೊಂಡು ಬಡವರಿಗೆ

ವಿತರಣೆ ಮಾಡುವವರಿದ್ದಾರೆ. ಈ ರೀತಿ ಜಪ್ತಿ ಮಾಡಿದ ಧಾನ್ಯವನ್ನು ಸೊಸೈಟಿಗಳ ಮೂಲಕ ಮತ್ತು ನ್ಯಾಯಬೆಲೆ ಅಂಗಡಿಗಳ ಮೂಲಕ ಹಂಚುವುದರಿಂದ ಜನರ ಆಹಾರ ಕೊರತೆ ನೀಗಿಸುವ ಕಾರ್ಯವನ್ನು ಸರ್ಕಾರ ನಡೆಸಿದೆ. ನಮ್ಮ ರಾಜ್ಯಪಾಲರ ಭಾಷಣದಲ್ಲಿ ಕಾಣಿಸಿದಂಥ ಎಲ್ಲ ಸಂಗತಿಗಳು ನಿಜವಾಗಿದ್ದು, ನಮ್ಮ ರಾಜ್ಯದಲ್ಲಿ ಪ್ರಜಾಸತ್ತೆಗೆ ಯಾವ ರೀತಿಯಿಂದಲೂ ಧಕ್ಕೆ ಬಂದಿಲ್ಲ. ಎಲ್ಲವೂ ಸುಸೂತ್ರವಾಗಿ ಸಾಗಿದೆ. ನಮ್ಮ ರಾಜ್ಯದಲ್ಲಿ ಸಮಾಜವಾದವನ್ನು ಜಾರಿಗೆ ತರಲು ಸರ್ಕಾರ ತನ್ನ ಶಕ್ತಿ ಮೀರಿ ಪ್ರಯತ್ನ ಮಾಡುವುದಕ್ಕೆ ಹೊರಟಿದೆ. ಆದ್ದರಿಂದ ನಾನು ರಾಜ್ಯಪಾಲರ ಭಾಷಣದ ಬಗ್ಗೆ ತಂದಿರುವ ವಂದನಾ ನಿರ್ಣಯವನ್ನು ತುಂಬಾ ಸಂತೋಷದಿಂದ ಸ್ವಾಗತಿಸುತ್ತೇನೆ. ಜೈ ಹಿಂದ್.

## ವಿಜಾಪೂರ ಜಿಲ್ಲೆಗೆ ಸಮರ್ಪಕ ಗೊಬ್ಬರ ವಿತರಣೆಯಾಗಬೇಕು

### 9ನೇ ಮಾರ್ಚ 1974

ಶ್ರೀ ಪಿ. ಎಂ. ಬಾಂಗಿ (ಜಮಖಂಡಿ)– ಮಾನ್ಯ ಅಧ್ಯಕ್ಷಣೀಯರೇ, ಬಿಜಾಪುರ ಜಿಲ್ಲೆಯ 11 ತಾಲೂಕುಗಳ ಪೈಕಿ ಜಮಖಂಡಿ, ಮುಧೋಳ, ಬೀಳಗಿ, ಈ ಮೂರು ತಾಲೂಕುಗಳಲ್ಲಿ ಘಟಪ್ರಭಾ ಲೆಫ್ಟ್ ಬ್ಯಾಂಕ್ ಕೆನಾಲ್‌ದಿಂದ ನೀರಾವರಿಯಾಗುತ್ತಿದೆ. ಅದೇ ಪ್ರಕಾರ ಕೃಷ್ಣಾ ನದಿಯು ಬಲದಂಡೆ ಮೇಲೆ ಯಾತ ನೀರಾವರಿಯಿಂದ ಕೆಲವು ಕಡೆ ನೀರಾವರಿಯಾಗುತ್ತಿದೆ. ಮೊಟ್ಟಮೊದಲು 1956ರ ಪೂರ್ವದಲ್ಲೇ ಘಟಪ್ರಭಾ ಲೆಫ್ಟ್ ಬ್ಯಾಂಕ್ ಕೆನಾಲ್‌ದಿಂದ ಈ ಮೂರು ತಾಲೂಕುಗಳಲ್ಲಿ ನೀರಾವರಿಯಾಗುತ್ತಿದ್ದು ಇದರಿಂದ 19,500 ಹೆಕ್ಟೇರು ಭೂಮಿಗೆ ನೀರು ಸಿಗುತ್ತಿದೆ. ಅದೇ ಪ್ರಕಾರ ಕೃಷ್ಣಾ ನದಿ ಬಲದಂಡೆಯಲ್ಲಿ 3,600 ಹೆಕ್ಟೇರ್ ನೀರಾವರಿಯಾಗುತ್ತಿದೆ. ಈ 3 ತಾಲೂಕುಗಳಿಗೆ ನೈಟ್ರೋಜಿನಸ್ ಫರ್ಟಿಲೈಸರ್ 14 ಸಾವಿರ ಟನ್ ಪ್ರತಿವರ್ಷ ಬೇಕಾಗುತ್ತದೆ ಎಂದು ಇಲಾಖೆ ಅಧಿಕಾರಿಗಳು ರಿಪೋರ್ಟ ಕಳುಹಿಸಿರುತ್ತಾರೆ. ಕಳೆದ ವರ್ಷ 1768 ಟನ್ ಫರ್ಟಿಲೈಸರ್ ಅನ್ನು ಮಾತ್ರ ಈ ತಾಲೂಕುಗಳಿಗ ಸರ್ಕಾರದ ಕಡೆಯಿಂದ ಸಪ್ಲೈ ಆಗಿದೆ. ಇದು ಬಹಳ ಕಡಿಮೆ. ಈ 3 ತಾಲೂಕುಗಳಿಗೆ ಸರ್ಕಾರದವರು ಸಾಕಷ್ಟು ಗೊಬ್ಬರವನ್ನು ಕೊಡುವುದು ಅವಶ್ಯಕ. ಸಾಕಷ್ಟು ಗೊಬ್ಬರವನ್ನು ಕೊಟ್ಟರೆ

ಫುಡ್ ಗ್ರೈನ್ಸ್ ಅನ್ನು ದೊಡ್ಡ ಪ್ರಮಾಣದಲ್ಲಿ ಈ ತಾಲೂಕುಗಳು ಉತ್ಪನ್ನ ಮಾಡಲಿಕ್ಕೆ ಸಾಧ್ಯವಿದೆ. ನಮ್ಮಲ್ಲಿ ಬಹಳ ದೊಡ್ಡ ಪ್ರಮಾಣದಲ್ಲಿ ಗೊಂಜಾಳ ಬೆಳೆಯುತ್ತಿದೆ. ಇದಕ್ಕೆ ಸಂಬಂಧಪಟ್ಟ ಒಂದು ಫ್ಯಾಕ್ಟರಿ ಹಾಕಬೇಕೆಂದು ಒಂದು ಕಮಿಟಿ ಸ್ಥಾಪಿತವಾಗಿದೆ. ಸರ್ಕಾರದವರು ಇಡೀ ರಾಜ್ಯಕ್ಕೆ ಕಾರ್ಡುಗಳ ಮೂಲಕ ಫರ್ಟಿಲೈಸರ್ಸ್ ಕೊಡುತ್ತಾರೆಂದು ಈ ಪೂರ್ವದಲ್ಲಿ ಸಾರಿದ್ದಾರೆ. ಇದರಲ್ಲಿ ಬೋಗಸ್ ಕಾರ್ಡುಗಳ ಉಪಯೋಗ ಆಗದಂತೆ ನೋಡಿಕೊಳ್ಳಬೇಕು. ನೀರಾವರಿ ಭೂಮಿಯನ್ನು ಯಾರು ಹೊಂದಿದ್ದಾರೋ ಅಂಥವರಿಗಷ್ಟೇ ಕಾರ್ಡುಗಳನ್ನು ಕೊಡಬೇಕು. ಖುಷ್ಕಿ ಜಮೀನು ಇರುವವರಿಗೆ ಕಾರ್ಡುಗಳನ್ನು ಕೊಡಬಾರದು. ಪ್ರತಿಯೊಂದು ಜಮೀನಿಗೆ ಹೋಗಿ, ನೀರಾವರಿ ಎಷ್ಟು ಇದೆ ಎನ್ನುವ ತನಿಖೆ ಮಾಡಿ, ಫರ್ಟಿಲೈಸರ್ ಕಾರ್ಡುಗಳನ್ನು ಕೊಡತಕ್ಕದ್ದು ಒಳ್ಳೆಯದು. ನೈಟ್ರಾಜಿನಸ್ ಗೊಬ್ಬರದ ಅಭಾವದಿಂದ ಈ 3 ತಾಲೂಕುಗಳ ರೈತರಿಗೆ ಬಹಳ ತೊಂದರೆಯಾಗಿದೆ. ಆದ್ದರಿಂದಲೇ ನಾನು ಈ ನಿರ್ಣಯವನ್ನು ಕಳುಹಿಸಿದ್ದೇನೆ. ಈ ಬಗ್ಗೆ ಸರ್ಕಾರದವರು ಪೂರ್ಣ ವಿಚಾರ ಮಾಡಿ, ಈ ಮೂರೂ ತಾಲೂಕುಗಳಿಗೆ ಬೇಕಾಗುವ ಫರ್ಟಿಲೈಸರ್ ಅನ್ನು ಕೊಡಬೇಕು ಎಂದು ವಿನಂತಿ ಮಾಡಿಕೊಂಡು ನನ್ನ ಠರಾವನ್ನು ಇಟ್ಟಿದ್ದೇನೆ.

## ಮತಕ್ಷೇತ್ರಕ್ಕೆ ಸಂಬಂಧಿಸಿದ ಪ್ರಶ್ನೆಗಳು

### 12ನೇ ಮಾರ್ಚ 1974

**Sri P. M. Bangi (Jamkhandi)**– Will the Minister for Industries and Parliamentary Affairs be pleased to state-

a) whether 10 Kgs. of Cones and 5 Kgs. of Hanks of 60 counts were allotted to each powerloom owner producing coloured cloth in Jamkhandi taluka during June and July, 1973.

b) whether it is a fact that all powerloom owners excepting 4 or 5 owners of Rabakavi, Banahatti, Rampur have sold the said yarn to some merchants of Ichalakaranji in Maharshtra or otherwise;

c) whether it is a fact that yarn allotted to one powerloom owner at Banahatti and at Belgaum was sized by the Police when it was on way to Ichalakaranji in Maharashtra;

d) whether it is a fact that every powerloom owner got a profit of Rs. 100 to Rs.150 on every powerloom by the sale of the yarn either outside or inside the State;

e) whether the Government is aware that the Textile Commissioner has banned the production of coloured cloth on powerlooms;

f) whether the Government is aware that the yarn was allotted to powerloom owners unconditionally and without restricting them to produce only white cloth on powerloom;

g) whether the Government has enquired and taken steps against powerloom owners for selling the allotted yarn quota in black market;

h) if not, the reasons for the same;

i) the number of powerlooms in Jamkhandi taluka and the quantum of yarn allotted to them in June and July 1973?

Sri S.M. Krishna (Minister for Industries and Parliamentary Affairs)

a) Yes. An ad-hoc allotment was made for production of cloth only during July 1973.

b) Two cases of alleged sale of yarn from Belgaum and Banahatti to Ichalakaranji in Maharashtra are booked by the Police.

c) Yes.

d) Government are not aware of this.

e) Yes.

f) Yes. Restrictions to produce white cloth could not be enforced in view of stay order of the Karnataka High Court against the ban on production of coloured cloth.

g) Investigation is under progress in respect of the cases mentioned at (b) above.

h) Does not arise in view of reply to clause (g)

i) Jamkhandi taluka - 1,255 powerlooms - 15 Kgs. of yarn per powerloom was allotted during July, 1973.

**ಶ್ರೀ ಪಿ. ಎಂ. ಬಾಂಗಿ–** ರಬಕವಿಯಲ್ಲಿ ಪವರ್ ಲೂಂ ಓನರ್ಸ್ ಸುಮಾರು 30 ಜನರು ಇದ್ದಾರೆ. 60 ಕೌಂಟಿನ ಎರ್ಡುರ್ ಕೇಸುಗಳ ಇನ್‌ವೆಸ್ಟಿಗೇಶನ್ ನಡೆದಿದೆಯೆಂದಿದ್ದೀರಿ. ಉಳಿದ ಪವರ್‌ಲೂಮಿನವರು 60 ಕೌಂಟಿನ ನೂಲನ್ನು ಏನು ಮಾಡಿದ್ದಾರೆಂದು ತಮ್ಮ ಇಲಾಖೆಯವರು ಕೇಸ್ ಹಾಕಿದ್ದಾರೆಯೇ?

**ಶ್ರೀ ಎಸ್.ಎಂ. ಕೃಷ್ಣ–** ಯಾವ್ಯಾವಾಗ ದೂರುಗಳು ಬರುತ್ತವೆ, ಆಗ ನಮ್ಮ ಇಲಾಖೆಯವರು ವಿಚಾರಣೆ ಮಾಡುತ್ತಾರೆ. ಈಗಾಗಲೇ ಎರಡು ಕೇಸುಗಳನ್ನು ಹಿಡಿದಿದ್ದಾರೆ. ಈಚಲಕರಂಜಿಗೆ ಹೋಗುತ್ತಿದ್ದ ನೂಲನ್ನು ಹಿಡಿದು ಅದರ ಬಗ್ಗೆ ಪೋಲೀಸ್ ತನಿಖೆ ನಡೆದು ಕೇಸ್ ಕೂಡ ದಾಖಲು ಮಾಡಿದ್ದಾರೆ. ಬಾಕಿ ಇದ್ದ ನೂಲನ್ನು ಅವರು ಉಪಯೋಗಿಸಿದ್ದಾರೆ.

**ಶ್ರೀ ಪಿ. ಎಂ. ಬಾಂಗಿ–** ಅಲ್ಲಿ 80 ಕೌಂಟಿನ ನೂಲು ಉಪಯೋಗವಾಗುತ್ತಿದೆ. 60 ಕೌಂಟಿನ ನೂಲು ಉಪಯೋಗಿಸುತ್ತಾ ಇಲ್ಲ. ಆದ್ದರಿಂದ ತಮ್ಮ ಇಲಾಖೆಯವರು ವಿಚಾರಣೆ ಮಾಡಿದ್ದಾರೆಯೇ?

**ಶ್ರೀ ಎಸ್.ಎಂ. ಕೃಷ್ಣ–** ಆಗಿಂದಾಗ್ಗೆ ನಾವು ವಿಚಾರಣೆ ಮಾಡುತ್ತಿದ್ದೇವೆ.

## ಮತಕ್ಷೇತ್ರಕ್ಕೆ ಸಂಬಂಧಿಸಿದ ಪ್ರಶ್ನೆಗಳು

### 13ನೇ ಮಾರ್ಚ 1974

**Sri P. M. Bangi (Jamkhandi)-** Will the Minister for Labour and Tourism be pleased to state:-

a) whether the powerloom owners of Rabakavi, Banahatti, Rampur, Mahalingapur, Jamkhandi have obtained L.P. Licence in the names of different members of their families

and have installed them in a common shed by designating 4 powerlooms as owned by a single member of the family;

b) if so, the action taken by Government against such person who, with a view to circumvent the provisions of Factory Act, are showing that they have engaged less than 10 labourers and to escape from payment of excise duty;

c) whether it is a fact that they have not maintained any register showing the names and number of labourers engaged by them: whether representations were made by handloom weavers and their representatives to the Minister for Labour during the year 1972 to issue notification under Section 85 (1) of the Factories Act and that no action is taken so far;

d) the steps taken by the Government to compel the powerloom owners to maintain regular register of the number and names of labourers engaged and the wages paid by them and the facilities accorded to labourers as per labour laws?

Sri S.M. Yahya (Minister for Labour and Tourism)

a) A survey has been undertaken and it is in progress.

b) Powerlooms engaging less than 10 workers do not come within the purview of the Factories Act, 1984.

The allegation regarding evasion of payment of excise duty requires verification by the Central Excise authorities.

c) Yes. A representation has been received from the Akhila Karnataka Powerloom and Handloom Karmikara Sangha, Bangalore and the Department was directed to take up survey of the powerloom industry.

d) A proposal to issue a notification under Section 85 of the Factories Act is under the consideration of Government. After issue of the proposed notification, even the powerloom owners engaging less than 10 workers would be bound to maintain registers required under this Act.

ಶ್ರೀ ಪಿ. ಎಂ. ಬಾಂಗಿ– (ಅ) ಪ್ರಶ್ನೆಗೆ ಉತ್ತರವಾಗಿ ಸರ್ವೆ ಮಾಡಲಾಗಿದೆಯೆಂದು ಹೇಳಿದ್ದೀರಿ. ಇದನ್ನು ಯಾವಾಗ ಮಾಡಿದಿರಿ, ಅದು ಯಾವ ಮಟ್ಟಕ್ಕೆ ಬಂದಿದೆ. ಅದರ ಬಗ್ಗೆ ಮಾಹಿತಿ ಹೇಳುತ್ತೀರಾ?

ಶ್ರೀ ಎಸ್.ಎಂ. ಯಾಹ್ಯಾ– 27.2.1973 ರಲ್ಲಿ ಸರ್ವೆಗೆ ಆರ್ಡರ್ ಮಾಡಲಾಗಿದೆ.

ಶ್ರೀ ಪಿ. ಎಂ. ಬಾಂಗಿ– (ಸಿ) ಪ್ರಶ್ನೆಗೆ ಉತ್ತರ ಕೊಡುತ್ತಾ ಅಖಿಲ ಕರ್ನಾಟಕ ವಿದ್ಯುತ್ ಮಗ್ಗದವರಿಂದ ಮನವಿ ಬಂದಿದೆಯೆಂದು ಹೇಳಿದಿರಿ. ಅದು ಎಂದು ಬಂದಿದೆ? ಇಂದಿನವರೆಗೂ ಅದರ ಸಂಬಂಧವಾಗಿ ಏನೂ ಕ್ರಮ ತೆಗೆದುಕೊಳ್ಳದೆ ಏಕೆ ತಡವಾಗಿದೆ?

ಶ್ರೀ ಎಸ್.ಎಂ. ಯಾಹ್ಯಾ– ನವೆಂಬರ್ 1972 ರಲ್ಲಿ ಮನವಿ ಬಂದಿದೆ. ಅದರ ನಂತರ ಸರ್ವೆ ಮಾಡುವುದಕ್ಕೆ ಸಂಬಂಧಪಟ್ಟ ಇಲಾಖೆಗೆ ಕಳುಹಿಸಿದೆ.

ಶ್ರೀ ಪಿ. ಎಂ. ಬಾಂಗಿ– ಬಹಳ ದೊಡ್ಡ ಪ್ರಮಾಣದಲ್ಲಿ ಪವರ್ ಲೂಮಗಳನ್ನು ಇಟ್ಟವರು, ಫ್ಯಾಕ್ಟರಿ ಆ್ಯಕ್ಟ್ ಕೆಳಗೆ ಬಾರದ ಹಾಗೆ ಕೆಲಸವನ್ನು

ಮಾಡುತ್ತಿದ್ದಾರೆ ಎಂಬ ಬಗ್ಗೆ ಸರ್ವೆ ನಡೆಯುತ್ತಿದೆ. ಫ್ಯಾಕ್ಟರಿ ಆ್ಯಕ್ಟ್ 85 (1) ನೇ ಕಲಂ ಪ್ರಕಾರ ಈ ವಿಚಾರದಲ್ಲಿ ಒಂದು ನೋಟಿಫಿಕೇಷನ್ನನ್ನು ಇನ್ನೂ ಹೊರಡಿಸಬೇಕಾಗಿದೆಯೆಂದು ಹೇಳಿದೆ. ಅದನ್ನು ಯಾವಾಗ ಹೊರಡಿಸುತ್ತೀರಿ?

**ಶ್ರೀ ಎಸ್.ಎಂ. ಯಾಹ್ಯಾ**– ಸೆಕ್ಷನ್ 85(1) ರ ಪ್ರಕಾರ ಕೆಲವು ಮಗ್ಗಗಳವರು 10 ಕಾರ್ಮಿಕರಿಗಿಂತ ಕೆಳಗೆ ಇರುವುದಕ್ಕೆ ಬದಲು ಈಗಿನ ಪ್ರೊಪೋಜಲ್ ಏನಿದೆಯೋ ಅದನ್ನು ಲಾ ಡಿಪಾರ್ಟ್‌ಮೆಂಟಿಗೆ ಸ್ಕ್ರೂಟನಿಗಾಗಿ ಕಳುಹಿಸಿದೆ.

**ಶ್ರೀ ಎಂ.ಎಸ್. ಕೃಷ್ಣನ್**– ತಾವು ಸರ್ವೆ ಮಾಡುತ್ತೇವೆಂದು ಹೇಳಿದ್ದೀರಿ. ಅದರ ವ್ಯಾಪ್ತಿ ಏನು? ಅದನ್ನು ಸರ್ವೆ ಮಾಡುವವರು ಯಾರು?

**ಶ್ರೀ ಎಸ್.ಎಂ. ಯಾಹ್ಯಾ**– ಇನ್‌ಸ್ಪೆಕ್ಟರ್ ಆಫ್ ಫ್ಯಾಕ್ಟರೀಸ್ ಎಂದು ಹೇಳಿದ್ದೇವೆ. ಅದು ಯಾವ ರೀತಿಯಲ್ಲಿ ನಡೆಯುತ್ತಿದೆ, ಎಷ್ಟು ಪ್ರಮಾಣದಲ್ಲಿ ನಡೆಯುತ್ತಿದೆಯೆಂಬುದು ಸರ್ವೆ ಕಾರ್ಯದಿಂದ ಗೊತ್ತಾಗಬೇಕು. ಚಿಕ್ಕ ಚಿಕ್ಕ ಪವರ್‌ಲೂಮ ಇಟ್ಟುಕೊಂಡಿರತಕ್ಕವರು ಈ ರೀತಿ ಬೇರೆ ಬೇರೆ ಹೆಸರಿನಲ್ಲಿ ಕಾರ್ಖಾನೆಗೆ ಯಾವ ಹೆಸರನ್ನೂ ಕೊಡದೆ ಫ್ಯಾಕ್ಟರಿ ಕಾನೂನು ಪ್ರಕಾರ ಪವರ್ ಬಳಕೆ ಮಾಡುತ್ತೇವೆಂದು ಹೇಳಿದರೆ ಅದು ಆಗುವುದಿಲ್ಲ. 10 ಕ್ಕಿಂತ ಹೆಚ್ಚು ಕಾರ್ಮಿಕರು ಇದ್ದರೆ ಅದು "ಫ್ಯಾಕ್ಟರಿ". ಅದಕ್ಕಿಂತ ಕಡಿಮೆ ಇದ್ದರೆ, ಅಲ್ಲಿ ಬೇರೆ ಬೇರೆ ಹೆಸರಿನಲ್ಲಿ ಪರವಾನಿಗೆ ಇದ್ದರೆ ಅಂತಹವುಗಳ ಬಗ್ಗೆ ಅಲಿಗೇಷನ್ಸ್ ಬಂದಿರುವುದು ಸರ್ಕಾರದ ಮುಂದೆ ಇದೆ. ಅದಕ್ಕಾಗಿ ಸೆಕ್ಷನ್ 85 ರ ಪ್ರಕಾರ ನೋಟಿಫೈ ಮಾಡಬೇಕಾಗಿರುವುದರಿಂದ ಅದನ್ನು ಈಗ ಲಾ ಡಿಪಾರ್ಟ್‌ಮೆಂಟಿಗೆ ಕಳುಹಿಸಿದೆ.

**ಶ್ರೀ ಜೆ.ಎಲ್. ಕಬಾಡಿ**– ನೀವು ಹೇಳಿದ ಹಾಗೆ ವಿದ್ಯುತ್ ಮಗ್ಗದ ಉದ್ಯಮಕ್ಕೆ ಮಾತ್ರ ಇಷ್ಟೇ ಎಂದು ನಿಗದಿ ಮಾಡುತ್ತೀರಾ ಅಥವಾ ಎಲ್ಲದಕ್ಕೂ ಒಂದೇ ರೀತಿಯಾಗಿ ಮಾಡುತ್ತೀರಾ?

ಶ್ರೀ ಎಸ್.ಎಂ. ಯಾಹ್ಯಾ– ಫ್ಯಾಕ್ಟರಿ ಅಂದರೆ 10 ಮಂದಿಗಿಂತ ಹೆಚ್ಚಿಗೆ ನೇಮಕ ಮಾಡಿಕೊಂಡರೆ ಅದು ಫ್ಯಾಕ್ಟರಿ ಡೆಫಿನಿಷನ್ನಿನಲ್ಲಿ ಬರುತ್ತದೆ. ಆಗ ಇದರ ಆ್ಯಕ್ಟ್, ಕಾನೂನುಗಳು ಅದಕ್ಕೂ ಅನ್ವಯಿಸುತ್ತದೆ.

ಶ್ರೀ ಪಿ. ಎಂ. ಬಾಂಗಿ– ಸರ್ವೆ ಮಾಡಿದ ನಂತರ ಈ ಕಾಯ್ದೆ ಪ್ರಕಾರ ಯಾರ್‍ಯಾರು ರಜಿಸ್ಟರ್ ಮಾಡಿದ್ದಾರೆ, ಅದರ ಬಗ್ಗೆ ಏನು ಕ್ರಮವನ್ನು ತೆಗೆದುಕೊಳ್ಳುತ್ತೀರಾ?

ಶ್ರೀ ಎಸ್.ಎಂ. ಯಾಹ್ಯಾ– ಕಾನೂನು ಪ್ರಕಾರ ಯಾರು ಯಾವುದನ್ನು ರಿಜಿಸ್ಟರ್ ಮಾಡುತ್ತಾರೋ ಅದರ ಬಗ್ಗೆ ಕ್ರಮ ತೆಗೆದುಕೊಳ್ಳುತ್ತೇವೆ. ಇಲ್ಲದಿದ್ದರೆ ಆ ಪ್ರಶ್ನೆ ಬರುವುದಿಲ್ಲ. ಇದರ ನಂತರ ಕಾನೂನು ಪ್ರಕಾರ ಇದರ ಬಗ್ಗೆ ಒಂದು ನೋಟಿಫಿಕೇಷನ್ ಮಾಡುವುದು ಸರ್ಕಾರದ ನೀತಿ.

## ಪಂಚಾಯತ ಮತ್ತು ತಾಲೂಕಾ ಬೋರ್ಡ ಚುನಾವಣೆ ಮೇಲಿನ ಚರ್ಚೆ

### 19ನೇ ಮಾರ್ಚ 1974

ಶ್ರೀ ಪಿ. ಎಂ. ಬಾಂಗಿ (ಜಮಖಂಡಿ)– ಈ ವಿಧೇಯಕವನ್ನು ಅನುಮೋದಿಸುತ್ತಾ ಕೆಲವು ವಿಷಯಗಳನ್ನು ನಾನು ಹೇಳಬಯಸುತ್ತೇನೆ. ಈ ಬಿಲ್ಲಿನ ಒಂದನೇ ಕಲಮಿನ 3ನೇ ಪ್ಯಾರಾದಲ್ಲಿ 'It shall remain in force up to and inclusive of 28th February 1975 or much earlier date as the State Government may, by notification' ಎಂದು ಇದೆ. ಆದುದರಿಂದ ತಾವು ಕಡ್ಡಾಯವಾಗಿ ಫೆಬ್ರವರಿ 28ನೆ ತಾರೀಖಿನೊಳಗೆ ಇಲೆಕ್ಷನ್ ಮಾಡಬಾರದು ಎಂದು ಈ ಬಿಲ್ಲಿನ ಉದ್ದೇಶವಲ್ಲ. ನಿರ್ದಿಷ್ಟ ದಿನಾಂಕದೊಳಗೆ ಒಂದು ನೋಟಿಫಿಕೇಷನ್ ತಂದು ಕೂಡಲೇ ಇಲೆಕ್ಷನ್ ಮಾಡಬೇಕು. ಈಗ ಹಳ್ಳಿಯ ಜನಗಳಲ್ಲಿ ಹಳೆಯ ಪಂಚಾಯ್ತಿದಾರರು ಬೇಡವಾಗಿದ್ದಾರೆ. ಅವರನ್ನೇ 25

ಫೆಬ್ರವರಿ 1974 ರ ತನಕ ಮುಂದುವರಿಸಿ ಇಲೆಕ್ಷನ್‌ಅನ್ನು ಮುಂದೆ ಹಾಕುವ ಬದಲು ಈ ಬಿಲ್ಲಿನಲ್ಲಿ ತಮಗೆ ಇರತಕ್ಕ ಅಧಿಕಾರವನ್ನು ಉಪಯೋಗಿಸಿ ನೋಟಿಫಿಕೇಷನ್ ಮುಖಾಂತರ ಒಂದು ತಾರೀಖನ್ನು ಆದಷ್ಟು ಜಾಗ್ರತೆ ಗೊತ್ತುಮಾಡಿ ಇಲೆಕ್ಷನ್ ನಡೆಸಿ ಈಗ ಇರುವುದನ್ನು ಮುಕ್ತಾಯಗೊಳಿಸಿರಿ. ಸಾಕಷ್ಟು ತರುಣರು, ಸಿದ್ಧರಾಗಿದ್ದಾರೆ. ಅವರಿಗೆ ಆದಷ್ಟು ಬೇಗ ಇಲೆಕ್ಷನ್ ಆಗಬೇಕು ಎಂಬ ಹಂಬಲವಿದೆ. 3ನೇ ಕಲಮಿನಲ್ಲಿ 'during the period this Act is in force, no general election to any Panchayat or Taluka Board and no bye-election to fill any casual vacancy in Panchayat or Taluka Board shall be held' ಎಂದು ಬರೆದಿದ್ದೀರಿ. 4ನೇ ಕಲಂನಲ್ಲಿ ಡಿ.ಸಿ. ಇಲೆಕ್ಷನ್ ಮಾಡಬಹುದು ಎಂದು ಇದೆ. ಇದು ಒಂದಕ್ಕೊಂದು ಪರಸ್ಪರ ವಿರೋಧವಾಗಿವೆ. ಸೂಕ್ತ ತಿದ್ದುಪಡಿ ತಂದು ಇಲೆಕ್ಷನ್‌ಅನ್ನು ಆದಷ್ಟು ಮಟ್ಟಿಗೆ ನಾಳೆ ಬರುವ ಜೂನ್ ತಿಂಗಳಲ್ಲಿ ಮಾಡಿ ಮುಗಿಸಬೇಕು. ಕಳೆದ ವರ್ಷ ಇಲೆಕ್ಷನ್ ಮಾಡದಿರುವುದಕ್ಕೆ ಕಾರಣಗಳನ್ನು ತಾವು ಹೇಳಿದಿರಿ, ಅದರ ಬಗ್ಗೆ ಕೆಲವರು ಆಕ್ಷೇಪ ಎತ್ತಿದರು. ಕಳೆದ ವರ್ಷ ಇಲೆಕ್ಷನ್ ಮಾಡಲಿಕ್ಕೆ ಏನು ಅಭ್ಯಂತರವಿತ್ತು ಎಂದರೆ ವಿಜಾಪೂರ, ಗುಲ್ಬರ್ಗಾ, ಬೀದರ್ ಈ 3 ಜಿಲ್ಲೆಗಳಲ್ಲಿ ಭೀಕರ ಕ್ಷಾಮ ಬಂದಿತ್ತು. ಮತಗಳನ್ನು ಹಾಕುವಂಥ ಜನರಲ್ಲಿ 100ಕ್ಕೆ 50 ರಷ್ಟು ಜನರು ಕೂಲಿಗಾಗಿ ಮಹಾರಾಷ್ಟ್ರಕ್ಕೆ ಮತ್ತು ಬೇರೆ ಕಡೆಗೆ ಹೋಗಿದ್ದರು. ಊರಲ್ಲಿ ಇರಲಿಲ್ಲ. ಈ ಪ್ರಕಾರ ಭೀಕರ ಬರಗಾಲ ಇದ್ದುದರಿಂದ ಇಲೆಕ್ಷನ್‌ಅನ್ನು ತಾವು ಮುಂದಕ್ಕೆ ಹಾಕಿದ್ದೀರಿ. ಅದು ಸರಿ ಇದೆ. ಈಗ ಸಕಾಲವಾಗಿದೆ. ಮಳೆಯಾಗಿದೆ ಉತ್ಕೃಷ್ಟ ಬೆಳೆ ಬಂದಿದೆ. ಜನಗಳು ತಿರುಗಿ ಬಂದು ವಾಸ ಮಾಡುತ್ತಿದ್ದಾರೆ. ಹೊಸ ಯುವಕರು, ತರುಣರು, ಬಿಸಿ ರಕ್ತದವರು ಇದ್ದಾರೆ. ಹೊಸ ಪ್ರತಿನಿಧಿಗಳು ಬರಬೇಕು. ಪಂಚಾಯ್ತಿ, ತಾಲೂಕಾ ಬೋರ್ಡ್‌ಗಳಲ್ಲಿ ಸ್ಪರ್ಧಿಸಲು ಸಾಕಷ್ಟು ಉಮೇದುವಾರರು ಸಿದ್ಧರಾಗಿದ್ದಾರೆ. ಇಂಥ ಪರಿಸ್ಥಿತಿಯಲ್ಲಿ ಹೊಸ ನೋಟಿಫಿಕೇಷನ್ ತಂದು ಇಲೆಕ್ಷನ್ ಮಾಡಬೇಕು. ತುರ್ತಕ್ಕೆ ಈ ಕಾಯ್ದೆ ಪಾಸ್ ಮಾಡಬೇಕಾಗಿದೆ. ಇದಕ್ಕೆ ನಾನು ಪೂರ್ಣ ಬೆಂಬಲ ಕೊಡುತ್ತೇನೆ ಎಂದು ಹೇಳಿ ಅಧ್ಯಕ್ಷರಿಗೆ ವಂದಿಸಿ ನನ್ನ ನಾಲ್ಕು ಮಾತುಗಳನ್ನು ಮುಗಿಸುತ್ತೇನೆ.

# ನ್ಯಾಯಾಲಯದ ಆಡಳಿತ ವ್ಯವಸ್ಥೆಯ ಕುರಿತ ಚರ್ಚೆ

## 6ನೇ ಏಪ್ರೀಲ್ 1974

ಶ್ರೀ ಪಿ. ಎಂ. ಬಾಂಗಿ (ಜಮಖಂಡಿ)– ಮಾನ್ಯ ಉಪಾಧ್ಯಕ್ಷರೇ, ಈ ದಿವಸ ಕಾನೂನು ಮಂತ್ರಿಗಳು ಅಡ್ಮಿನಿಸ್ಟ್ರೇಷನ್ ಆಫ್ ಜಸ್ಟೀಸ್, ಅರ್ಬನ್ ಡೆವಲಪ್‌ಮೆಂಟ್ ಬಗ್ಗೆ ಇಟ್ಟಿರುವ ಬೇಡಿಕೆಗಳನ್ನು ಸಂಪೂರ್ಣವಾಗಿ ಸಮರ್ಥಿಸುತ್ತಾ, ಮೊದಲು ಅಡ್ಮಿನಿಸ್ಟ್ರೇಷನ್ ಆಫ್ ಜಸ್ಟೀಸ್ ಬಗ್ಗೆ ಕೆಲ ಸಲಹೆಗಳನ್ನು ಹೇಳಬಯಸುತ್ತೇನೆ. ಹೈಕೋರ್ಟ್, ಸಿವಿಲ್ ಮತ್ತು ಸೆಷನ್ಸ್ ಕೋರ್ಟ್ಸ್, ಸ್ಮಾಲ್ ಕಾಸೆಸ್ ಕೋರ್ಟ್ಸ್, ಕ್ರಿಮಿನಲ್ ಕೋರ್ಟ್ಸ್, ಅಡ್ಮಿನಿಸ್ಟ್ರೇಟರ್ ಜನರಲ್ ಅಂಡ್ ಅಫಿಷಿಯಲ್ ಟ್ರಸ್ಟೀ, ಲೀಗಲ್ ಅಡ್ವೈಸರ್ಸ ಕೌನ್ಸಿಲ್ಸ್ ಹೀಗೆ 3 ಕೋಟಿ 43 ಲಕ್ಷ 55 ಸಾವಿರ ರೂಪಾಯಿಗಳ ಬೇಡಿಕೆ ಮಂಡಿಸಿದ್ದಾರೆ. ಸಿವಿಲ್ ಜಡ್ಜ್ ಕೋರ್ಟಿನಲ್ಲಿ ಲ್ಯಾಂಡ್ಸ್, ಸೀಲಿಂಗ್ ಮತ್ತು ರೆಂಟ್ ಬಗ್ಗೆ ಇರುವ ಖಟ್ಲೆಗಳಲ್ಲಿ ಯಾರು ಟೆನೆಂಟ್ ಎಂದು ಚರ್ಚೆ ಮಾಡಿ ನಿರ್ಧರಿಸುವ ಅಧಿಕಾರ ಉಳಿದಿಲ್ಲ. ಆದುದರಿಂದ ಸಿವಿಲ್ ಮತ್ತು ಸೆಷನ್ಸ್ ಕೋರ್ಟ್‌ಗಳ ಬಗ್ಗೆ ಹಿಂದೆ ಬೇಡಿಕೆ ಕೇವಲ 2 ಕೋಟಿ 2 ಲಕ್ಷ ಇದ್ದಾಗ್ಯೂ ಈ ವರ್ಷ 2 ಕೋಟಿ 80 ಲಕ್ಷ ರೂಪಾಯಿಗಳನ್ನು ಹೆಚ್ಚಿಗೆ ಏಕೆ ಬೇಡಿದ್ದಾರೆ?

ಇವತ್ತಿನ ದಿವಸ ಎಷ್ಟೋ ತಾಲೂಕುಗಳಲ್ಲಿ, ಎಲ್ಲೆಲ್ಲಿ ಹೆಚ್ಚು ಗೇಣಿದಾರರು ಇದ್ದಾರೋ ಅಲ್ಲಿನ ಲ್ಯಾಂಡ್ ಟ್ರಿಬ್ಯೂನಲ್‌ಗಳು, ಮುನ್ಸೀಫ್ ಕೋರ್ಟ್‌ನಂತೆ ಕೆಲಸ ಮಾಡುತ್ತಿದ್ದವು. ಈಗ ಅಲ್ಲಿ ಅಧಿಕಾರಿಗಳು, ತಹಶೀಲ್ದಾರರು, ಅಸಿಸ್ಟೆಂಟ್ ಕಮೀಷನರ್ ಇದ್ದರೂ ಸಹ ಹೊಸದಾಗಿ 30 ಅಸಿಸ್ಟಂಟ್ ಕಮೀಷನರ್‌ಗಳು ಮತ್ತು 100 ತಹಶೀಲ್ದಾರಗಳನ್ನು ನೇಮಿಸಬೇಕೆಂಬ ಉದ್ದೇಶ ಸರ್ಕಾರಕ್ಕೆ ಇದೆ ಎಂದು ವೃತ್ತ ಪತ್ರಿಕೆಯಲ್ಲಿ ಜಾಹೀರಾತು ಬಂದಿದೆ. ಇಂಥ ಸಂದರ್ಭದಲ್ಲಿ ಕೋರ್ಟ್‌ಗಳನ್ನು ಸರ್ಕಾರದವರು ಕಡಿಮೆ ಮಾಡಬೇಕಾಗುತ್ತದೆ. ಇದನ್ನು ವಿಚಾರಮಾಡಿ ಯಾವ ಯಾವ ಸ್ಥಳಗಳಲ್ಲಿ ಹೆಚ್ಚಿನ ಕೋರ್ಟ್‌ಗಳಿವೆ. ಅವನ್ನು ಕಡಿಮೆ ಮಾಡಬೇಕು. “Justice delayed is Justice denied” ಎಂದು ಏನು ಹೇಳುತ್ತಾರೆ, ಆ ದೃಷ್ಟಿಯಿಂದ ನೋಡಿದರೆ ಮುನ್ಸಿಫ್ ಮತ್ತು ಡಿಸ್ಟ್ರಿಕ್ಟ್ ಕೋರ್ಟ್‌ಗಳಲ್ಲಿ, ಹೈಕೋರ್ಟ್‌ದಲ್ಲಿ ಸಾಕಷ್ಟು ಕೆಲಸ ತುಂಬಿ ಹೋಗಿದೆ.

ಜಮಖಂಡಿಯ ಉದಾಹರಣೆಯನ್ನು ತೆಗೆದುಕೊಂಡರೆ ಸುಮಾರು 700 ಕೇಸ್‌ಗಳು ಪೆಂಡಿಂಗ್ ಇದ್ದು ಕೇವಲ ಒಂದು ಕೋರ್ಟ್ ಕೆಲಸ ಮಾಡುತ್ತಿದೆ. ಈ ಪರಿಸ್ಥಿತಿಯಲ್ಲಿ ಕಳೆದ 5–6 ವರ್ಷಗಳಿಂದ ಹಿಯರಿಂಗ್ ರೀಚ್ ಆಗದೆ ಇದ್ದ ಎಷ್ಟೋ ವ್ಯಾಜ್ಯಗಳು ಇದ್ದು ಬಹಳ ತೊಂದರೆಯಾಗಿದೆ. ಆದುದರಿಂದ ಮುನ್ಸೀಫ್‌ರನ್ನು ತುಂಬಿ ನ್ಯಾಯವನ್ನು ತ್ವರಿತವಾಗಿ ಕೊಡುವಂಥ ಏರ್ಪಾಡು ಮಾಡಬೇಕು ಮತ್ತು ಹೈಕೋರ್ಟ್‌ನಲ್ಲಿ ಕೆಲವು ಸ್ಥಳಗಳು ಖಾಲಿ ಇರುವುದರಿಂದ ಅಂಥ ಸ್ಥಳಗಳಿಗೆ ಜಡ್ಜಸ್‌ನ್ನು ನೇಮಕ ಮಾಡಿ, ಅಲ್ಲಿನ ಹಳೆಯ ರಿಟ್ ಪಿಟಿಷನ್‌ಗಳ ನಿರ್ಣಯವನ್ನು ಕೂಡಲೇ ಮಾಡಬೇಕೆಂದು ಸೂಚಿಸಬಯಸುತ್ತೇನೆ.

ಪ್ರತಿಯೊಂದು ಮುನ್ಸೀಫ್ ಕೋರ್ಟ್‌ದಲ್ಲಿ ಲೈಬ್ರರಿಗಾಗಿ ಸರ್ಕಾರದವರು ಸಾಕಾದಷ್ಟು ಗ್ರ್ಯಾಂಟ್ ಕೊಡುತ್ತಿದ್ದಾರೆ. ಆದರೆ ಗ್ರ್ಯಾಂಟ್ ಸರಿಯಾಗಿ ಉಪಯೋಗವಾಗುವುದಿಲ್ಲ. ಲೈಬ್ರರಿ ಮ್ಯಾನೇಜ್‌ಮೆಂಟ್ ಮಾಡುವ ಕಾರಕೂನನಿಗೆ ಪಗಾರ ಇಲ್ಲ. ಆದುದರಿಂದ ಎಲ್ಲಾ ಹೊಸ ಪುಸ್ತಕಗಳು ಲಾಯರ್‌ಗಳ ಮನೆಗೆ ಹೋಗಿವೆ. ಲೈಬ್ರರಿಯಲ್ಲಿ ಮಹತ್ವದ ಪುಸ್ತಕಗಳು ಇಲ್ಲ. ಪುಸ್ತಕಗಳ ಜೊತೆಗೆ ಮೆಂಟೆನನ್ಸ್ ಗ್ರ್ಯಾಂಟ್‌ನ್ನು ಪ್ರತಿಯೊಂದು ಮುನ್ಸಿಫ್ ಕೋರ್ಟ್‌ಗೆ ಕೊಡಬೇಕೆಂದು ಈ ಸಮಯದಲ್ಲಿ ಸೂಚಿಸಬಯಸುತ್ತೇನೆ.

ನಮ್ಮ ರಾಜ್ಯದಲ್ಲಿ ಲೇಡಿ ನ್ಯಾಯಾಧೀಶರು ಇಂದಿನವರೆಗೂ ನೇಮಕ ಆಗಿಲ್ಲ. ಅದಕ್ಕಾಗಿ ನಮ್ಮ ಸರ್ಕಾರದವರು ಮಹಾರಾಷ್ಟ್ರದಲ್ಲಿರುವಂತೆ ಲೇಡಿ ಮುನ್ಸಿಫ್ ಮತ್ತು ಸಿವಿಲ್ ಜಡ್ಜಸ್‌ನ್ನು ನೇಮಿಸಬೇಕು.

ಮುನ್ಸೀಫರಿಗೆ ಇರಲಿಕ್ಕೆ ರೆಸಿಡೆನ್ಷಿಯಲ್ ಕ್ವಾರ್ಟರ್ಸ್ ಇಲ್ಲ. ಒಂದು ಫೇಸ್ಡ್ ಪ್ರೋಗ್ರಾಂ ಮಾಡಿ ಎಲ್ಲಾ ಮುನ್ಸೀಫರುಗಳಿಗೆ ರೆಸಿಡೆನ್ಷಿಯಲ್ ಕ್ವಾರ್ಟರ್ಸ್‌ಗೆ ವ್ಯವಸ್ಥೆ ಮಾಡಬೇಕೆಂದು ಹೇಳಬಯಸುತ್ತೇನೆ. ಇನ್ನು ಮುನ್ಸೀಫರಿಗೆ ಈಗ ಬಹಳ ಹಳೆಯ ಪೇ ಸ್ಕೇಲ್ ಇದ್ದುದರಿಂದ ಅವರು ಅವರ ಸ್ಟೇಟಸ್‌ಗೆ ಅನುಸಾರವಾಗಿ ಕೆಲಸ ಮಾಡುವುದು ಕಷ್ಟವಾಗಿದೆ. ಆದ್ದರಿಂದ ಪೇ ಸ್ಕೇಲ್ ರಿವೈಸ್ ಮಾಡಿ ಅವರಿಗೆ ಹೆಚ್ಚಿನ ಸಂಬಳ ಭತ್ಯವನ್ನು ಕೊಡಬೇಕೆಂದು ನಾನು ಈ ಸಮಯದಲ್ಲಿ ಸೂಚಿಸಬಯಸುತ್ತೇನೆ.

ಪ್ರತಿಯೊಂದು ಮುನ್ಸೀಫ್ ಕೋರ್ಟಿನಲ್ಲಿ ಹಳೆಯ ಪರ್ನೀಚರ್‌ಗಳು ಇವೆ. ಅದರಲ್ಲಿ ತಗಣಿಗಳು ವಾಸ ಮಾಡುತ್ತಿವೆ. ಹಳೆಯ ಖುರ್ಚಿ-ಟೇಬಲ್‌ಗಳನ್ನು ತೆಗೆದು ಹೊಸ ಫರ್ನೀಚರ್‌ಗಳನ್ನು ಕೊಟ್ಟು, ಅವುಗಳಿಗೆ ಡಿ.ಡಿ.ಟಿ. ಹೊಡೆದು ಯಾವಾಗಲೂ ಸ್ವಚ್ಛವಾಗಿ ಇಡುವ ವ್ಯವಸ್ಥೆ ಮಾಡಿಸಬೇಕು.

ಇನ್ನೊಂದು ಮಹತ್ವದ ವಿಷಯ, ಇನ್ನೂ ಒಂದು ಹೈಕೋರ್ಟ್ ಬೆಂಚ್ ಆಗುವುದು ಅವಶ್ಯವಿದೆ. ಹೈಕೋರ್ಟ್ ಬೆಂಚ್ ಸಧ್ಯಕ್ಕೆ ದಕ್ಷಿಣದ ತುದಿಯಲ್ಲಿ ಬೆಂಗಳೂರಿನಲ್ಲಿ ಇದ್ದ ಮೂಲಕ ಜನಗಳಿಗೆ ದೂರದ ಊರಿನಿಂದ ಇಲ್ಲಿಗೆ ಬಂದು ನ್ಯಾಯ ಪಡೆಯುವುದು ಬಹಳ ತೊಂದರೆಯಾಗುತ್ತದೆ. ಆ ದೃಷ್ಟಿಯಿಂದ ವಿಜಾಪೂರ, ಬೀದರ, ಗುಲ್ಬರ್ಗಾ, ರಾಯಚೂರು, ಬೆಳಗಾವಿ, ಧಾರವಾಡ, ಕಾರವಾರ ಜಿಲ್ಹೆಗಳ ಯಾವತ್ತೂ ಪಕ್ಷಗಾರರಿಗೆ ಅನುಕೂಲವಾಗುವಂತೆ ಮಧ್ಯವರ್ತಿ ಸ್ಥಳದಲ್ಲಿ ಅಂದರೆ ಧಾರವಾಡ ಅಥವಾ ಹುಬ್ಬಳ್ಳಿಯಲ್ಲಿ ಹೈಕೋರ್ಟ್ ಬೆಂಚ ಸ್ಥಾಪನೆ ಮಾಡಬೇಕೆಂದು ಸೂಚಿಸಬಯಸುತ್ತೇನೆ.

ಇಂಜಿನಿಯರಿಂಗ್ ಮತ್ತು ಮೆಡಿಕಲ್ ಕಾಲೇಜ್‌ಗಳಲ್ಲಿ ಪಾಸ್ ಆದಂಥ ಗ್ರಾಜ್ಯುಯೇಟ್ಸ್‌ಗೆ ಸರ್ಕಾರಿ ನೌಕರಿ ಸಿಗುವುದಿಲ್ಲ. ಆದುದರಿಂದ ಹೆಚ್ಚಿನ ವಿದ್ಯಾರ್ಥಿಗಳು ಲಾ ಕಾಲೇಜ್‌ಗಳಲ್ಲಿ ಸೇರುತ್ತಿದ್ದಾರೆ ಮತ್ತು ಪ್ರತಿವರ್ಷ ಜೂನಿಯರ್ ಪ್ಲೀಡರ್ಸ್ ಆಗಿ ಬರುತ್ತಿದ್ದಾರೆ. ಜೂನಿಯರ್ ಪ್ಲೀಡರ್ ಆಗಿ ಎರಡು ಮೂರು ವರ್ಷಗಳ ಕಾಲ ಕೆಲಸವಿಲ್ಲದೆ ಅಡ್ಡಾಡಿ ತಮ್ಮ ಆಯಸ್ಸನ್ನು ಕಳೆಯಲಿಕ್ಕೆ ಹತ್ತಿದ್ದಾರೆ. ಯಾವ ಪ್ರಕಾರ ಎಂ.ಬಿ.ಬಿ.ಎಸ್. ಪಾಸ್ ಮಾಡಿದವರಿಗೆ ಒಂದು ವರ್ಷದವರೆಗೆ ಸರ್ಕಾರದವರು ಸ್ಟೈಪೆಂಡ್ ಕೊಡುತ್ತಾರೆ ಅದೇ ಪ್ರಕಾರ ಜೂನಿಯರ್ ವಕೀಲರಿಗೂ ಸ್ಟೈಪೆಂಡ್ ಕೊಡಬೇಕು.

ಎಕ್ಸಿಕ್ಯೂಟಿವ್ ಆಫೀಸರ್‌ಗಳಾದ ಎ.ಸಿ., ಡಿ.ಸಿ. ಮತ್ತು ತಹಶೀಲ್ದಾರರಿಗೆ ರಿಕಾರ್ಡ ಆಫ್ ರೈಟ್ಸ್ ವಿಷಯದಲ್ಲಿ ನ್ಯಾಯ ಕೊಡುವ ಅಧಿಕಾರವಿದೆ. ವಕೀಲರು ಇಂಥ ಎಗ್ಜಿಕ್ಯುಟೀವ್ ಆಫೀಸರ ಕಡೆಗೆ ಹೋಗುವ ಸಂದರ್ಭ ಬರುತ್ತದೆ. ಅಂತಹ ಒಂದು ಸಂದರ್ಭದಲ್ಲಿ ಅವರು ವಕೀಲರಿಗೆ ಮಾನಹಾನಿ ಮಾಡಿದ್ದಾರೆ ಎಂದು ವಿಜಾಪುರದ ವಕೀಲರು ಕೋರ್ಟಿಗೆ ಬಹಿಷ್ಕಾರ ಹಾಕಿದ್ದಾರೆ. ಆದುದರಿಂದ ಇಂಥ ಅಧಿಕಾರವನ್ನು ತೆಗೆದು ಮುನ್ಸೀಫ್‌ರಿಗೆ ಕೊಡಬೇಕೆಂದು ಸೂಚಿಸಬಯಸುತ್ತೇನೆ.

## ನಗರ ನೈರ್ಮಲ್ಯಕ್ಕೆ ಆದ್ಯತೆ ಕೊಡಿ :

ಇವತ್ತು ನಗರಗಳಲ್ಲಿ ಸೌಕರ್ಯಗಳು ಇದ್ದ ಮೂಲಕ ಹಳ್ಳಿಯ ಜನರು ನಗರಗಳಿಗೆ ಬಂದು ವಾಸ ಮಾಡಹತ್ತಿದ್ದಾರೆ. ನಗರಗಳಲ್ಲಿ ಸೌಕರ್ಯ ಒದಗಿಸುವುದು ಸರ್ಕಾರ ಮತ್ತು ಮುನ್ಸಿಪಾಲ್ಟಿ ಉಭಯತ್ರರ ಜವಾಬ್ದಾರಿ. ಕುಡಿಯುವ ನೀರು, ಇಲೆಕ್ಟ್ರಿಸಿಟಿಯನ್ನು ಕೊಡುವ ವ್ಯವಸ್ಥೆಯಾಗತಕ್ಕದ್ದು. ಆರೋಗ್ಯ ಸೌಕರ್ಯ, ರಸ್ತೆ ಸೌಕರ್ಯವನ್ನು ಮಾಡತಕ್ಕದ್ದು. ಒಳಚರಂಡಿ ವ್ಯವಸ್ಥೆ ಕೆಲವು ಮುನ್ಸಿಪಾಲ್ಟಿಗಳಲ್ಲಿದೆ ಆದರೆ ಉಳಿದ ಮುನ್ಸಿಪಾಲ್ಟಿಗಳಲ್ಲಿ ಒಳಚರಂಡಿಗಳು ಇಲ್ಲ. ಹೀಗಾಗಿ ಅಲ್ಲಿ ಜನಗಳ ಆರೋಗ್ಯ ಕೆಡಲಿಕ್ಕೆ ಹತ್ತಿದೆ. ಅದರಂತೆ ಪಬ್ಲಿಕ್ ಟೊಯಿಲೆಟ್ ಮುನ್ಸಿಪಾಲ್ಟಿಗಳಲ್ಲಿ ಇಲ್ಲ. ಮುನ್ಸಿಪಾಲ್ಟಿ ಹತೋಟಿಯಲ್ಲಿರುವ ಶಾಲಾ ಕಟ್ಟಡಗಳು ಸರಿಯಾಗಿಲ್ಲ. ಅಲ್ಲಿ ಶಿಕ್ಷಣ ಕೊಡಿಸುವ ಹೊಣೆಗಾರಿಕೆ ಸರ್ಕಾರದ ಮೇಲೆ, ಅದೇ ಪ್ರಕಾರ ಮುನ್ಸಿಪಾಲ್ಟಿಗಳ ಮೇಲೂ ಇದೆ. ಮೊನ್ನೆ ತಾನೇ ಈ ಅರ್ಬನ್ ಡೆವಲಪ್‌ಮೆಂಟ್ ಬಗ್ಗೆ ಒಂದು ಸೆಮಿನಾರ್‌ದಲ್ಲಿ ಸೂಚಿಸಿದಂತೆ ನಗರಗಳಲ್ಲಿ ಸೌಕರ್ಯಗಳು ದೊರಕುವಂತೆ ಮಾಡಬೇಕು.

ಮುನ್ಸಿಪಾಲ್ಟಿಗಳಲ್ಲಿ ಕೆಲವು ಕಡೆ ಇಂಟೀರಿಯಂ ಕೌನ್ಸಿಲ್‌ಗೆ ಒಂದು ವರ್ಷದಲ್ಲಿ ಚುನಾವಣೆ ಆಗಬೇಕಾಗಿದ್ದು ಇನ್ನೂ ಆಗಿಲ್ಲ. ಹಳೆ ಮುನ್ಸಿಪಾಲ್ಟಿಗಳ ಟರ್ಮ್ ಮುಗಿದು ಹೋಗಿದ್ದರೂ ಹೊಸ ಚುನಾವಣೆ ಮಾಡದೆ ಎಷ್ಟೋ ಸ್ಥಳಗಳಲ್ಲಿ ಅಡ್ಮಿನಿಸ್ಟ್ರೇಟರನ್ನು ನೇಮಕ ಮಾಡಿದ್ದಾರೆ. ಅದನ್ನು ರದ್ದು ಮಾಡಿ ಹೊಸ ಚುನಾವಣೆ ಮಾಡಬೇಕೆಂದು ಸೂಚಿಸಿ ಅಧ್ಯಕ್ಷರು ನನಗೆ ಮಾತನಾಡಲು ಸಮಯ ಕೊಟ್ಟಿದ್ದಕ್ಕಾಗಿ ಅವರಿಗೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

## ಟಿಪ್ಪಣಿ ರೂಪದ ಪ್ರಶ್ನೆಗಳು

### 6ನೇ ಮೇ 1974

**Sri P. M. Bangi (Jamkhandi)**-Will the Minister for Revenue be pleased to state:-

a) the names of talukas in Belgaum Division (i.e. Bijapur, Belgaum, Dharwad and Karwar Districts) where offices of the Sub-Registrars are functioning;

b) the number of documents executed by way of sale, exchange, gift, partition or otherwise in respect of agricultural lands between January 1973 and 29th June 1973 in each of the Sub-Registrar Offices in Belgaum Division;

c) the total amount collected by the sale of Revenue General Stamps for the execution of the above said documents in each of those Sub-Registrar Offices;

d) whether it is a fact that these documents were executed to evade the provisions of Mysore Land Reforms (Amendment) Bill, 1973 then pending before Mysore Legislature;

e) if so, the measures taken by Government to render these alienations by way of gift, sale, partition, exchange ineffective and void?

**Sri N. Hutchamasthy Gowda Minister for Revenue-**

a) Vide column 1 of the Statement appended.

b) Vide column 2 of the Statement appended.

c) Vide column 3 of the Statement appended.

# ಲೋಕೋಪಯೋಗಿ ಇಲಾಖೆ ಮೇಲಿನ ಚರ್ಚೆ

## 6ನೇ ಮೇ 1974

**ಶ್ರೀ ಪಿ. ಎಂ. ಬಾಂಗಿ (ಜಮಖಂಡಿ)**– ಮಾನ್ಯ ಅಧ್ಯಕ್ಷಣೀಯವರೆ, ಲೋಕೋಪಯೋಗಿ ಇಲಾಖೆಯ ಮಂತ್ರಿಗಳು ಇವತ್ತಿನ ದಿವಸ ಮಂಡಿಸಿದ ಯಾವತ್ತೂ ಬೇಡಿಕೆಗಳಿಗೆ ನಾನು ಸಂಪೂರ್ಣ ಬೆಂಬಲವನ್ನು ನೀಡುತ್ತಿದ್ದೇನೆ. ಇದೇ ಸಮಯದಲ್ಲಿ ಈ ಬಗ್ಗೆ ಕೆಲವು ಸೂಚನೆಗಳನ್ನು ಕೂಡ ಮಾಡಬಯಸುತ್ತೇನೆ.

**ದೋಣಿ ದುರಂತಗಳನ್ನು ತಪ್ಪಿಸಿ:**

ಈ ಇಲಾಖೆಯ ಪರವಾಗಿ ಇನ್‌ಲ್ಯಾಂಡ್ ನೆವಿಗೇಷನ್‌ನ ಕೆಲಸ ಸಾಗುತ್ತಿದೆ. ನಮ್ಮ ಭಾಗದಲ್ಲಿ ಭೀಮಾ, ಕೃಷ್ಣಾ, ಘಟಪ್ರಭಾ ಈ ನದಿಗಳು ಮಳೆಗಾಲದಲ್ಲಿ ಪೂರ್ಣ ತುಂಬಿ ಹರಿಯುತ್ತಿರುತ್ತವೆ. ಅಲ್ಲಿ ಸಾಕಷ್ಟು ದೋಣಿಗಳು ಇರುವುದಿಲ್ಲ. ಇದ್ದ ದೋಣಿಗಳು ಉತ್ತಮ ಸ್ಥಿತಿಯಲ್ಲಿರುವುದಿಲ್ಲ. ಆದುದರಿಂದ ಜನಗಳ ಪ್ರಾಣಹಾನಿ ಎಷ್ಟೋ ಸಂದರ್ಭದಲ್ಲಿ ಆಗಿದೆ. ಆ ದೃಷ್ಟಿಯಿಂದ ಇನ್‌ಲ್ಯಾಂಡ್ ನೆವಿಗೇಷನ್‌ಗಾಗಿ ಈ ನದಿಗಳಿಗೆ ಅನ್ವಯಿಸುವಂಥ ಲಾಂಚ್ ಇಟ್ಟು ಅದರ ಮುಖಾಂತರ ಈ ನದಿಗಳಿಗೆ ಲಿಂಕ್ ಸೌಲಭ್ಯವನ್ನು ಒದಗಿಸಿಕೊಡಬೇಕು.

**ನಿರುದ್ಯೋಗಿ ಇಂಜನಿಯರುಗಳಿಗೆ ಕೆಲಸ ಕೊಡಿ:**

ಪಿ.ಡಬ್ಲ್ಯೂ.ಡಿ. ಬಗ್ಗೆ ಹೇಳುವುದಾದರೆ, ಅನ್‌ಎಂಪ್ಲಾಯ್ಡ್ ಇಂಜಿನಿಯರ್ಸ್‌ಗೆ ಪ್ರಾಶಸ್ತ್ಯ ಕೊಡಬೇಕು. ಅನ್‌ಎಂಪ್ಲಾಯ್‌ಮೆಂಟನ್ನು ದೂರ ಮಾಡುವುದಕ್ಕೋಸ್ಕರ ಮಾನ್ಯ ಮಂತ್ರಿಗಳು ಅವರಿಗೆ ಕಾಂಟ್ರ್ಯಾಕ್ಟ್‌ಗಳನ್ನು ಕೊಟ್ಟು ಸೌಲಭ್ಯಗಳನ್ನು ಒದಗಿಸಿಕೊಡಬೇಕೆಂದು ಹೇಳಬಯಸುತ್ತೇನೆ. ಕಳೆದ ವರ್ಷ ಫ್ಯಾಮಿನ್‌ಗೆ ಸಾಕಷ್ಟು ಹಣವನ್ನು ಖರ್ಚುಮಾಡಿ, ಎಷ್ಟೋ ಕೆಲಸಗಳನ್ನು ಮಾಡಿಸಿದ್ದೀರಿ. ರಸ್ತೆ ಬದಿಯಲ್ಲಿ ಮೆಟಲ್ ಬ್ರೇಕಿಂಗ್ ಹಾಕಿಬಿಟ್ಟಿದ್ದೀರಿ. ಅದನ್ನು

ಉಪಯೋಗ ಮಾಡಬೇಕು ಮತ್ತು ರಸ್ತೆಗಳನ್ನು ದುರಸ್ತಿ ಮಾಡಬೇಕು. ಇನ್ನು ಮೇಜರ್ ಇರಿಗೇಷನ್ ಬಗ್ಗೆ ಹೇಳಬೇಕಾದರೆ ಕೃಷ್ಣಾ, ಘಟಪ್ರಭಾ, ಮಲಪ್ರಭಾ, ಭೀಮಾ ಈ ನಾಲ್ಕೂ ನದಿಗಳಲ್ಲಿ ಮಹಾರಾಷ್ಟ್ರ ಸರ್ಕಾರ ಮಾಡಿದಂತೆ ಸಣ್ಣ ಸಣ್ಣ ಬಂಧಾರಾಗಳನ್ನು ಹಾಕಿ ನೀರನ್ನು ಸ್ಟಾಕ್ ಮಾಡಿಕೊಡಬೇಕೆಂದು ಹೇಳಬಯಸುತ್ತೇನೆ.

## ರಸ್ತೆ ಅಕ್ಕಪಕ್ಕದಲ್ಲಿ ಗಿಡ ನೆಡಿ:

ರಸ್ತೆಗಳ ಅಕ್ಕಪಕ್ಕದಲ್ಲಿ ಗಿಡಗಳನ್ನು ನೆಡುವ ಕೆಲಸ ಫಾರೆಸ್ಟ್ ಡಿಪಾರ್ಟ್‌ಮೆಂಟ್‌ನವರಿಗೆ ಸೇರಿದ್ದು, ಈ ಕೆಲಸವನ್ನು 3 ವರ್ಷಗಳಿಂದ ಫಾರೆಸ್ಟ್ ಡಿಪಾರ್ಟ್‌ಮೆಂಟಿನವರಿಗೆ ವಹಿಸಿಕೊಟ್ಟಿಲ್ಲ, ಇದು ಸರಿಯಲ್ಲ. ಫಾರೆಸ್ಟ್ ಡಿಪಾರ್ಟ್‌ಮೆಂಟಿನಿಂದ ಲೋಕೋಪಯೋಗಿ ಇಲಾಖೆಗೆ ಒಪ್ಪಿಸಿದ ಮೂಲಕ ಇದು ಸರಿಯಾಗಿ ಸಾಗಿಲ್ಲ. ರಸ್ತೆಗಳ ಪಕ್ಕದಲ್ಲಿ ಗಿಡಗಳನ್ನು ಹಾಕುವುದಕ್ಕಾಗಿ ಕುಣಿಗಳನ್ನು ತೋಡಿದ್ದಾರೆ. ಆದರೆ ಗಿಡಗಳು ಇಲ್ಲದೇ ಇರುವುದರಿಂದ ಕುಣಿಗಳು ಹಾಳಾಗಿ ಹೋಗಿವೆ.

## ಲಿಂಕ್ ರೈಲ್ ವ್ಯವಸ್ಥೆ ಕುರಿತು:

ಇನ್ನು ರೈಲ್ವೆ ಬಗ್ಗೆ ಹೇಳಬೇಕೆಂದರೆ ಮೀರಜ್--ಹುಬ್ಬಳ್ಳಿ ಮತ್ತು ಬಾಗಲಕೋಟೆ–ಗದಗ್ ಈ ಪ್ರಕಾರ ಪ್ಯಾರಲಲ್ ಮಾರ್ಗಗಳಿದ್ದು, ಇವೆರಡರ ನಡುವೆ ಲಿಂಕ್ ಹಾಕಬೇಕೆಂದು ಆಗಿನ ಜಮಖಂಡಿ ಸಂಸ್ಥಾನದ ಮಹಾರಾಜರು ಸರ್ವೇ ಕೂಡ ಮಾಡಿಸಿ, ಅದನ್ನು ರಾಮಬಾಗ್ ಸ್ಟೇಷನ್‌ಗೆ ಕನೆಕ್ಟ್ ಮಾಡುವುದಕ್ಕೆ ಪ್ರಯತ್ನಪಟ್ಟಿದ್ದರು. ಈ ರೈಲ್ವೆ ಲಿಂಕ್ ಯೋಜನೆಯನ್ನು ತೆಗೆದುಕೊಳ್ಳುವಂತೆ ರಾಜ್ಯ ಸರ್ಕಾರ ಕೇಂದ್ರ ಸರ್ಕಾರದವರಿಗೆ ಒತ್ತಾಯ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ.

## ಚನ್ನಬಸಪ್ಪನವರಿಗೇನಾಗಿದೆ:

ಇನ್ನು ಮುಂದೆ ಲೋಕೋಪಯೋಗಿ ಇಲಾಖೆ ನಿರ್ಮಲ ರೀತಿಯಲ್ಲಿ ನಡೆಯಲಿ ಎಂದು ವಿರೋಧ ಪಕ್ಷದ ಸದಸ್ಯರು ಹೇಳಿದ ಮಾತನ್ನು ನಾನು

ಸಂಪೂರ್ಣ ಬೆಂಬಲಿಸುತ್ತೇನೆ. ಹಾಸನ, ಬಳ್ಳಾರಿ, ವಿಜಾಪೂರ, ಗುಲ್ಬರ್ಗಾ ಇನ್ನೂ ಹಲವು ಕಡೆಗಳಲ್ಲಿ ಈ ಇಲಾಖೆಯಲ್ಲಿ ಸಾಕಷ್ಟು ಹಣ ಪೋಲಾಗಿ ಹೋಗಿದೆ ಎಂದು ವಿಜಿಲೆನ್ಸ್ ರಿಪೋರ್ಟ್ ಬಂದಿದೆ ಎಂದು ತಿಳಿದುಕೊಂಡಿದ್ದೇನೆ. ಯಾರ ಬಗ್ಗೆ 15 ವರ್ಷಗಳ ಹಿಂದೆ ಜನರು ಹೆದರುತ್ತಿದ್ದರೋ ಅಂಥ ಮಾನ್ಯ ಮಂತ್ರಿಗಳು ಈಗ ದುರ್ಬಲರಾಗಿದ್ದಾರೆ. ಅಷ್ಟು ಹಣ ಪೋಲಾಗಿದ್ದರೂ ಏತಕ್ಕೆ ಸುಮ್ಮನೆ ಕೂತಿದ್ದೀರಿ. ಹಣವನ್ನೆಲ್ಲಾ ಲೂಟಿ ಮಾಡಿ ನಮ್ಮ ನಮ್ಮಲ್ಲಿ ಡಿಸ್ಟ್ರಿಬ್ಯೂಟ್ ಮಾಡಿಕೊಂಡಿದ್ದೇವೆ ಎನ್ನತಕ್ಕ ರೀತಿಯಲ್ಲಿ ಮಾನ್ಯ ವಿರೋಧ ಪಕ್ಷದ ನಾಯಕರು ಪ್ರಸ್ತಾಪ ಮಾಡಿದರು. ಇದು ದುರ್ದೈವದ ಸಂಗತಿ. ಹಣವನ್ನು ಹಂಚಿಕೊಳ್ಳುವುದಕ್ಕೋಸ್ಕರ ನಾವು ಇಲ್ಲಿಗೆ ಬಂದಿಲ್ಲ. ನಾವು ಜನಗಳ ಪ್ರತಿನಿಧಿಗಳಾಗಿ ಇಲ್ಲಿಗೆ ಬಂದಿದ್ದೇವೆ. ನಿರ್ಮಲ ರಾಜ್ಯಭಾರ ನಡೆಯಬೇಕೆಂಬುದೇ ನಮ್ಮ ಹಂಬಲ. ಆ ದೃಷ್ಟಿಯಿಂದ, ನಮ್ಮ ಪಕ್ಷದವರೇ ಆಗಲಿ, ವಿರೋಧ ಪಕ್ಷದವರೇ ಆಗಲಿ ಯಾರೇ ಆಗಲಿ ತಪ್ಪು ಮಾಡಿದ್ದರೆ ಅವರ ಮೇಲೆ ಕ್ರಮವನ್ನು ತೆಗೆದುಕೊಳ್ಳಬೇಕು. ಈ ಖಾತೆ ನಿರ್ಮಲ ರೀತಿಯಿಂದ ನಡೆಯಬೇಕೆಂಬುದೇ ನಮ್ಮೆಲ್ಲರ ಆಶೆ. ಮಾನ್ಯ ಚನ್ನಬಸಪ್ಪನವರ ಶುದ್ಧ ಹೆಸರಿಗೆ ಅವರ ಪಕ್ಷದವರಿಂದ ತೊಂದರೆ ಬಂದಿದೆಯೇ ಅಥವಾ ವಿರೋಧ ಪಕ್ಷದವರಿಂದ ತೊಂದರೆ ಬಂದಿದೆಯೇ? ಯಾರಿಂದ ತೊಂದರೆ ಬಂದಿದೆ? ಏತಕ್ಕೆ ಅವರು ವೀರರು, ಸಿಂಹಘರ್ಜನೆ ಮಾಡಿದಂಥವರು ಸುಮ್ಮನೆ ಕೂತುಕೊಂಡಿದ್ದಾರೆ. ಇದರಿಂದ ಅವರು ಹೆಸರನ್ನು ಕೆಡಿಸಿಕೊಳ್ಳುತ್ತಿದ್ದಾರೆ. ಅವರಿಗೆ ನಮ್ಮ ಸದನದ ಸಂಪೂರ್ಣ ಬೆಂಬಲವಿದೆ. ಚನ್ನಬಸಪ್ಪನವರಿಗೇನಾದರೂ ತೊಂದರೆ ಬಂದಿದೆಯೇ? ಹಾಗೆ ಬಂದಿದ್ದರೆ ಯಾವಾಗಿನಿಂದ ಬಂದಿದೆ ಎಂದು ಸ್ಪಷ್ಟವಾಗಿ ನಾಳೆ ದಿವಸ ಈ ಸದನದಲ್ಲಿ ಉತ್ತರ ಕೊಡುವಾಗ ಹೇಳಬೇಕು.

ಹಾಸನದಲ್ಲಿ ಎಷ್ಟು ದುಡ್ಡು ಪೋಲು ಆಗಿದೆಯೆಂಬುದನ್ನು ಹೇಳುವುದಕ್ಕೂ ಆಗುವುದಿಲ್ಲ. ಹಾಸನದಲ್ಲಿ ರಾತ್ರಿ ಗ್ಯಾಸ್-ಲೈಟ್ ಹಚ್ಚಿ ಕೆರೆ ಅಗಿಯುವ ಕೆಲಸ ನಡೆದಿದೆಯೆಂದು ಕೇಳಿದ್ದೇನೆ. ಈ ಎಲ್ಲಾ ಪ್ರಕರಣಗಳ ಬಗ್ಗೆ ನಮ್ಮ ಮಾನ್ಯ ಮಂತ್ರಿಗಳಿಗೆ ವಿವರಣೆಗಳು ಬಂದಿರುತ್ತವೆ ಮತ್ತು ವಿಜಿಲೆನ್ಸ್ ಕಮೀಷನ್ನಿನ ರಿಪೋರ್ಟ ಬಂದು ಒಂದೆರ್ಡು ತಿಂಗಳು ಆದಾಗ್ಯೂ, ಏನೊಂದೂ ಕ್ರಮವನ್ನು ತೆಗೆದುಕೊಳ್ಳದೇ ಸುಮ್ಮನೇ ನೋಡುತ್ತಾ ಕುಳಿತಿದ್ದಾರೆ. ತಪ್ಪಿತಸ್ಥರು

ಯಾರೇ ಇರಲಿ, ಅವರು ಶಾಸಕರು ಇರಲಿ, ಗೌವರ್ನಮೆಂಟ್ ಸರ್ವೆಂಟ್ ಇರಲಿ ಅಥವಾ ಅವರು ಯಾರೇ ಇರಲಿ, ಪ್ರಭಾವಕ್ಕೆ ಒಳಗಾಗದೆ ಸ್ಪಷ್ಟವಾದ ರೀತಿಯಲ್ಲಿ ನಾಳೆ ದಿವಸ ಉತ್ತರವನ್ನು ಸಭೆಯಲ್ಲಿ ಮಂಡಿಸಿ, ಇದಕ್ಕೆ ಸಹಾಯ ಬೇಕಾದರೆ ವಿರೋಧ ಪಕ್ಷದವರಿಂದ ನಮ್ಮೆಲ್ಲರಿಂದಲೂ ನಿಮಗೆ ಸಂಪೂರ್ಣ ಬೆಂಬಲ ಇದೆ ಎಂದು ನಾನು ಇವತ್ತಿನ ದಿವಸ ಹೇಳಬಯಸುತ್ತೇನೆ. ಆ ವರ್ಷ ಬಜೆಟ್‌ದಲ್ಲಿ 1 ಕೋಟಿ 30 ಲಕ್ಷ ರೂಪಾಯಿಯನ್ನು ಅಳವಡಿಸಿದ್ದರು. ಅದರಲ್ಲಿ 30 ಲಕ್ಷದಷ್ಟು ಎಷ್ಟಾಬ್ಲಿಷ್‌ಮೆಂಟ್‌ಗೆನೇ ಖರ್ಚಾಗಿದೆ. ಯಾರ್‍ಯಾರಿಗೆ ಎಂದರೆ ಹಾರಂಗಿ ಜಲಾಶಯದ ಸೂಪರಿಂಟೆಂಡೆಂಟ್ ಇಂಜೀನಿಯರ್ ಮತ್ತು ಇನ್ನೂ ಇತರ ಅಧಿಕಾರಿಗಳಿಗೆ ಖರ್ಚಾಗಿದೆ.

ಇನ್ನು ಕಾವೇರಿ ವ್ಯಾಲಿ ಪ್ರಾಜೆಕ್ಟ್ ತೆಗೆದುಕೊಂಡರೆ ಅಲ್ಲಿ ಒಬ್ಬ ಅಡ್ಮಿನಿಸ್ಟ್ರೇಟರನ್ನು ನೇಮಕ ಮಾಡಿದ್ದಾರೆ. ಈ ರೀತಿ ಆಫೀಸರ್ಸ್‌ನ್ನು ನೇಮಕ ಮಾಡುತ್ತಾ ಹೋದರೆ ಅವರ ಖರ್ಚು ದೇಶಕ್ಕೆ ಎಷ್ಟಾಗುತ್ತದೆ ಎನ್ನುವುದನ್ನು ಮನಗಾಣಬೇಕು. ಈ ಇಲಾಖೆಯಲ್ಲಿ ಹೆಚ್ಚು ಖರ್ಚಾಗುತ್ತಾ ಇದೆ. ಆದರೆ ಅವರ ಕರ್ತವ್ಯ ಏನೋ ಗೊತ್ತಿಲ್ಲ. ಹೇಮಾವತಿ ಪ್ರಾಜೆಕ್ಟ್ ತೆಗೆದುಕೊಂಡು ದೇಶಕ್ಕೆ ಹೆಚ್ಚು ಖರ್ಚಾಗುತ್ತಾ ಇದೆಯೇ ವಿನಾ ಪ್ರಯೋಜನಾ ಏನೂ ಇಲ್ಲ. ಈ ರೀತಿಯಾಗಿ ದೊಡ್ಡ ದೊಡ್ಡ ಹುದ್ದೆಗಳನ್ನು ಜಾಸ್ತಿ ಮಾಡಿಕೊಳ್ಳುವುದರಿಂದ ದೇಶದ ಆರ್ಥಿಕ ಮುಗ್ಗಟ್ಟಿಗೆ ಕಾರಣ ಎಂದು ಹೇಳುತ್ತೇನೆ. ಇಂದು ದೇಶದ ಅಭಿವೃದ್ಧಿ ಕಾರ್ಯಗಳನ್ನು ಮಾಡುವಾಗ ಇಂಜಿನೀಯರುಗಳ ಪಾತ್ರ ಬಹಳ ಪವಿತ್ರವಾದುದು. ಹಿಂದೆ ಮೈಸೂರು ಇಂಜನೀಯರ್ಸ್ ಎಂದರೆ ಬಹಳ ಬುದ್ಧಿವಂತರು ಎಂದು ವಿಶೇಷವಾದ ಹೆಸರು ಗಳಿಸಿದ್ದರು. ಆದರೆ ಇಂದು ಏನಾಗಿದೆ ಎಂದರೆ ಉದಾಹರಣೆಗೆ ಹೈಡ್ರೋ ಎಲೆಕ್ಟ್ರಿಕ್ ಪ್ರಾಜೆಕ್ಟ್ ತೆಗೆದುಕೊಂಡರೆ ಅಲ್ಲಿ ಇಂಜಿನೀಯರ್ ಇನ್ ಚೀಫ್, ಚೀಫ್ ಇಂಜಿನೀಯರ್, ಸೂಪರಿಂಟೆಂಡೆಂಟ್ ಇಂಜನೀಯರ್, ಅಸಿಸ್ಟೆಂಟ್ ಇಂಜನೀಯರ್ ಅಂತ ಬೇಕಾದಷ್ಟು ಇಂಜನೀಯರ್‌ಗಳನ್ನು ಅನಾವಶ್ಯಕವಾಗಿ ನೇಮಕ ಮಾಡಿಕೊಂಡಿದ್ದೀರಿ. ನಮ್ಮ ದೇಶದ ಹಣ ಸೋರಿಹೋಗುವುದಕ್ಕೆ ಇದೂ ಒಂದು ಕಾರಣ. ಇವನ್ನು ತಡೆಗಟ್ಟದೆ ಹೋದರೆ ನೀವು ಏನು ಈ ಬಗ್ಗೆ ವಿಶೇಷವಾದ ಕಾರ್ಯಗಳನ್ನು ಮಾಡಬೇಕೆಂದು ನಿರೀಕ್ಷಣೆ ಮಾಡುತ್ತೀರೋ ಅದು

ಆಗುವುದಕ್ಕೆ ಸಾಧ್ಯವಿಲ್ಲ. ಈ ಬಗ್ಗೆ ಕೆಲವು ಉದಾಹರಣೆಗಳನ್ನು ಕೊಡುತ್ತೇನೆ. (1) ರಸ್ತೆಗಳಿಗೆ ಟಾರ್ ಹಾಕಿಸುವಾಗ ಎಷ್ಟೋ ರಸ್ತೆಗಳನ್ನು ಅಗೆದು ಬಿಟ್ಟು ಕೆಲವು ದಿವಸದವರೆಗೆ ಕೆಲಸವನ್ನೇ ಮಾಡಿರುವುದಿಲ್ಲ, ಇದರಿಂದ ಅದಕ್ಕೆ ಖರ್ಚಾದ ಎಲ್ಲಾ ಹಣ ನಿರರ್ಥಕವಾಗುತ್ತದೆ. (2) ನಂತರ ಕೆಲವು ವೇಳೆ ಜಲ್ಲಿಯನ್ನು ಕಲೆಕ್ಟ್ ಮಾಡಿ 4–5 ದಿವಸದವರೆಗೆ ಕೆಲಸವನ್ನೇ ಮಾಡುವುದಿಲ್ಲ. ಇದರಿಂದಲೂ ಖರ್ಚುಮಾಡಿದ ಹಣ ನಿರರ್ಥಕವಾಗುತ್ತದೆ. (3) ಕಂಟ್ರಾಕ್ಟರಿಗೆ ಕೆಲಸ ಕೊಡುವಾಗ ಅವರು ಯಾವ ರೀತಿ ಕೆಲಸ ಮಾಡಬೇಕೋ ಆ ರೀತಿ ಮಾಡದೆ ಸಬ್ ಸ್ಟ್ಯಾಂಡರ್ಡ್ ವರ್ಕ್ ಮಾಡುವುದರಿಂದ ನಮ್ಮ ದೇಶದ ಹಣ ಅಪವ್ಯಯವಾಗುತ್ತದೆ. (4) ಇನ್ನು ಇದರ ಜೊತೆಗೆ ಮಷಿನರಿಯಿಂದ ಹಣ ಸೋರಿ ಹೋಗುತ್ತದೆ. ಅದು ಯಾವ ರೀತಿ ಎಂದರೆ ಈಗ ನಮ್ಮ ಮೈಸೂರು ರಾಜ್ಯದ ಪಿ.ಡಬ್ಲ್ಯೂ.ಡಿ. ಇಲಾಖೆಯಲ್ಲಿ ಎಷ್ಟೆಷ್ಟು ಮಷಿನರಿಯನ್ನು ಹೊರಗಡೆಯಿಂದ ತರಿಸಿದ್ದಾರೆ ಮತ್ತು ಇಲ್ಲಿ ಎಷ್ಟು ಮಷಿನರಿಗಳನ್ನು ಕೊಂಡುಕೊಂಡಿದ್ದಾರೆ ಅದರ ಒಂದು ಲೆಖ್ಖ ಸರಿಯಾಗಿ ಇಟ್ಟಿಲ್ಲ. ಈ ಬಗ್ಗೆ ಯಾವ ಯಾವ ಡಿವಿಷನ್‌ಗೆ ಯಾವ ಯಾವ ಮಷಿನರಿಯನ್ನು ಕೊಟ್ಟಿದ್ದಾರೆ ಇದರ ಒಂದು ಚರಿತ್ರೆಯನ್ನು ಅವರು ಪೂರ್ತಿ ಬರೆದಿಟ್ಟಿಲ್ಲ. ಯಾವ ಮಷಿನರಿ ಎಲ್ಲಿಂದ ಬಂದಿದೆ ಮತ್ತು ಯಾವ ಮಷಿನರಿಗಳು ಉಪಯೋಗವಾಗದೇ ಹಾಗೆಯೇ ಇವೆ ಇವುಗಳ ಲೆಖ್ಖವನ್ನು ಕೂಡ ಸರಿಯಾಗಿ ಇಟ್ಟಿಲ್ಲ. ಅಲ್ಲದೆ ಕೆಲವು ಮಷಿನರಿಗಳು ಮೈನರ್ ರಿಪೇರಿ ಇಲ್ಲದೆ ಹಾಗೇ ಕೆಲಸ ಮಾಡದೇ ನಿಂತಿವೆ. ರಿಪೇರಿ ಮತ್ತು ಸಾಗಾಣಿಕೆಗೆ ಕೆಲವು ಹಣ ಖರ್ಚಾಗುತ್ತದೆ. ಈ ರೀತಿ ಮಷಿನರಿಗಳಿಂದ ಹಣ ಸೋರಿಹೋಗುತ್ತಿದೆ. ಆದುದರಿಂದ ಮಾನ್ಯ ಲೋಕೋಪಯೋಗಿ ಇಲಾಖಾ ಮಂತ್ರಿಗಳಾದ ಶ್ರೀಮಾನ್ ಎಚ್. ಎಂ. ಚನ್ನಬಸಪ್ಪನವರಿಗೆ ಹೇಳುತ್ತೇನೆ. ಅವರು ಈ ಕಡೆ ದೃಷ್ಟಿ ಹರಿಸಿದ್ದಾರೋ ಇಲ್ಲವೋ ಗೊತ್ತಿಲ್ಲ. ಈಗ ತಮ್ಮ ಇಲಾಖೆಯಲ್ಲಿ ಈ ಮಷಿನರಿಗಳು ಏನು ಐಡಲ್ ಆಗಿ ಬಿದ್ದಿವೆ ಮತ್ತು ಯಾರ್ಯಾರಿಗೆ ಎಲ್ಲೆಲ್ಲಿಗೆ ಮಷಿನರಿಗಳು ಹೋದವು ಮತ್ತು ಕಂಟ್ರಾಕ್ಟರಿಗೆ ಬಾಡಿಗೆಗೆಕೊಟ್ಟು ಮಷಿನರಿಗಳಿಂದ ಎಷ್ಟೆಷ್ಟು ಬಂದಿವೆ ಇವೆಲ್ಲದರ ಲೆಖ್ಖವನ್ನು ತರಿಸಿ ನೋಡಬೇಕು. ಹೀಗೆ ಮಾಡದೇ ಹೋದರೆ ಇದರಿಂದ ಸರ್ಕಾರಕ್ಕೆ ಲಕ್ಷಾಂತರ ಅಲ್ಲ ಕೋಟ್ಯಾಂತರ ಹಣ ಸೋರಿಹೋಗುತ್ತದೆ.

## ಟಿಪ್ಪಣಿ ರೂಪದ ಬಿಡಿ ಪ್ರಶ್ನೆಗಳು

### 14ನೇ ಆಗಸ್ಟ್ 1974

**Sri P. M. Bangi (Jamkhandi)-** Will the Minister for Industries and Parliamentary Affairs be pleased to state:-

a) the total number of handlooms, automatic looms and pit looms producing cotton cloth that were in working order till 1971:

b) the number of such looms that were working in different talukas in the State;

c) the number of hand looms, automatic looms and pit looms stopped due to the steep rise in prices of raw materials like yarn, art silk and dyes and want of customers for finished goods since 1972.

d) the number of weavers rendered unemployed due to the stoppage of handlooms for the reasons stated above;

e) the measures taken by Government to provide employment to the unemployed weavers by providing them with weaving materials.

**Sri S.M. Krishna (Minister for Industries and Parliamentary Affairs)**

a) 82,370

b) 73,040

c) 18,604

d) 4,344

e) The following measures have been undertaken to provide relief to the weavers in the drought affected areas:-

Seven yarn depots at the following places have been started:-

| | | |
|---|---|---|
| 1. | Ilakal | Bijapur District |
| 2. | Banahatti | -do- |
| 3. | Basavakalyan | Bidar District |
| 4. | Ramadurg | Belgaum District |
| 5. | Gadag Betgeri | Dharwad District |
| 6. | Guramitkal | Gulbarga District |
| 7. | Gulbarga | -do- |

1. There is complete control of yarn of counts above 40. The main requirements are 60's. and 80's. Unfortunately mills producing these higher counts have obtained from Court, stay of the textile control order. In some cases yarn dealers have also obtained stay against non-delivery of such yarn to them against pending controls. In these circumstances, there is non-supply of

yarn to Government by the Mills. Government is arranging for the distribution of yarn through the above yarn Depots and also through the Primary Retail Agencies.

2. A pledge loan of Rs. 10 lakhs has also been sanctioned by Government.

In order to give further relief to the handloom weavers Government in their order No. CI 25 CHD 73, dated 18/23.6.1973 have sanctioned 17 Relief Centres in following places at total cost of Rs. 67,07,500 to provide employment to weavers in and outside the cooperative fold. Arrangements have already been made to start 16 Relief Centres by appointing necessary staff including weavers in these centres and 13 centres are in production.

**Relief Centres sanctioned:-**

| District | Places |
|---|---|
| 1. Bijapur | 1. Banahatti |
| | 2. Ilakal |
| | 3. Guledagud |
| | 4. Chadachan |
| | 5. Muddebihal |
| 2. Gulbarga | 6. Alland |
| | 7. Guramitkal |
| | 8. Shahapur |

| | |
|---|---|
| 3. Bidar | 9. Basavakalyan |
| | 10. Chitaguppa |
| 4. Belgaum | 11. Ramdurg |
| | 12. Saundatti |
| 5. Raichur | 13. Dothihal |
| 6. Dharwad | 14. Gadag-Betgeri |
| | 15. Gajendragad |
| | 16. Ranebennur |
| | 17. Shigli |

## ಟಿಪ್ಪಣಿ ರೂಪದ ಬಿಡಿ ಪ್ರಶ್ನೆಗಳು

### 16ನೇ ಆಗಸ್ಟ್ 1974

**Sri P. M. Bangi (Jamkhandi)-** Will the Minister for Industries and Parliamentary Affairs be pleased to state:-

a) whether the Central Committee of spinners and weavers for the distribution of viscose filament yarn (Rayon Yarn) which has its headquarters at Bombay has allotted the Rayon Yarn to the Mysore-Karnataka Regional Committee for distributing the yarn in the State for the year 1973;

b) if so, the quarterly quota allotted to the Regional Committee of the State by the Central Committee.

c) how this yarn is distributed by the Regional Committee to the actual users and consumers of yarn;

d) the quota allotted to the Co-operative Societies and individuals in Bijapur district by the Regional Committee during 1973;

e) whether the quota allotted to co-operative societies is received by actual weavers and consumers of weaving towns of Rampur, Rabakavi, Banahatti and Mahalingapur;

f) whether the Co-operative Authorities have inspected the accounts of the societies concerned and have checked that the quota allotted has been properly distributed by the societies to their actual weaver members and consumers?

**Sri S.M. Krishna (Minister for Industries and Parliamentary Affairs)**

a) Yes.

b) Jan/Feb' 73-2,73,200 Kgs.
Mar/June' 73-5,55,700 Kgs.
July/Sept' 73-3,37,585 Kgs.
Oct/Dec' 73-2,72,880 Kgs.

c) The allocations are made to the Societies/Associations affiliated to the Mysore Regional Committee. Letters are sent simultaneously to the Societies, Association and spinners effecting delivery of Art Silk Yarn.

d) Quota allotted to co-operative societies and associations is 79,200 Kgs. and 61,000 Kgs, respectively.

e) Yes.

f) Yes.

**ಶ್ರೀ ಪಿ. ಎಂ. ಬಾಂಗಿ–** ಅಲ್ಲಿನ ಪ್ರಾದೇಶಿಕ ಸಮಿತಿಯವರು ನೂಲನ್ನು ನೇಕಾರರಿಗೆ ಕೊಟ್ಟಿರುವ ಕಾರ್ಡ್‌ಗಳ ಪ್ರಕಾರ ವಿತರಣೆಯನ್ನು ಮಾಡಲಿಲ್ಲ, ಅವರು ರೂಲ್ಸ್ ಪ್ರಕಾರ ನಡೆಯುತ್ತಾ ಇಲ್ಲ. ಅದರ ಬಗ್ಗೆ ಉತ್ತರನ್ನೂ ಸಹ ಸರಿಯಾಗಿ ಕೊಟ್ಟಿಲ್ಲ, ಇದುವರೆಗೆ ನೇಕಾರರಿಗೆ ಕಾರ್ಡುಗಳ ಮೇಲೆ ಏನೂ ಕೊಟ್ಟಿಲ್ಲ. ಗದಗ ಸೊಸೈಟಿಯವರು ಅಸಿಸ್ಟೆಂಟ್ ಡೈರೆಕ್ಟರ್ ಆಫ್ ಇಂಡಸ್ಟ್ರೀಸ್‌ನಿಂದ ಸರ್ಟಿಫಿಕೇಟ್ ತೆಗೆದುಕೊಂಡು ನೂಲಿನ ವಿತರಣೆಯಲ್ಲಿ ಅಕ್ರಮದಿಂದ ಲೂಟಿ ಹೊಡೆದಿದ್ದಾರೆ. ಇದು ಸರಿಯೇ?

**ಶ್ರೀ ಎಸ್.ಎಂ. ಕೃಷ್ಣ–** ವೀವರ್ಸ್ ಕೋ ಆಪರೇಟಿವ್ ಸೊಸೈಟಿಗಳ ಮೂಲಕ ನೇಕಾರರಿಗೆ ನೂಲು ತಲುಪುತ್ತಿದೆ ಎಂಬ ಒಂದು ಆಧಾರದ ಮೇಲೆ ಸರ್ಕಾರದವರು ಈ ಒಂದು ಪದ್ಧತಿಯನ್ನು ಮುಂದುವರಿಸಿದ್ದಾರೆ. There is a Regional Committee between the Central Committee of Spinners and Weavers in the State for distribution of that particular yarn. The State Governmnet does not come into picture and it is not associated with the Regional Committee set up by voluntary agreement. We proceed on the basis of quota received and that quota will reach the weavers ultimately.

**ಶ್ರೀ ಪಿ. ಎಂ. ಬಾಂಗಿ–** ವಿಜಾಪೂರ ಜಿಲ್ಲೆಯಲ್ಲಿ ಒಂದು ಸಾವಿರ ಕೆ.ಜಿ. ನೂಲನ್ನು ಅಸಿಸ್ಟೆಂಟ್ ಡೈರೆಕ್ಟರ್ ಅವರ ಸರ್ಟಿಫಿಕೇಟ್ ಮೂಲಕ ಜಮಖಂಡಿ ತಾಲೂಕಿನ 35 ವೀವರ್ಸ ಸೊಸೈಟಿಗೆ 40,900 ಕೆ.ಜಿ. ಆರ್ಟ–ಸಿಲ್ಕ್ ಯಾರ್ನ ಡಿಸ್ಟ್ರಿಬ್ಯೂಟ್ ಆಗಿದೆಯೆಂದು ರಿಪೋರ್ಟ್ ಕಳುಹಿಸಿದ್ದಾರೆ. ಇನ್ನೂ 15 ಸೊಸೈಟಿಗಳಿಗೆ ಇನ್ಸ್ಟ್ರಕ್ಷನ್ ಮಾಡಬೇಕಾಗಿದೆಯೆಂದು ಬರೆದಿದ್ದಾರೆ. ನನ್ನ

(ಊ) ಪ್ರಶ್ನೆಗೆ ಉತ್ತರವಾಗಿ ಸಹಕಾರಿ ಸಂಘಗಳ ಅಧಿಕಾರಿಗಳು ಸಂಬಂಧಪಟ್ಟ ಸಂಘದ ಲೆಖ್ಖ ಪತ್ರಗಳನ್ನು ಪರಿಶೀಲಿಸಿ ಹಾಗೂ ಸಂಘದಲ್ಲಿರುವ ನೇಕಾರ ಸದಸ್ಯರ ಹಾಗೂ ಬಳಕೆದಾರರಿಗೆ ಸಂಘದವರು ಗೊತ್ತುಪಡಿಸಿದ ಪ್ರಮಾಣವನ್ನು ಕ್ರಮವಾಗಿ ಹಂಚಿದ್ದರ ಬಗ್ಗೆ ತನಿಖೆ ನಡೆಸಿದ್ದಾರೆಂದು ಹೇಳಿದ್ದೀರಿ. ಹಾಗಾದರೆ ವಿಜಾಪೂರ ಜಿಲ್ಲೆಯಲ್ಲಿ ಅದನ್ನು ಅಧಿಕಾರಿಗಳು ತನಿಖೆ ಮಾಡಿದ್ದಾರೆಯೇ? ನೇಕಾರರಿಗೆ ಪ್ರತ್ಯಕ್ಷವಾಗಿ ನೂಲು ಮುಟ್ಟಿದೆಯೇ ಎಂದು ವಿಚಾರಣೆ ಮಾಡಿದ್ದಾರೆಯೇ? ದಯಮಾಡಿ ಅದರ ಮಾಹಿತಿಯನ್ನು ಹೇಳುತ್ತೀರಾ?

**Sri S.M. Krishna-** The question was whether the Co-operative Authorities have inspected the accounts of the societies and have checked that the quota allotted has been properly distributed by the societies to their actual weaver members and consumers. I have given figures. 35 societies were checked and it was found that some sort of distribution had taken place. The Government of Karnataka is not happy with the existing arrangement. There is no Government representation in the regional committee, which consists of non official members. The Karnataka Government has serious reservations about the way in which distribution has been made by this committee and we are taking it up right now with the Government of India. The Government of India is seized with this matter and a decision is forthcoming in the near future.

## ಮತಕ್ಷೇತ್ರಕ್ಕೆ ಸಂಬಂಧಿಸಿದ ಪ್ರಶ್ನೆಗಳು

### 17ನೇ ಆಗಸ್ಟ್ 1974

**Sri P. M. Bangi (Jamkhandi)-** Will the Minister of State for Minor Irrigation be pleased to state-

a) whether the bed of Krishna River near Asangi village in Jamkhandi Taluka (Bijapur District) drying up now and, on account of that, shortage of drinking water is being felt by Jamkhandi town population and other villagers on both the banks of the river from Asangi to Galagali.

b) whether sufficient water is impounded in Asangi barrage in Jamkhandi taluk

c) whether the needs of Jamkhandi Town and other aforesaid villages for drinking water will be fulfilled by letting out sufficient water from Asangi village and allowing it to flow from Asangi to Galagali via Sanal water works that supplies water to Jamkhandi town in summer?

**Sri S.B. Nagaral (Minister of State for Minor Irrigation)**

a) No.

b) There is a barrage at Rabakavi and Banahatti (not Asangi barrage) and sufficient water is impounded in that barrage

c) Yes.

ಶ್ರೀ ಪಿ. ಎಂ. ಬಾಂಗಿ – ನನ್ನ (ಅ) ಪ್ರಶ್ನೆಗೆ ಉತ್ತರವಾಗಿ ಇಲ್ಲ ಎಂದು ಹೇಳಿದೆ. ಸುಮಾರು ಎರಡು ವರ್ಷಗಳಿಂದಲೂ ಅಲ್ಲಿನ ಜನರಿಗೆ ಕುಡಿಯುವ ನೀರು ಸಿಗದೆ ಬಹಳ ತೊಂದರೆಪಡುತ್ತಿರುವುದು ತಮ್ಮ ಗಮನಕ್ಕೆ ಬಂದಿದೆಯೇ? ಕೃಷ್ಣಾ ನದಿ ಈಗಾಗಲೇ ಒಣಗಿ ಹೋಗಿರುವುದರಿಂದ ಅಲ್ಲಿನ ಜನರು ನೀರಿಗೆ

ಬಹಳ ತೊಂದರೆಯನ್ನು ಅನುಭವಿಸುತ್ತಾ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

ಶ್ರೀ ಎಸ್.ಬಿ. ನಾಗರಾಳ್– ಪ್ರಶ್ನೆ ಇರುವುದು ಕುಡಿಯುವ ನೀರಿಗೆ ಸಂಬಂಧಪಟ್ಟಿದ್ದು. ಅದರ ದೆಸೆಯಿಂದ ಉತ್ತರ ಕಳುಹಿಸಲಾಗಿದೆ. ಹೋದವರ್ಷ ನೀರಿನ ಕೊರತೆಯಾಯಿತು. ಆ ವಿಷಯ ಮಾನ್ಯ ಸದಸ್ಯರಿಗೂ ಗೊತ್ತಿದೆ. ಏಪ್ರಿಲ್ ಮತ್ತು ಮೇ ತಿಂಗಳ ವಿಷಯ ಅವರಿಗೆ ಸರಿಯಾಗಿ ಗೊತ್ತಿಲ್ಲವೆಂದು ಕಾಣುತ್ತದೆ. ಮೇ ತಿಂಗಳಿನಲ್ಲಿ ನೀರನ್ನು ಹೆಚ್ಚಿಗೆ ಕೃಷ್ಣಾ ನದಿಯಿಂದ ಬಿಡುಗಡೆ ಮಾಡಿದ್ದರಿಂದ ಈಗ ನೀರಿನ ಕೊರತೆ ಇಲ್ಲ. ಮುಂದೆ ಬ್ಯಾರೇಜ್‌ನಲ್ಲಿ 14 ಲಕ್ಷ ಗ್ಯಾಲನ್‌ವರೆಗೆ ನೀರು ತುಂಬಿಕೊಳ್ಳುವುದರಿಂದ ಜಮಖಂಡಿಗೆ ಇರತಕ್ಕ ನೀರಿನ ಕೊರತೆ ನೀಗೀತೆಂದು ನಾನು ಆಶಯಮಾಡುತ್ತೇನೆ.

ಶ್ರೀ ಪಿ. ಎಂ. ಬಾಂಗಿ– ಇದರಿಂದ ಎಷ್ಟರಮಟ್ಟಿಗೆ ನೀರಿನ ಕೊರತೆ ನೀಗೀತೆಂದು ಸರ್ಕಾರದ ಅಭಿಪ್ರಾಯ? ಇದನ್ನು ಮಾಡುವುದಕ್ಕೆ ಇನ್ನು ಎಷ್ಟು ವೇಳೆಯಾಗುತ್ತದೆ?

ಶ್ರೀ ಎಸ್.ಬಿ. ನಾಗರಾಳ್– ಅದನ್ನು ಈಗ ಹೇಳುವುದಕ್ಕೆ ಸಾಧ್ಯವಿಲ್ಲ. ಆದಷ್ಟು ಜಾಗ್ರತೆ ಮಾಡುತ್ತೇವೆ.

## ನೀರಾವರಿ ಇಲಾಖೆಯ ಬಿಲ್ ಮೇಲಿನ ತಿದ್ದುಪಡಿ ಚರ್ಚೆ

### 20 ಆಗಸ್ಟ್ 1974

ಶ್ರೀ ಪಿ. ಎಂ. ಬಾಂಗಿ (ಜಮಖಂಡಿ)– ಮಾನ್ಯ ಉಪಾಧ್ಯಕ್ಷರೆ ಮಾನ್ಯ ಮುಖ್ಯಮಂತ್ರಿಗಳು ತಂದಂಥ ಈ ತಿದ್ದುಪಡಿ ಮಸೂದೆಗೆ ಬೆಂಬಲವನ್ನು ಕೊಡುತ್ತಾ ಈ ವಿಷಯದಲ್ಲಿ ಕೆಲವು ಸಂಗತಿಗಳನ್ನು ನಾನು ಹೇಳಬಯಸುತ್ತೇನೆ. ಬೆಟರ್‌ಮೆಂಟ್ ಲೆವಿ 500 ರೂಪಾಯಿಗಳು ಇದ್ದಂಥದನ್ನು ತೆಗೆದು

1,500 ರೂಪಾಯಿಗಳನ್ನು ಹಾಕಬೇಕು ಎನ್ನತಕ್ಕಂಥ ಸೂಚನೆಯನ್ನು ನಾನು ಅನುಮೋದಿಸುತ್ತೇನೆ. ಈ ಬೆಟರ್‌ಮೆಂಟ್ ಲೆವಿಯನ್ನು ಯಾರಿಗೆ ಹಾಕಬೇಕೆನ್ನುವ ಬಗ್ಗೆ 4ನೇ ಕಲಮಿನಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ.

Column 4, sub-section (1) "The amount of betterment contribution payable in respect of any land referred to in Section 3 shall be any amount equal to one-half the difference between the market value of such land before the date of commencement of the construction, restoration, expansion or alternation of the irrigation work and the market value after the date of completion of such construction, restoration, expansion or alteraction".

ಈ ಕಲಮಿನ ಬಗ್ಗೆ ಹೇಳಬೇಕಾರೆ ಯಾವುದೇ ಇರಿಗೇಷನ್ ಪ್ರಾಜೆಕ್ಟ್ ಪ್ರಾರಂಭ ಆಗುವುದಕ್ಕೂ ಮೊದಲು ಇಂದ್ದಂಥ ಜಮೀನುಗಳ ಬೆಲೆ, ಇರಿಗೇಷನ್ ಪ್ರಾಜೆಕ್ಟ್ ಮುಗಿದ ನಂತರ ಆಗುವಂಥ ಬೆಲೆಯ ಅರ್ಧವನ್ನು ಬೆಟರ್‌ಮೆಂಟ್ ಕಾಂಟ್ರಿಬ್ಯೂಷನ್ ಎಂದು ತೆಗೆದುಕೊಳ್ಳಬೇಕೆಂದು ಹೇಳಲಾಗಿದೆ. ಘಟಪ್ರಭಾ ಪ್ರಾಜೆಕ್ಟ್‌ನ ಬಗ್ಗೆ ಹೇಳುವುದಾದರೆ, ಈ ಪ್ರಾಜೆಕ್ಟ್ ಮುಗಿದಿಲ್ಲ, ಅದು ಮುಗಿಯಬೇಕಾದರೆ 2 ವರ್ಷಗಳು ಬೇಕಾಗುತ್ತದೆ. ಆದುದರಿಂದ 500 ರೂಪಾಯಿ ಇರುವುದನ್ನು 1,500 ರೂಪಾಯಿಗಳೆಂದು ಮಾಡಿ ಹಣವನ್ನು ವಸೂಲು ಮಾಡಲು ಬರುವುದಿಲ್ಲ.

ಇವತ್ತು ಮುಂಗಾರು ಬೆಳೆಗೆ ಸ್ವಲ್ಪ ಭಾಗ ನೀರನ್ನು ಕೊಟ್ಟಾಗ್ಯೂ ಕೂಡ ಬೆಳೆ ಸರಿಯಾಗಿ ಆಗಿಲ್ಲ. ಆದುದರಿಂದ ಇಂಥ ಸಂದರ್ಭದಲ್ಲಿ ಎಷ್ಟು ಬೆಟರ್‌ಮೆಂಟ್ ಲೆವಿ ಹಾಕಬೇಕೆಂಬುದನ್ನು ತಿಳಿಯಬೇಕಾದರೆ ಇರಿಗೇಷನ್ ಆಫೀಸರ್‌ರವರಿಗೆ ಈ ಕೆಲಸವನ್ನು ವಹಿಸಬೇಕು. ಅವರು ಪ್ರತಿಯೊಂದು ಜಮೀನನ್ನು ನೋಡಿ ಇಷ್ಟೇ ಬೆಟರ್‌ಮೆಂಟ್ ಲೆವಿಯನ್ನು ಹಾಕಬೇಕೆಂದು ತಿಳಿಸುತ್ತಾರೆ. ನಮ್ಮ ಘಟಪ್ರಭಾ ಪ್ರಾಜೆಕ್ಟ್ ಮುಗಿಯಬೇಕಾದರೆ ಕನಿಷ್ಟ ಪಕ್ಷ ಎರಡು ವರ್ಷ ಬೇಕಾಗುತ್ತದೆ. ಅದು ಮುಗಿದ ನಂತರ ಅಲ್ಲಿರತಕ್ಕಂಥ

ಜಮೀನುಗಳ ಬೆಲೆ ಎಷ್ಟು ಆಗುತ್ತದೆ ಎನ್ನುವುದನ್ನು ಆನಂತರ ವಿಚಾರ ಮಾಡಬೇಕು. ಈ ತಿದ್ದುಪಡಿಯಲ್ಲಿ 1,500 ರೂಪಾಯಿ ಬೆಟರ್‌ಮಂಟ್ ಲೆವಿ ಎಂದು ಮಾಡಿದ್ದು ಆಮೇಲೆ ಬದಲಾವಣೆ ಮಾಡಲು ಬರುವುದಿಲ್ಲ. ಪ್ರಾಜೆಕ್ಟ್ ಮುಗಿದ ನಂತರ ಖರಿಫ್ ಮತ್ತು ರಬಿ ಬೆಳೆಗೆ ಹೆಚ್ಚಿನ ನೀರು ಸಿಗಬಹುದು. ಜಮೀನುಗಳ ಬೆಲೆಯೂ ಹೆಚ್ಚಾಗಬಹುದು ಹಾಗೂ ಬೆಳೆಯೂ ಹೆಚ್ಚಾಗಿ ಬರಬಹುದು. ಆದುದರಿಂದ ಈ ಪ್ರಾಜೆಕ್ಟ್‌ನ ಉಪಯೋಗ ಪಡೆಯುವುದಕ್ಕಿಂತ ಮೊದಲು ಇದ್ದಂಥ ಬೆಲೆ, ಪ್ರಾಜೆಕ್ಟ್ ಮುಗಿದ ನಂತರ ಇರತಕ್ಕಂಥ ಬೆಲೆ, ಈ ಎರಡೂ ಬೆಲೆಗಳನ್ನು ತೆಗೆದುಕೊಂಡು ಅದರಲ್ಲಿ ಅರ್ಧಭಾಗವನ್ನು ಬೆಟರ್‌ಮೆಂಟ್ ಕಾಂಟ್ರಿಬ್ಯೂಷನ್ ಎಂದು ಹಾಕಬೇಕು. ಇನ್ನೂ ಯಾವ ಭಾಗದಲ್ಲಿ ಪ್ರಾಜೆಕ್ಟ್‌ಗಳು ಮುಗಿದಿಲ್ಲ, ಅಂಥ ಕಡೆಗಳಲ್ಲಿ ಇದನ್ನು ಇಂಪ್ಲಿಮೆಂಟ್ ಮಾಡಬಾರದೆಂದು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ.

## ಭೂ ಸುಧಾರಣಾ ಕಾಯ್ದೆಯ ತಿದ್ದುಪಡಿ ಮೇಲಿನ ಚರ್ಚೆ

### 24ನೇ ಆಗಸ್ಟ್ 1974

**ಶ್ರೀ ಪಿ. ಎಂ. ಬಾಂಗಿ (ಜಮಖಂಡಿ)–** ಮಾನ್ಯ ಸಭಾಪತಿಗಳೇ, ಈ ಭೂಸುಧಾರಣೆ ಕಾಯ್ದೆಗೆ ಮಾನ್ಯ ಮಂತ್ರಿಗಳು ತಂದಿರುವ ತಿದ್ದುಪಡಿಯನ್ನು ಸ್ವಾಗತಿಸುತ್ತಾ, ಒಂದೆರಡು ಸೂಚನೆಗಳನ್ನು ಹೇಳಬಯಸುತ್ತೇನೆ. ಈ ತಿದ್ದುಪಡಿಯಲ್ಲಿ ಇರುವ ಲ್ಯಾಂಡ್ ಹೋಲ್ಡಿಂಗ್ಸ್ ಭೂಮಾಲೀಕರು ಮತ್ತು ಗೇಣಿದಾರರು ಇನ್‌ಕ್ಲೂಡ್ ಆಗಿ ಒಂದು ನೋಟೀಫಿಕೇಷನ್ ಏನು ಇದೆ ಅದು ಭೂಮಾಲಿಕನಿಗೆ ಒಂದು ತರಹ ಮತ್ತು ಗೇಣಿದಾರನಿಗೆ ಒಂದು ತರಹ ಅವಧಿಯನ್ನು ಕೊಟ್ಟಿದೆ. ಭೂಮಾಲಿಕನಿಗೆ 31.10.1974, ಗೇಣಿದಾರನಿಗೆ 3 ಡಿಸೆಂಬರ್ 1974 ಎಂದು ಇದೆ. ಇದರಿಂದ ಲ್ಯಾಂಡ್ ಟ್ರಿಬ್ಯೂನ್‌ನಲ್ಲಿ ಇದರ ಮೇಲೆ ಸಾಕಷ್ಟು ತಕರಾರು ಮಾಡಿದ್ದಾರೆ. ಮಾನ್ಯ ಮಂತ್ರಿಗಳು ಈ ವಿಷಯದಲ್ಲಿ ಅಂಟಿಲ್ ಫರ್ದರ್ ಆರ್ಡರ್ಸ್ ಎಂದು ಆಜ್ಞೆ ಹೊರಡಿಸಿದ್ದಾರೆ. ಇದರಿಂದ ವಕೀಲರು ಸರ್ಕಾರ ಫಿಕ್ಸ್ ಮಾಡಿರತಕ್ಕಂಥ ಫೀಸ್ ತೆಗೆದುಕೊಂಡು, ಜೊತೆಗೆ

ಜನರಿಂದ ಇನ್ನೂರು, ಮುನ್ನೂರು, ಐದುನೂರು ತೆಗೆದುಕೊಂಡು ಎಷ್ಟು ಅನ್ಯಾಯ ಮಾಡುತ್ತಿದ್ದಾರೆಂದರೆ ಈ ಟ್ರಿಬ್ಯೂನಲ್‌ನಿಂದ ನ್ಯಾಯ ದೊರಕುವುದು ಸಾಧ್ಯವಿಲ್ಲವೆಂದು ಜನರಲ್ಲಿ ಶಂಕೆ ಮೂಡಿಬರುತ್ತಿದೆ. ಮಾನ್ಯ ಮುಖ್ಯ ಮಂತ್ರಿಗಳು ವಿಜಾಪುರದಲ್ಲಿ ರಾಜಕೀಯ ಪರಿಷತ್ತಿನಲ್ಲಿ ಹೇಳಿರುವ ಪ್ರಕಾರ ಸರ್ಕಾರ ಕ್ಲಾರಿಫಿಕೇಷನ್ ಬಗ್ಗೆ ವಿಚಾರ ಮಾಡಬೇಕಾಗಿದೆ. ಬೇರೆ ರಾಜ್ಯಗಳಲ್ಲಿ ಭೂಮಾಲಿಕರು ಮತ್ತು ಗೇಣಿದಾರರ ಬಗ್ಗೆ ಲ್ಯಾಂಡ್ ರೀಫಾರ್ಮ್ಸ್ ಕಾಯ್ದೆ ಮಾಡಿದ್ದಾರೆ. ಈ ರೀತಿ ಡಿಕ್ಲರೇಷನ್ ಬಗ್ಗೆ ಅವರು ಯಾವ ರೀತಿ ಮಾಡಿದ್ದಾರೆ ಎಂಬುವದರ ವಿಷಯದಲ್ಲಿ ಕ್ಲಾರಿಫಿಕೇಷನ್ ಬೇಕಾಗಿದೆ. ಈ ದೃಷ್ಟಿಯಿಂದ ಸರ್ಕಾರದವರು ಒಂದು ನೋಟಿಫಿಕೇಷನ್‌ದಿಂದ ಈ ತೊಡಕನ್ನು ನಿವಾರಣೆ ಮಾಡಬೇಕೆಂದು ಕೇಳಿಕೊಳ್ಳುತ್ತೇನೆ. ಇದರಿಂದ ಹಳ್ಳಿಗಳಲ್ಲಿ ಗೇಣಿದಾರರು ಮತ್ತು ಭೂಮಾಲೀಕರು ಎಡ್ಜರ್ ರೂಪಾಯಿ ಕೋರ್ಟ್ ಫೀ ಸ್ಟ್ಯಾಂಪ್ ಹಚ್ಚಬೇಕಾಗುತ್ತದೆ. ಡಿಕ್ಲರೇಷನ್‌ಗೆ ಸ್ಟ್ಯಾಂಪ್ ಹಚ್ಚುವುದು ಕಾಯ್ದೆಯಲ್ಲಿಲ್ಲಾ. ಹಳನೆಯ ಕಲಮಿನಲ್ಲಿ ಡಿಕ್ಲರೇಷನ್ ತೆಗೆದುಕೊಳ್ಳುವಾಗ ಸಂಬಂಧಪಟ್ಟ ರೆಕಾರ್ಡ್ಸ್‌ನ್ನು ಪ್ರಡ್ಯೂಸ್ ಮಾಡಬೇಕು ಎನ್ನುವುದಕ್ಕೆ ಎಲ್ಲಿಯೂ ರೆಫರೆನ್ಸ್ ಇರುವುದಿಲ್ಲ.

"The Tahasildar should check up the above information with reference to the original records and keep them ready for the Tribunal" ಎಂದು ಇದೆ. ಅರ್ಜಿಗಳು ಸರಿಯಾಗಿ ಇರುತ್ತವೆಯೋ, ಇಲ್ಲವೋ ಎನ್ನುವುದನ್ನು ತಹಸೀಲ್ದಾರರು ಚೆಕ್ ಮಾಡಬೇಕೇ ಹೊರತು ಗೇಣಿದಾರರು, ಭೂಮಾಲಿಕರು ತಮ್ಮ ತಮ್ಮ ರಿಕಾರ್ಡುಗಳನ್ನು ಹಾಜರು ಮಾಡಬೇಕು ಎನ್ನುವುದು ವಿಧಿಯಲ್ಲಿಲ್ಲ. ಇದು ಇಲ್ಲದಾಗ್ಯೂ ಕೂಡ ತಹಸೀಲ್ದಾರರು ಇವುಗಳನ್ನು ಹಾಜರುಮಾಡಬೇಕು ಎಂದು ರೈತರಿಗೆ ಒತ್ತಾಯಪಡಿಸುತ್ತಿದ್ದಾರೆ. ಆದ್ದರಿಂದ ನಾನು ಮಾನ್ಯ ಮಂತ್ರಿಗಳಿಗೆ ಹೇಳುವುದೇನೆಂದರೆ, ರಿಜಿಷ್ಟರ್ ಪತ್ರ ಮತ್ತು ಇತರ ರಿಕಾರ್ಡುಗಳನ್ನು ಡಿಕ್ಲರೇಷನ್ ತೆಗೆದುಕೊಳ್ಳುವುದಕ್ಕೆ ದಾಖಲ್ ಮಾಡುವುದು ಅವಶ್ಯವಿಲ್ಲ. ಬರೀ ಅರ್ಜಿಗಳನ್ನು ದಾಖಲ್ಮಾಡಿದರೆ ಆಯಿತು ಎಂದು ತಿಳಿಯುವಂತೆ ತಾವು ಸೂಚನೆಯನ್ನು ಕೊಡಬೇಕೆಂದು ನಾನು ಹೇಳಬಯಸುತ್ತೇನೆ.

ಇನ್ನು ಸೆಕ್ಷನ್ 66ರ ಪ್ರಕಾರ ಡಿಕ್ಲರೇಷನ್‌ಗೆ ಪ್ರಮಾಣ ಪತ್ರ, ಕೋರ್ಟ್ ಫೀ ಸ್ಟ್ಯಾಂಪ್ ಇತ್ಯಾದಿ ಕೊಡಬೇಕು ಎಂದು ಯಾವುದೂ ಇಲ್ಲ. ಆದಾಗ್ಯೂ ತಹಸೀಲ್ದಾರರು ಪ್ರಮಾಣ ಪತ್ರ, ಕೋರ್ಟ ಫೀ ಸ್ಟಾಂಪ್ ಹಚ್ಚಬೇಕು ಎಂದು ಒತ್ತಾಯಪಡಿಸುತ್ತಿದ್ದಾರೆ. ಈ ದೃಷ್ಟಿಯಿಂದ ತಾವು ತಹಸೀಲ್ದಾರರಿಗೆ ಆಜ್ಞೆಯನ್ನು ಕೊಡಬೇಕು ಎಂದು ನಾನು ಸಲಹೆ ಮಾಡುತ್ತೇನೆ.

ಭೂಮಾಲೀಕರ ಬಗ್ಗೆ ಕಾಯ್ದೆಯ ಪ್ರಚಾರ ಅಷ್ಟು ಸರಿಯಾಗಿ ಆಗಿಲ್ಲ. ಆ ಬಗ್ಗೆ ಸರ್ಕಾರದ ಪರವಾಗಿ ಪ್ರತಿಯೊಂದು ಹಳ್ಳಿಗಳಲ್ಲಿ ಸಭೆಗಳನ್ನು ಕೂಡಿಸಿ, ತಹಸೀಲ್ದಾರರ ಮುಖಾಂತರ ಕಾಯ್ದೆಯ ವ್ಯಾಪ್ತಿಯನ್ನು, ಅರ್ಜಿಕೊಡುವ ತಾರೀಖು, ಡಿಕ್ಲರೇಷನ್ ಬಗ್ಗೆ ಮಾಹಿತಿಗಳನ್ನು ಹಳ್ಳಿಯ ಚಾವಡಿಗಳಲ್ಲಿ ಪ್ರಚಾರ ಮಾಡಬೇಕು ಎಂದು ಸಲಹೆ ಮಾಡಿ, ನನ್ನ ಭಾಷಣವನ್ನು ಮುಗಿಸುತ್ತೇನೆ.

## ಭೂ ಸುಧಾರಣಾ ಕಾಯ್ದೆಯ ಎರಡನೆಯ ತಿದ್ದುಪಡಿ ಮೇಲಿನ ಚರ್ಚೆ

### 29ನೇ ಆಗಸ್ಟ್ 1974

**ಶ್ರೀ ಪಿ.ಎಂ. ಬಾಂಗಿ (ಜಮಖಂಡಿ)**– ಮಾನ್ಯ ಅಧ್ಯಕ್ಷರೇ, ಈ ತಿದ್ದುಪಡಿಯನ್ನು ನಾನು ಸ್ವಾಗತಿಸುತ್ತಾ ಕೆಲವು ಅಂಶಗಳನ್ನು ಸರ್ಕಾರದ ಗಮನಕ್ಕೆ ತರುತ್ತಿದ್ದೇನೆ. ಇದರಲ್ಲಿನ ಕೆಲವು ದೋಷಗಳ ಮೂಲಕ ಕೋರ್ಟುಗಳಲ್ಲಿ ಜಜಮೆಂಟ್ ಆಗಿದ್ದರೂ ಪುನರಪಿ ಗೇಣೀದಾರರಿಗೆ ತೊಂದರೆಯಾಗುವ ಸಂಭವವಿದೆ. ಆ ವಿಚಾರದಲ್ಲಿ ಬಹುಮುಖ್ಯವಾಗಿ ಗೇಣಿದಾರರಿಗೆ ರಕ್ಷಣೆ ಕೊಡಬೇಕಾಗಿರುವುದರಿಂದ ಮಾನ್ಯ ಕಂದಾಯ ಮಂತ್ರಿಗಳು ಸೂಕ್ತ ತಿದ್ದುಪಡಿಗಳನ್ನು ಈ ಮಸೂದೆಯಲ್ಲಿ ತರಬೇಕೆಂದು ನಾನು ಸೂಚಿಸಬಯಸುತ್ತೇನೆ. ಈ ತಿದ್ದುಪಡಿಯ 2ನೇ ಕ್ಲಾಜಿನಲ್ಲಿ ಗೇಣಿದಾರ ಪ್ರತಿವಾದಿ ಆಗಿದ್ದರೆ ಅವನಿಗೆ ರಕ್ಷಣೆ ಸಿಕ್ಕಿದೆ. ಆದರೆ ಗೇಣಿದಾರ ವಾದಿಯಾಗಿದ್ದರೆ ಮತ್ತು ಅವನು ರಕ್ಷಣೆಗಾಗಿ ಕೋರ್ಟಿಗೆ ಹೋದರೆ ಈ ತಿದ್ದುಪಡಿ ಪ್ರಕಾರ ಅವನಿಗೆ ಯಾವ ರಕ್ಷಣೆಯೂ ಇಲ್ಲ. ಗೇಣಿದಾರ ಒಂದು ವೇಳೆ ಸಿವಿಲ್

ಕೋರ್ಟಿಗೆ ಹೋದರೆ ಮಾಲೀಕರ ವಿರುದ್ಧ ವಾದ ಮಾಡುವುದಕ್ಕೆ ಅವನಿಗೆ ಅವಕಾಶವಿರಬೇಕು. ಆದುದರಿಂದ ಸೂಕ್ತವಾದ ತಿದ್ದುಪಡಿ ಇಲ್ಲಿ ಅವಶ್ಯಕ. ಗೇಣಿದಾರ ವಾದಿಯಾಗಿರಲಿ, ಪ್ರತಿವಾದಿಯಾಗಿರಲಿ ಯಾವ ಕೋರ್ಟಿಗೆ ಹೋದರೂ ಅವನಿಗೆ ರಕ್ಷಣೆ ಕೊಡುವುದು ಒಳ್ಳೆಯದು. ಮಾನ್ಯ ಕಂದಾಯ ಮಂತ್ರಿಗಳು ಈ ವಿಚಾರದಲ್ಲಿ ಅವನಿಗೆ ರಕ್ಷಣೆ ಕೊಡಲು ತಕ್ಕ ವ್ಯವಸ್ಥೆ ಮಾಡಿ ಇದರಲ್ಲಿ ಸೂಕ್ತ ತಿದ್ದುಪಡಿ ಮಾಡಬೇಕೆಂದು ಹೇಳುತ್ತೇನೆ.

ಇನ್ನು ಮೂರನೆಯ ಕ್ಲಾಜ್ (ಎರಡನೆಯ ತಿದ್ದುಪಡಿಯ ಪ್ರಕಾರ) ನಲ್ಲಿ ಎ.ಬಿ.ಸಿ. ಈ ಮೂರು ಕಲಮುಗಳಲ್ಲಿ ಹೇಳಿರುವ ವಿಚಾರವನ್ನು ನೋಡಿದರೆ, ಹೈಕೋರ್ಟಿನಲ್ಲಿ ಪೆಂಡಿಂಗ್ ಪ್ರೊಸೀಡಿಂಗ್ಸ್ ಬಗ್ಗೆ ಇದರಲ್ಲಿ ಈ ರೀತಿಯಾಗಿ ಹೇಳಿದೆ.

Clause 3. Disposal of certain pending proceedings, etc.,

1) Notwithstanding anything in any law for the time being in force, the provisions of clause ( 3 ) of sub-section (2) of section 133 of the Karnataka Land Performs Act, 1961 (Karnataka Act 10 of 1962) as amended by this Act, shall be applicable to all proceedings commenced before the date of commencement of this Act and...

a) pending before any Civil Court;

b) pending before an appellate court in appeal against the judgement or order of the Civil Court; or

c) finally disposed of by such courts after the first day of March 1974.

ಇದರಲ್ಲಿ ಹೇಳಿರುವ ಪ್ರಕಾರ ಹೈಕೋರ್ಟಿನಲ್ಲಿ ರಿವಿಜನ್ ಪೆಂಡಿಂಗ್ ಇದ್ದರೆ, ಅದರ ಬಗ್ಗೆ ಮೂರನೆಯ ಕಲಂನಲ್ಲಿ ಏನೂ ಹೇಳಿಲ್ಲ. ಆ ದೃಷ್ಟಿಯಿಂದ ಮತ್ತೊಂದು (ಡಿ) ಕಲಂ ಹಾಕಿ ಈ ರೂಲನ್ನು ರಿವೈಜ್ ಮಾಡುವ ಅವಶ್ಯಕತೆ ಇದೆ. ಅದೇ ಪ್ರಕಾರ 1.3.74 ರಿಂದ 31.12.74ರ ನಡುವೆ ಮುನ್ಸಿಫ್ ಕೋರ್ಟಿನಲ್ಲಿ ಮಾಲೀಕರು ಗೇಣೀದಾರರ ವಿರುದ್ಧ ಆಪಾದನೆಗಳನ್ನು ಮಾಡಿ ಟೆಂಪರರಿ ಇಂಜಂಕ್ಷನ್ ಪಡೆದ ಸಂದರ್ಭದಲ್ಲಿ ಅವುಗಳನ್ನು ವೆಕೇಟ್ ಮಾಡುವುದರ ಬಗ್ಗೆ ಈ ಕಾಯ್ದೆಯಲ್ಲಿ ಏನೂ ಹೇಳಲಿಲ್ಲ. ಟೆಂಪರರಿ ಇಂಜಂಕ್ಷನ್‌ಅನ್ನು ವೆಕೇಟ್ ಮಾಡಿದ ಮೇಲೆ ಟ್ರಿಬ್ಯೂನಲ್ಲಿಗೆ ಅದನ್ನು ರೆಫರ್ ಮಾಡಬೇಕೆಂಬ ಬಗ್ಗೆ ಈ ತಿದ್ದುಪಡಿಯಲ್ಲಿ ಯಾವುದೆ ಪ್ರಾವಿಷನ್ ಇಲ್ಲ. ಆದ್ದರಿಂದ ಮಾನ್ಯ ಮಂತ್ರಿಗಳು ಈ ವಿಷಯದಲ್ಲಿ ವಿಚಾರ ಮಾಡಬೇಕು.

ಶ್ರೀ ಎನ್. ಹುಚ್ಚಮಾಸ್ತಿಗೌಡ– ಎರಡನೆಯ ಅಮೆಂಡ್‌ಮೆಂಟಿನ 3ನೇ ಕ್ಲಾಜ್ (ಸಿ) ನಲ್ಲಿ ಅದಕ್ಕೆ ಸೂಕ್ತವಾಗಿ ಹೇಳಿದೆ.

ಶ್ರೀ ಪಿ.ಎಂ. ಬಾಂಗಿ– ಅದರಲ್ಲಿ ಸಬ್ ಕೋರ್ಟ ಎಂಬುದಾಗಿ ಹಾಕಿರುವುದರಿಂದ, ಅದು ಮುನ್ಸೀಫ್ ಕೋರ್ಟ ಅಥವಾ ಅಪೆಲೆಟ್ ಕೋರ್ಟ ಆದರೂ ಆಗಬಹುದು.

ಶ್ರೀ ಎನ್. ಹುಚ್ಚಮಾಸ್ತಿಗೌಡ– (ಎ) ಮತ್ತು (ಬಿ) ನಲ್ಲಿ ಹೇಳಿರುವ ಪ್ರಕಾರ ನೋಡಿದರೆ ಅದು ಯಾವುದೇ ಕೋರ್ಟ್ ಆಗಿರಬಹುದು. "(a) Pending before any Civil Court, (b) Pending before an Appellate Court in appeal against the judgement or order of the Civil Court; or (c) finally disposed of by such courts.."

**Sri P. M. Bangi-** By such courts refers to (a) and (b) but it does not include High Court... ಆದ್ದರಿಂದ ಭೂಸುಧಾರಣೆ ಕಾಯ್ದೆಯನ್ನು ಕಾರ್ಯಾಚರಣೆಗೆ ತರುವ ಸಂದರ್ಭದಲ್ಲಿ ಸಾಕಷ್ಟು ದೋಷಗಳು ಬಂದಿರುವುದುಂಟು. ಮುಂಬೈದಲ್ಲಿ 1948 ರಿಂದ 1957ರ ನಡುವಿನ ಅವಧಿಯಲ್ಲಿ 17 ತಿದ್ದುಪಡಿಗಳನ್ನು ತಂದು ಗೇಣಿದಾರರಿಗೆ ರಕ್ಷಣೆ ಕೊಟ್ಟರು. ಆ ಪ್ರಕಾರ ಇಲ್ಲಿ

ಕೂಡ ಭೂಸುಧಾರಣೆ ಕಾಯ್ದೆಗಳನ್ನು ಪುನಃ ಪುನಃ ಪರಿಶೀಲನೆ ಮಾಡಿ ಕೋರ್ಟಿನಲ್ಲಿ ಬರತಕ್ಕ ತೊಂದರೆಗಳನ್ನು ತಪ್ಪಿಸುವುದಕ್ಕೆ ಸೂಕ್ತ ತಿದ್ದುಪಡಿಗಳನ್ನು ತರಬೇಕು. ಮಾನ್ಯ ಕಂದಾಯ ಮಂತ್ರಿಗಳು ಇದನ್ನೆಲ್ಲಾ ವಿಚಾರಮಾಡಿ ಎಲ್ಲೆಲ್ಲಿ ಲೋಪದೋಷಗಳಿವೆಯೋ ಅವುಗಳಿಗೆ ಸೂಕ್ತ ತಿದ್ದುಪಡಿಗಳನ್ನು ಮಾಡಿ ಒಟ್ಟಿನಲ್ಲಿ ಗೇಣೀದಾರರಿಗೆ ಸಂರಕ್ಷಣೆ ಕೊಡಬೇಕೆಂದು ನಾನು ಈ ಸಂದರ್ಭದಲ್ಲಿ ಸೂಚಿಸಬಯಸುತ್ತೇನೆ. ಇಷ್ಟು ಹೇಳಿ ನನ್ನ ಭಾಷಣವನ್ನು ಮುಗಿಸಿತ್ತೇನೆ.

## ಟಿಪ್ಪಣಿ ರೂಪದ ಬಿಡಿ ಪ್ರಶ್ನೆಗಳು

### 22ನೇ ಆಗಸ್ಟ್ 1974

**Sri P. M. Bangi (Jamkhandi)-** Will the Minister for Co-operation be pleased to state.

a) the number of Urban Co-operative Banks in Bijapur District and their names;

b) whether any of these Banks has among its employees, persons belonging to Scheduled Caste and Scheduled Tribes Community;

c) whether Government has issued any circular to compel such Branks to reserve 18% of the posts to SC/ST in each Bank.

d) whether any instance has come to the notice of Government wherein the Urban Co-operative Bank has filled up the vacancies without notifying the same in newspapers?

**Sri C.N. Patil (Minister for Co-operation)**

a) 18, List placed on the Table of the House.

b) No.

c) Yes.

d) No.

**ಶ್ರೀ ಪಿ. ಎಂ. ಬಾಂಗಿ**– ನನ್ನ ಪ್ರಶ್ನೆ (ಸಿ) ಉತ್ತರದಲ್ಲಿ ಹೌದು ಎಂದು ಹೇಳಿದ್ದೀರಿ. ಈ ಆಜ್ಞೆಯನ್ನು ಎಂದು ಹೊರಡಿಸಿದ್ದೀರಿ? ಯಾವ ತಾರೀಖು ಎಂಬುದನ್ನು ಹೇಳುತ್ತೀರಾ?

**ಶ್ರೀ ಸಿ.ಎನ್. ಪಾಟೀಲ್**– 1970ನೇ ಇಸ್ವಿಯಲ್ಲಿ ಜನರಲ್ ಆಗಿ ಒಂದು ಇನ್‌ಸ್ಟ್ರಕ್ಷನ್ ಕೊಡಲಾಗಿದೆ. ಕಾನೂನು ತಿದ್ದುಪಡಿ ಮಾಡದೆ ಅದನ್ನು ಇಂಪ್ಲಿಮೆಂಟ್ ಮಾಡುವುದಕ್ಕೆ ಸಾಧ್ಯವಿಲ್ಲ.

**ಶ್ರೀ ಪಿ. ಎಂ. ಬಾಂಗಿ**– 18 ಪರ್ಸೆಂಟ್ ರಿಜರ್ವ್ ಇಟ್ಟಿರುವುದರಲ್ಲಿ ಎಸ್.ಸಿ/ಎಸ್.ಟಿ ಪೈಕಿ ಯಾರನ್ನೂ ನೇಮಿಸಿಲ್ಲವೆಂದು ಉತ್ತರದಲ್ಲಿ ಹೇಳಿದ್ದೀರಿ. ಈ ಬಗ್ಗೆ ಸರ್ಕಾರ ಏತಕ್ಕೆ ಕ್ರಮವನ್ನು ತೆಗೆದುಕೊಂಡಿಲ್ಲ.

**ಶ್ರೀ ಸಿ.ಎನ್. ಪಾಟೀಲ್**– ನಾನು ಈಗಾಗಲೇ ಇದಕ್ಕೆ ಉತ್ತರ ಹೇಳಿದ್ದೇನೆ. ಕಾನೂನಿನಲ್ಲಿ ತಿದ್ದುಪಡಿ ಮಾಡದೆ ಈ ಸಂಸ್ಥೆಗಳ ಮೇಲೆ ಎನ್‌ಫೋರ್ಸ್‌ಮೆಂಟ್ ಮಾಡುವುದಕ್ಕೆ ಬರುವುದಿಲ್ಲ. ಅದಕ್ಕಾಗಿ ಕಾನೂನಿನಲ್ಲಿ ತಿದ್ದುಪಡಿ ಮಾಡಬೇಕೆಂದು ಸರ್ಕಾರದವರ ಗಮನದಲ್ಲಿದೆ ಒಮ್ಮೆ ಈಗಾಗಲೇ ಹೇಳಿದ್ದೇನೆ.

**ಶ್ರೀ ಪಿ. ಎಂ. ಬಾಂಗಿ**– ಈ ಬಗ್ಗೆ ಕೋಆಪರೇಟಿವ್ ಆ್ಯಕ್ಟ್‌ನ 17 (ಸಿ) ನಲ್ಲಿ ಸ್ಪಷ್ಟವಾಗಿ ಹೇಳಿದೆ. ಆದಾಗ್ಯೂ ಜಮಖಂಡಿ ಮತ್ತು ಉಳಿದ ಬ್ಯಾಂಕ್‌ಗಳಲ್ಲಿ

ಯಾವುದೇ ರೀತಿಯಿಂದಲೂ ಜಾಹಿತಾರು ಕೊಡದೆ ತಮಗೆ ಬೇಕಾದ ಆಪ್ತರನ್ನು ನೆಂಟರಿಷ್ಟರನ್ನು ನೇಮಕ ಮಾಡುತ್ತಿದ್ದಾರೆ. ಈ ಬ್ಯಾಂಕ್‌ಗಳಲ್ಲಿ ಸರ್ಕಾರದ ಷೇರ್ ಹಣ ಇರಲಿ, ಇಲ್ಲದಿರಲಿ ಅವರು ಈ ಕಾನೂನನ್ನು ಜಾರಿಗೆ ತರಬೇಕಾಗುತ್ತದೆ. ಆ ರೀತಿ ತರದಿದ್ದರೆ ಅವರ ವಿರುದ್ಧ ಏನು ಕ್ರಮ ಕೈಕೊಳ್ಳುತ್ತೀರಾ?

**ಶ್ರೀ ಸಿ.ಎನ್. ಪಾಟೀಲ್**– ಜಮಖಂಡಿ ಬ್ಯಾಂಕ್ ಮತ್ತು ಬಿಜಾಪುರದ ಅರ್ಬನ್ ಡೆವಲಪ್‌ಮೆಂಟ್ ಬ್ಯಾಂಕ್‌ನಲ್ಲಿ ಸರ್ಕಾರದ ಪಾಲಿನ ಹಣವಿಲ್ಲ. ಆದರೂ ಅವರ ಮೇಲೆ ಈ ಬಗ್ಗೆ ಏನಾದರೂ ಎನ್‌ಫೋರ್ಸ್‌ಮೆಂಟ್ ಮಾಡಬೇಕಾಗಿದ್ದರೆ ಕಾನೂನಿಗೆ ತಿದ್ದುಪಡಿ ತರಬೇಕಾಗುತ್ತದೆ.

**ಶ್ರೀ ಪಿ. ಎಂ. ಬಾಂಗಿ**– ನಾನು ಕೇವಲ ಹರಿಜನ ಮತ್ತು ಗಿರಿಜನರ ಬಗ್ಗೆ ಹೇಳುತ್ತಿಲ್ಲ. ಜನರಲ್ ಆಗಿ ಸಹ ಅವರು ಪೋಸ್ಟ್‌ಗಳನ್ನು ಭರ್ತಿ ಮಾಡುವಾಗ ಜಾಹೀರಾತು ಕೊಡುತ್ತಿಲ್ಲ ಎಂಬುದು ನನ್ನ ಪ್ರಶ್ನೆ.

**ಶ್ರೀ ಸಿ.ಎನ್. ಪಾಟೀಲ್**– ಆ ಬಗ್ಗೆ ಕ್ರಮ ಕೈಕೊಳ್ಳುತ್ತೇನೆ.

## ಟಿಪ್ಪಣಿ ರೂಪದ ಬಿಡಿ ಪ್ರಶ್ನೆಗಳು

### 13ನೇ ಫೆಬ್ರವರಿ 1975

**Sri P.M. Bangi (Jamkhandi)-** Will the Minister for Industries and Parliamentary Affairs be pleased to state:-

a) the number of Sugar Factories which are in working condition in the State (District wise details may be given)

b) the rates per tonne at which the prices for sugarcane are paid to the growers by respective Sugar factories during 1973-74;

c) whether the High Power Committee constituted under the Chairmanship of the Chief Minister has fixed the prices to be paid to the Sugarcane suppliers by the respective factories during the year 1973-74.

d) if so, the rates fixed to be paid to them;

e) if not, when the rates are proposed to be fixed?

**Sri S.M. Krishna (Minister for Industries and Parliamentary Affairs)**

a) Seventeen. District-wise location of the factories is a follows:-

| Name of District | No. of Sugar factories |
|---|---|
| 1. Mandya | 3 |
| 2. Shimoga | 1 |
| 3. Bellary | 3 |
| 4. Raichur | 1 |
| 5. Belgaum | 4 |
| 6. Kolar | 1 |
| 7. Chitradurga | 2 |
| 8. Bidar | 1 |
| 9. Bijapur | 1 |

b) For details vide statement appended.

c) No. The minimum price fixation is done by the Government of India under Sugarcane Control Order, 1966. The subject was however discussed in the High Power Committee meeting held on 27.11.1973, when it was learnt that all the sugar factories were paying sugarcane price over and above the minimum price fixed by the Central Government. Since the crushing season had already started and the factories were paying prices over and above the minimum prices fixed by the Government of India, the High Power Committee did not fix any price for 1973-74.

d) In view of reply to clause (b) this does not arise.

e) The State Government do not propose to fix any rate for 1973-74 now. In the meeting taken by the Chief Minister on 23.11.1974, it has been decided to pay a minimum ad-hoc ex-factory rate of Rs. 130.00 per metric ton for the year 1974-75, which is very much more than the minimum prices fixed by Government of India.

## STATEMENT

[Vide reply to clause (b) of Starred Question No. 15 (13)]

| Name of the Sugar Factory | | District-wise The rates per ton at which the prices for sugarcane are paid to the sugarcane growers who have supplied sugarcane to respective sugar factories during 1973-74 |
|---|---|---|
| | **Mandya District** | |
| 1 | Mysore Sugar Company | 131.00 |
| 2 | Chamundeswari Sugar Co. K.M. Doddi | 120.00 |
| 3 | Pandavapura SSK Limited | 141.00 |

| 1 | 2 | 3 |
|---|---|---|
| | **Shimoga District** | |
| 1 | 1.Thungabhadra Sugars Works | 122.00 |
| | **Bellary District** | |
| 1 | India Sugar and Refineries, Hospet | 123.00 |
| 2 | Kothari Sugars and Chemicals, Densur | 118.00 |
| 3 | Kampli Co-operative Sugar Factory Limited | 120.50 |
| | **Raichur District** | |
| 1 | Salarjung Sugar Mills | 113.00 |
| | **Belgamu District** | |
| 1 | Ugar Sugar Works | 148.00 |
| 2 | Hiranyakeshi SSK Ltd. Sankeswar | 180 |
| 3 | Malprabha Copoperative Sugar Factory Limited, M.K. Hubli | 152.00 |
| 4 | Doodhagana Krishna S.S.K. Limited, Chikodi | Started during 1974-75 |
| | **Kolar District** | |
| 1 | Guribidanur Co-operative Factory. | 137.50 |
| | **Chitradurga District** | |
| 1 | Vinivilas Co-operative Sugar Factory, Hiriyur | |

| 1 | 2 | 3 |
|---|---|---|
| | Davanagere Sugar Co. Limited Davanagere | Started during 1974-75 |
| | Bidar SSK Limted, Bidar | Did not function in 1973-74 on account of drought condition in the District. |
| | Bijapur District | |
| | Somaiya Sugar Works, Sameerwadi | 125.00 |

ಶ್ರೀ ಪಿ. ಎಂ. ಬಾಂಗಿ– ನನ್ನ (ಇ) ಪ್ರಶ್ನೆಗೆ ಉತ್ತರವಾಗಿ ಇಲ್ಲವೆಂದು ಹೇಳಿದ್ದೀರಿ. ಈಗಾಗಲೇ ಒಂದು ಕಮಿಟಿ ನೇಮಕವಾಗಿದ್ದರೂ ಅದಕ್ಕೆ ರೇಟ್ ಫಿಕ್ಸ್ ಮಾಡುವ ಅಧಿಕಾರವಿಲ್ಲ. ಆದರೆ ಈ ಕಮಿಟಿ ಯಾವಾಗ ರಚನೆಯಾಯಿತು? ನನ್ನ ಅಭಿಪ್ರಾಯದ ಪ್ರಕಾರ ಈಗಾಗಲೇ ಒಂದು ಹೈಪವರ್ ಕಮಿಟಿ ಸ್ಟೇಟ್ ಲೆವಲ್‌ನಲ್ಲಿ ಏನಿದೆಯೋ ಅದು ಭಾರತ ಸರ್ಕಾರದವರೊಡನೆ ನಿಗೋಷಿಯೆಟ್ ಮಾಡಿ ಎರಡು ಸಾರಿ ರೇಟನ್ನು ನಿಗದಿಮಾಡಿರುವುದು ನಿಜವೇ?

ಶ್ರೀ ಎಸ್.ಎಂ. ಕೃಷ್ಣ– ಇದರ ಬಗ್ಗೆ ಒಂದು ಹೈಪವರ್ ಕಮಿಟಿ ಇದ್ದರೂ ಅದಕ್ಕೆ ಸ್ಟಾಟುಟರಿ ಪವರ್ಸ್ ಇಲ್ಲ. ಮ್ಯಾನೇಜ್‌ಮೆಂಟ್ ಮತ್ತು ಕಬ್ಬು ಬೆಳೆಗಾರರ ನಡುವೆ ಏನಾದರೂ ಸಮಸ್ಯೆಗಳು ಬಂದರೆ ಅದನ್ನು ಬಗೆಹರಿಸುವುದಕ್ಕೆ ಕಬ್ಬು ಬೆಳೆಯುವ ರೈತರಿಗೆ ಒಂದು ನ್ಯಾಯ ಬೆಲೆ ಸಿಗುವ ಹಾಗೆ 3–4 ಜನ ಮಂತ್ರಿಗಳು ಇದಕ್ಕೆ ಯಾರ್‍ಯಾರು ಸಂಬಂಧಿಸಿದ್ದಾರೋ ಅಂತಹವರು ಆಗಾಗ್ಗೆ ಇಂತಹ ವಿಚಾರಗಳ ಕಡೆಗೆ ಗಮನಕೊಡುತ್ತಾರೆ. ಆನಂತರ ಅವರು ಒಂದು ತೀರ್ಮಾನ ಮಾಡುತ್ತಾರೆ.

ಶ್ರೀ ಪಿ. ಎಂ. ಬಾಂಗಿ– ಪರಿಶಿಷ್ಟದಲ್ಲಿ ಕೊಟ್ಟಿರುವ ರೇಟ್‌ಗಳಲ್ಲಿ ತುಂಬಾ ವ್ಯತ್ಯಾಸವಿದೆ. ಆ ಬಗ್ಗೆ ಕ್ಲಾರಿಫಿಕೇಷನ್ ಕೊಡುತ್ತೀರಾ?

ಶ್ರೀ ಎಸ್.ಎಂ. ಕೃಷ್ಣ– ಅದು ಫ್ಯಾಕ್ಟರಿಯಿಂದ ಕೊಡತಕ್ಕ ರೇಟ್.

ಶ್ರೀ ಪಿ. ಎಂ. ಬಾಂಗಿ– ಸಂಕೇಶ್ವರ ಷುಗರ್ ಫ್ಯಾಕ್ಟರಿಯವರು ಒಂದು ಟನ್ ಕಬ್ಬಿಗೆ 180 ರೂಪಾಯಿಗಳಂತೆ ಕೊಡುತ್ತಿದ್ದಾರೆ. ಯಾವ ಫ್ಯಾಕ್ಟರಿಯವರೂ ಇಷ್ಟು ರೇಟ್ ಕೊಡುವುದಿಲ್ಲ. 120 ರೂಪಾಯಿಗಳಿಗಿಂತ ಹೆಚ್ಚಿಗೆ ಬೇರೆಯವರು ಕೊಡುವುದಿಲ್ಲ. ಷುಗರ್ ಅಂಶ ಎಷ್ಟಿದೆ ?

ಶ್ರೀ ಎಸ್.ಎಂ. ಕೃಷ್ಣ– ಸಂಕೇಶ್ವರದ್ದು 11.5 ಚಾಮುಂಡೇಶ್ವರಿ ಷುಗರ್ ಫ್ಯಾಕ್ಟರಿ ಈಗ ತಾನೇ ಷುರುವಾಗಿದೆ. ಈಗಲೇ ಅದರ ಎವರೇಜನ್ನು ಹೇಳುವುದಕ್ಕಾಗುವುದಿಲ್ಲ.

## ಟಿಪ್ಪಣಿ ರೂಪದ ಬಿಡಿ ಪ್ರಶ್ನೆಗಳು

### 14ನೇ ಫೆಬ್ರವರಿ 1975

**Sri P. M. Bangi (Jamkhandi)**- Will the Chief Minister be pleased to State:-

a) whether there were disturbances and breach of peace at Athani town in district Belgaum, at Jamkhandi, Rabakavi and Banhatti towns in Jamkhandi taluka, at Saidapur Somayya Sugar Factory and at Mudhol, owing to Karnataka-Maharashtra border dispute, in the month of December 1973;

b) whether two persons at Athani and one Mandavakar Merchant at Rabakavi and one Police Constable at Rabakavi lost their lives during the disturbance;

c) whether it has come to the notice of Government that the movable properties of the residents of Athani, Jamkhandi, Rabakavi, Banahatti and Mudhol and of Somayya Sugar Factory were looted and consigned to fire by the goondas of the respective localities;

d) the names of persons who have lost their lives and properties in Athani, Jamkhandi and Mudhol talukas in district Bijapur;

e) whether relief by way of compensation and in the from of loans is granted to the sufferers in the border disturbance during the month of December;

f) the amount of compensation claimed by each of them and also by the Manager of Somayya Sugar Factory at Saidapur and the amount paid to them?

**Sri D. Devaraj Urs (Chief Minister)-**

a) Yes.

b) 3 persons at Athani and one Police Constable at Rabakavi lost their lives during the disturbances. The death of Sri Mandavakar, merchant of Rabakavi, was due to heart failure.

c) Yes, as per statement 'A' placed on the Table of the House.

d) Persons who lost their lives;

**Athani:**

1. Ramesh Halagekar
2. Rambhav Halagekar
3. Mahadev Shivabasappa Kallolli (student)

**Jamkhandi:** None

**Mudhol:**

1. Mallappa Bhimappa Konur

2. Erappa Shivayogappa Navalgi

These two persons were killed in Police Firing.

e) Yes.

f) Vide Statement 'B' placed on the Table of the House.

ಶ್ರೀ ಪಿ. ಎಂ. ಬಾಂಗಿ– (ಬಿ) ಗೆ ಉತ್ತರವಾಗಿ " 3 persons at Athani and one Police Constable at Rabakavi lost their lives during the disturbances. The death of Sri Mandavakar, merchant of Rabakavi, was due to heart failure" ಎಂದು ಹೇಳಿದ್ದೀರಿ. ಇಲ್ಲಿ ಗುಂಡು ಹಾರಿಸಿದಾಗ ಒಬ್ಬರು ಪೋಲೀಸು ಕಾನ್ಸ್‌ಟೇಬಲ್ ಸತ್ತರು ಎಂದು ಕೇಳಿದೆ. ಇದರ ಬಗ್ಗೆ ತನಿಖೆಯನ್ನು ಸರಿಯಾಗಿ ಪೂರೈಸಿದ್ದಾರೆಯೇ ಇಲ್ಲವೇ?

**Sri S.M. Krishna-** The constable was killed when he was trying to safeguard the life of Sri Mandavakar. That was a disturbance on a large scale and so while the Constable was trying to do his duty to maintain law and order, he was killed.

**ಶ್ರೀ ಪಿ.ಎಂ. ಬಾಂಗಿ–** ನಮಗೆ ಒದಗಿಸಿರುವ ಸ್ಟೇಟ್‌ಮೆಂಟ್‌ನಲ್ಲಿ ಸೋಮಯ್ಯ ಷುಗರ್ ವರ್ಕ್ಸ್‌ರವರಿಗೆ 75 ಲಕ್ಷ ರೂಪಾಯಿ ಕೊಡಲಾಗಿದೆ ಎಂದು ಇದೆ. ಇವರು ಮಾಡಿರುವ ಒಟ್ಟು ಕ್ಲೇಂ ಹಣ ಎಷ್ಟು?

**ಶ್ರೀ ಎಸ್.ಎಂ. ಕೃಷ್ಣ–** ನಾವು ಪರಿಹಾರ ಕೊಟ್ಟಿದ್ದಕ್ಕಿಂತ ಜಾಸ್ತಿ ಬೇಡಿಕೆ ಕೊಟ್ಟಿದ್ದರು. ಇದನ್ನು ಕಡಿಮೆ ಮಾಡಿ ಕೊಡಲಾಗಿದೆ.

**ಶ್ರೀ ಪಿ. ಎಂ. ಬಾಂಗಿ–** 75 ಲಕ್ಷ ರೂಪಾಯಿ ಸಹಾಯ ಧನವಾಗಿ ಹಾಗೂ 26 ಲಕ್ಷ ರೂಪಾಯಿ ಸಾಲವಾಗಿ ಫ್ಯಾಕ್ಟರಿಯವರಿಗೆ ಕೊಡಲಾಗಿದೆ ಎಂದು ಇದೆ. ಆದರೆ ಇಲ್ಲಿ ವಿಪರೀತ ಹಾನಿ ಫ್ಯಾಕ್ಟರಿ ಹಾಗೂ ಯಂತ್ರೋಪಕರಣಗಳಿಗೆ ಆಗಿದೆ. ಇದರ ಎಲ್ಲ ಬೆಲೆಗಳನ್ನು ಸರಿಯಾಗಿ ತಿಳಿದುಕೊಂಡು ನೋಡುವಾಗ ಪರಿಹಾರವಾಗಿ ಕೊಟ್ಟಿರುವುದು ತುಂಬಾ ಕಡಿಮೆ ಎನ್ನುವುದು ಸರ್ಕಾರದ ಅಭಿಪ್ರಾಯಕ್ಕೆ ಬರಲಿಲ್ಲವೇ?

**ಶ್ರೀ ಎಸ್.ಎಂ. ಕೃಷ್ಣ–** ಪರಿಹಾರ ಕೊಟ್ಟಿಲ್ಲ. ಇವರಿಗೆ ಸಾಲವಾಗಿ ಸಹಾಯ ಮಾಡಿರುವುದು ಮತ್ತು ನಮ್ಮ ಇಲಾಖೆಯ ಅಧಿಕಾರಿಗಳೇ ಅಲ್ಲಿ ಸ್ವತಃ ಹೋಗಿ ಎಷ್ಟು ಹಾನಿಯಾಗಿದೆ ಅದನ್ನು ಸರಿಯಾಗಿ ನೋಡಿಕೊಂಡು ಬಂದು ಆನಂತರ ವರದಿ ಕೊಟ್ಟಿದ್ದಾರೆ. ಮಷಿನರಿಗೆ ಎಷ್ಟು ನಷ್ಟವಾಗಿದೆ ಎಂದು ಅವರು ಹೇಳಿರುವ ಅಂದಾಜುಗಳ ಪ್ರಕಾರ ಇವರಿಗೆ ಸಾಲವಾಗಿ ಸಹಾಯ ಮಾಡಲಾಗಿದೆ. ಕಾನೂನು ಪ್ರಕಾರ ಎಷ್ಟು ಸಹಾಯ ಮಾಡಲು ಸಾಧ್ಯವೋ ಅದನ್ನೂ ಮಾಡಿಕೊಡಲಾಗಿದೆ.

**ಶ್ರೀ ಪಿ. ಎಂ. ಬಾಂಗಿ–** ಇಲ್ಲಿ ನಡೆದ ಗಲಭೆಯಲ್ಲಿ ಸುಮಾರು ಒಂದು ಕೋಟಿ ಇಪ್ಪತ್ತು ಸಾವಿರ ರೂಪಾಯಿಗಳ ನಷ್ಟವಾಗಿದೆ ಎಂದು ತಿಳಿದುಬರುತ್ತದೆ.

ಹಾಗಿದ್ದರೂ ಸರಕಾರ ಸರಿಯಾದ ಪರಿಹಾರ ಕೊಟ್ಟಿಲ್ಲ. ಇಲ್ಲಿ ಆದ ಗಲಭೆಗಳ ಬಗ್ಗೆ ಮಹಾರಾಷ್ಟ್ರ ಸರಕಾರದವರು ಕೂಡ ಅಲ್ಲಿ ಕೇಸು ಹಾಕಿ ಕೆಲವರ ಮೇಲೆ ಪರಿಹಾರ ಕೊಡಬೇಕೆಂದು ಕೇಳಿದ್ದಾರೆ. ಇದು ನಮ್ಮ ಸರಕಾರದ ಗಮನಕ್ಕೆ ಬಂದಿದೆಯೇ ಹೇಗೆ?

**ಶ್ರೀ ಎಸ್.ಎಂ. ಕೃಷ್ಣ**– ನಾವು ನಮ್ಮ ಜುರಿಸ್‌ಡಿಕ್ಷನ್‌ನಲ್ಲಿ ಯಾರ ಮೇಲೆ ಕ್ರಮ ತೆಗೆದುಕೊಳ್ಳಬೇಕು, ಯಾರ ಯಾರ ಮೇಲೆ ಕೇಸು ಹಾಕಬೇಕು ಅದನ್ನು ನಾವು ಮಾಡಿದ್ದೇವೆ. ಮಹಾರಾಷ್ಟ್ರ ಸರ್ಕಾರದವರು ಏನು ಮಾಡಿದ್ದಾರೆ ಎಂಬುದನ್ನು ಬರೆದು ತಿಳಿದುಕೊಳ್ಳಬೇಕಾಗುತ್ತದೆ.

## ರಾಜ್ಯಪಾಲರ ಭಾಷಣದ ವಂದನಾ ನಿರ್ಣಯದ ಮೇಲಿನ ಚರ್ಚೆ

### 14ನೇ ಫೆಬ್ರವರಿ 1975

**ಶ್ರೀ ಪಿ. ಎಂ. ಬಾಂಗಿ**– ಮಾನ್ಯ ಉಪಸಭಾಧ್ಯಕ್ಷರೇ, ಮಾನ್ಯ ಶ್ರೀ ಕೆ. ಪ್ರಭಾಕರ್ ಅವರು ರಾಜ್ಯಪಾಲರ ವಂದನಾರ್ಪಣೆಗೆ ತಂದ ನಿರ್ಣಯವನ್ನು ಅನುಮೋದಿಸಿ ಕೆಲವು ವಿಷಯಗಳನ್ನು ಹೇಳಬಯಸುತ್ತೇನೆ.

### ಬಡ, ದುರ್ಬಲ ವರ್ಗದವರಿಗೆ ಸಹಾಯ ಮಾಡಿ:

ನಮ್ಮ ರಾಜ್ಯದಲ್ಲಿ 1972ನೇ ಇಸವಿಯಲ್ಲಿ ಹೊಸ ಚುನಾವಣೆಯಾಗಿ ನಮ್ಮ ಮಂತ್ರಿಮಂಡಲ ಅಧಿಕಾರಕ್ಕೆ ಬಂದ ನಂತರ ದುರ್ಬಲ ವರ್ಗಗಳಿಗೆ ಇಲೆಕ್ಷನ್ ಸಮಯದಲ್ಲಿ ನಮ್ಮ ಪಾರ್ಟಿ ಕೊಟ್ಟಂತಹ ಆಶ್ವಾಸನೆಗಳನ್ನು ಪಾಲಿಸುವುದಕ್ಕೆ ಹತ್ತಿರುವುದು ಸಂತೋಷದ ಸಂಗತಿ. ಮನೆ ಇಲ್ಲದ ಬಡಜನಗಳಿಗೆ ಮನೆ, ಭೂಮಿ ಇಲ್ಲದವರಿಗೆ ಭೂಮಿ, ಸೈಟು ಇಲ್ಲದವರಿಗೆ ಸೈಟು ಕೊಡುತ್ತೇವೆ ಎಂದು ಇಲೆಕ್ಷನ್ ಟೈಮ್‌ನಲ್ಲಿ ಕೊಟ್ಟ ವಚನಗಳನ್ನು ಪರಿಪೂರ್ಣ ಮಾಡುವುದಕ್ಕೆ ಪ್ರಯತ್ನ ಮಾಡಿದೆ. ಜನತಾ ಗೃಹನಿರ್ಮಾಣ ಯೋಜನೆಯಲ್ಲಿ ಕಳೆದ ವರ್ಷ 14 ಸಾವಿರ ಮನೆಗಳು ಮತ್ತು ಈ ವರ್ಷ 20 ಸಾವಿರ ಮನೆಗಳನ್ನು

ಕಟ್ಟಲು ಮಂಜೂರಾತಿ ಕೊಟ್ಟಿದ್ದಾರೆ. ನಿವೇಶನ ಇಲ್ಲದವರಿಗೆ ಎರಡು ಲಕ್ಷ ನಿವೇಶನಗಳನ್ನು ಹಂಚುವುದಕ್ಕೋಸ್ಕರ ಅಕ್ವಿಜಿಷನ್ ಪ್ರೋಸೀಡಿಂಗ್ಸ್ ಪ್ರಾರಂಭ ಮಾಡಿದ್ದಾರೆ. ದುರ್ದೈವದಿಂದ ಬಡವರಿಗೆ ಮತ್ತು ದುರ್ಬಲ ವರ್ಗದವರಿಗೆ ಸಾಕಷ್ಟು ಸಹಾಯ ಸಿಗದಿರುವುದಕ್ಕೆ ವ್ಯಸನವಾಗುತ್ತದೆ.

**ಹರಿಜನ ಗಿರಿಜನರ ಹಿತ ಕಾಪಾಡಿ:**

ಭೂಸುಧಾರಣಾ ಕಾಯ್ದೆ ತಿದ್ದುಪಡಿಮಾಡಿ ಭೂಹೀನರಿಗೆ ಭೂಮಿಯನ್ನು ಹಂಚುವುದಕ್ಕಾಗಿ ಸರ್ಕಾರದವರು ಭೂಪಂಚಾಯ್ತಿಗಳನ್ನು ನೇಮಕಮಾಡಿ ಕೆಲಸವನ್ನು ಪ್ರಾರಂಭ ಮಾಡಿದ್ದಾರೆ. ಆದರೆ ಈ ಭೂಪಂಚಾಯ್ತಿಗಳಿಗೆ ಸಾಕಷ್ಟು ಅಧಿಕಾರಗಳಿಲ್ಲ. ಅವರಿಗೆ ಗೇಣಿದಾರರಿಗೆ ಟೆನೆನ್ಸಿ ಬಗ್ಗೆ ಇದ್ದ ವಾದವನ್ನು ನಿರ್ಣಯ ಮಾಡುವ ಅಧಿಕಾರ ಇದೆ. ಆದರೆ ಭೂಮಾಲೀಕರು ಭೂಸುಧಾರಣೆ ಕಾಯ್ದೆ ಮೇರೆಗೆ ಭೂಪರಿಮಿತಿಗಿಂತಲೂ ಹೆಚ್ಚಿನ ಭೂಮಿಯನ್ನು ಬೇರೆಯವರ ಹೆಸರಿನಲ್ಲಿ ವರ್ಗಾಯಿಸಿ ರೆವಿನ್ಯೂ ಅಧಿಕಾರಿಗಳ ಜೊತೆಗೂಡಿ ಬಂಧುಗಳ ಹೆಸರಿಗೆ ದಾಖಲು ಮಾಡಿಕೊಂಡಿದ್ದಾರೆ. ಈ ಬೋಗಸ್ ಎಂಟ್ರಿಗಳ ಬಗ್ಗೆ ತನಿಖೆ ಮಾಡಬೇಕು. ಜಮೀನ್ದಾರರ ಹೆಸರಿನಲ್ಲಿರುವ ಭೂಮಿ ಭೂಪರಿಮಿತಿಗಿಂತಲೂ ಹೆಚ್ಚಾಗಿರುತ್ತದೆ ಎಂದು ನಿರ್ಣಯಿಸುವ ಅಧಿಕಾರವು ತಹಶೀಲ್ದಾರರಿಗೆ ಇರುತ್ತದೆ. ಆದ್ದರಿಂದ ಸರ್ಕಾರದವರು ದಕ್ಷ ಮತ್ತು ಪ್ರಾಮಾಣಿಕ ತಹಶೀಲ್ದಾರರನ್ನು ನೇಮಿಸಬೇಕು ಮತ್ತು ತಹಶೀಲ್ದಾರರನ್ನು ಹತೋಟಿಯಲ್ಲಿಡಲು ಯೋಗ್ಯ ಕ್ರಮ ಕೈಗೊಳ್ಳಬೇಕೆಂದು ಸಲಹೆ ಮಾಡುತ್ತೇನೆ. ಹಾಗೆ ಮಾಡದೆ ಹೋದಲ್ಲಿ ಹರಿಜನ ಗಿರಿಜನರಿಗೆ ಮತ್ತು ಭೂಹೀನರಿಗೆ ಭೂಮಿ ಸಿಗುವುದಿಲ್ಲ. ಭೂಸುಧಾರಣೆ ಕಾಯ್ದೆ ಕಲಮು 48 ರ ಪ್ರಕಾರ ಜಮೀನುಗಳಲ್ಲಿ ಹಿತಾಸಕ್ತಿ ಇರುವಂಥವರಿಗೆ ನೋಟೀಸ್ ಕೊಟ್ಟು ನಿರ್ಣಯ ಮಾಡಬೇಕೆಂದು ಇದೆ. ಆಯಾ ತಾಲೂಕುಗಳಲ್ಲಿ ಇರುವಂಥಾ ಹರಿಜನ ಗಿರಿಜನ ಮತ್ತು ಭೂಹೀನರು ಇಂಥ ಜಮೀನುಗಳಲ್ಲಿ ಆಸಕ್ತಿ ಉಳ್ಳವರೆಂದು ಸರ್ಕಾರದವರು ನೋಟಿಫಿಕೇಷನ್ ತೆಗೆದು ಸ್ಪಷ್ಟಪಡಿಸಬೇಕು. ಇಂಥಾ ಭೂಹೀನರು ಕಾಯ್ದೆ ಬದ್ಧ ಸಂಘ ಕಟ್ಟಿಕೊಂಡು ತಹಶೀಲ್ದಾರರ ಕಡೆಹೋಗಿ ದೊಡ್ಡ ಭೂಮಾಲೀಕರು ಭೂಸುಧಾರಣೆ ಕಾಯ್ದೆ ಕಲಮುಗಳಿಂದ ತಪ್ಪಿಸಿಕೊಳ್ಳಲು ಬೇರೆ ಯಾರ

ಹೆಸರಿನಲ್ಲಿ ಅಕ್ರಮವಾಗಿ ವರ್ಗಾವಣೆ ಮಾಡಿದ್ದಾರೆಂದು ತೋರಿಸಿಕೊಡಬೇಕು ಮತ್ತು ಇಂಥಾ ದುರ್ಬಲ ಭೂಹೀನರಿಗೆ ಸರ್ಕಾರದವರು ವಕೀಲರನ್ನು ನೇಮಿಸಿ ಸಹಾಯ ಮಾಡಬೇಕೆಂದೂ ನಾನು ಸೂಚಿಸುತ್ತೇನೆ. ಈ ಮಾದರಿಯ ಕ್ರಮ ಕೈಗೊಂಡರೆ ಮಾತ್ರ ಪರಮಾವಧಿ ಹಿಡುವಳಿಗಿಂತಲೂ ಹೆಚ್ಚಿನ ಭೂಮಿಯು ಸರ್ಕಾರದ ವಶಕ್ಕೆ ಬರುತ್ತದೆ ಮತ್ತು ಅವುಗಳನ್ನು ಭೂಹೀನರಿಗೆ ಹಂಚಲು ಸಾಧ್ಯವಾಗುತ್ತದೆ.

ಬಡತನ ರೇಖೆಗಿಂತ ಕೆಳಗಿರುವ ಹರಿಜನ – ಗಿರಿಜನ ಮತ್ತು ಉಳಿದ ದುರ್ಬಲವರ್ಗದವರಿಗೆ ದವಸ ಧಾನ್ಯಗಳನ್ನು ಸಾಕಷ್ಟು ಪ್ರಮಾಣದಲ್ಲಿ ಯೋಗ್ಯ ಬೆಲೆಯಲ್ಲಿ ಅಗ್ಗದ ದರದ ಅಂಗಡಿ ಮುಖಾಂತರ ಹಂಚುವ ವ್ಯವಸ್ಥೆ ಮಾಡಬೇಕು. ಪೇಟೆಯಲ್ಲಿ ಜೋಳದ ದರವು ಕೆ.ಜಿ.ಗೆ. 2 ರೂಪಾಯಿ 25 ಪೈಸೆ ಇರುತ್ತದೆ. ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶದಲ್ಲಿ ಧಾನ್ಯಗಳ ಬೆಲೆ ಕೆ.ಜಿ.ಗೆ 8 ರಿಂದ 9 ರೂಪಾಯಿವರೆಗೆ ಇದೆ, ಕರ್ನಾಟಕದಲ್ಲಿ ಕಾಳು–ಕಡಿ ಅದಕ್ಕೂ ಕಡಿಮೆ ದರದಲ್ಲಿ ದೊರೆಯುತ್ತದೆಂದು ಹೇಳಿದರೆ ಯಾರಿಗೂ ಸಮಾಧಾನವಾಗಲಾರದು. ಕೂಲಿ ದರದಲ್ಲಿ ಯಾವ ಹೆಚ್ಚಳವಾಗಿಲ್ಲ. ಹೀಗಾಗಿ ದುರ್ಬಲವರ್ಗದವರಿಗೆ ಹೊಟ್ಟೆ ತುಂಬಿಕೊಳ್ಳುವುದು ಕಷ್ಟವಾಗಿದೆ. ಅದರಂತೆ ಗ್ರಾಮದಲ್ಲಿ ವಾಸಿಸುವ ಹರಿಜನ–ಗಿರಿಜನ ಮತ್ತು ದುರ್ಬಲ ವರ್ಗದವರಿಗೆ, ಬಹಳಷ್ಟು ಜನರಿಗೆ ಸಕ್ಕರೆ ಮತ್ತು ನಿಯಂತ್ರಿತ ಬೆಲೆಯ ಬಟ್ಟೆ ದೊರೆತಿಲ್ಲವೆಂದು ನಾನು ನನ್ನ ಕ್ಷೇತ್ರದ ಪ್ರವಾಸದಲ್ಲಿ ಕಂಡು ಕೇಳಿದ ಅನುಭವ. ಶೇಕಡಾ 18 ರ ಜನಗಳ ಕಷ್ಟವನ್ನು ಕೇಳುವ ಜನ ಕಡಿಮೆ. ಈ ಸಮಯದಲ್ಲಿ ಹೇಳಬಯಸುವುದೇನೆಂದರೆ ಭೂಮಿಯನ್ನು ಸ್ವಂತ ಊಳುವ ರೈತರು ಕೂಲಿಕಾರರಿಗೆ ಕೂಲಿಯನ್ನು ಧಾನ್ಯ ರೂಪವಾಗಿ ಕೊಡುವಂತೆ ಸರ್ಕಾರ ಒತ್ತಾಯಪಡಿಸಬೇಕು.

## ಕೈಮಗ್ಗ ನೇಕಾರರಿಗೆ ಉದಾರ ಸಹಾಯ ಮಾಡಿ:

ಇದೇ ಸಮಯದಲ್ಲಿ ಕೈಮಗ್ಗದ ನೇಕಾರರಿಗೆ ಸಂಬಂಧಪಟ್ಟ ಹಾಗೆ ಕೆಲವೊಂದು ಸೂಚನೆಗಳನ್ನು ಕೊಡಬಯಸುತ್ತೇನೆ. ಹೇಗೆ ಮನೆ ಇಲ್ಲದವರಿಗೆ ಮನೆ, ಭೂರಹಿತರಿಗೆ ಭೂಮಿ, ನಿವೇಶನ ರಹಿತರಿಗೆ ನಿವೇಶನ ಕೊಡುವ

ನಿರ್ಧಾರ ಮಾಡಿದ್ದಾರೆಯೋ ಅದೇ ರೀತಿ ಕೈಮಗ್ಗ ಇಲ್ಲದವರಿಗೆ ಕೈಮಗ್ಗ ಕೊಡವ ಘೋಷಣೆಯನ್ನು ಮಾಡಿ ಕೈಮಗ್ಗವಿಲ್ಲದ ನೇಕಾರರಿಗೆ ಒಂದೊಂದು ಮಗ್ಗವನ್ನು ಒದಗಿಸಿ ಅದರಿಂದ ಅವರು ಉಪಜೀವನ ನಡೆಸಲು ಕನಿಷ್ಠ 1000 ರೂಪಾಯಿಗಳನ್ನು ಕೊಡಬೇಕು. ಇದರಿಂದ ನಿರುದ್ಯೋಗ ನಿವಾರಣೆಗೆ ಕೆಲಮಟ್ಟಿಗೆ ಸಹಾಯವಾದೀತೆಂದು ನನ್ನ ಹಾರೈಕೆ.

ಕೈಮಗ್ಗದ ಬಗ್ಗೆ ಪ್ರತ್ಯೇಕ ಡೈರೆಕ್ಟೋರೇಟ್ ರಚಿಸಲು ಈ ಸದನದಲ್ಲಿ ಒಪ್ಪಿಕೊಂಡಿದ್ದಾಗ್ಯೂ, ಆ ಬಗ್ಗೆ ಈ ವರ್ಷ ಬಜೆಟ್ಟಿನಲ್ಲಿ 5 ಲಕ್ಷ ರೂಪಾಯಿಗಳನ್ನು ಒದಗಿಸಿದ್ದರೂ ಕೈಮಗ್ಗದ ಸಲುವಾಗಿ ಸ್ವತಂತ್ರ ಡೈರೆಕ್ಟೋರೇಟ್ ಇನ್ನೂ ಬರಲಿಲ್ಲ. ಕೇಂದ್ರ ಸರ್ಕಾರದ ಶಿವರಾಮನ್ ಸಮಿತಿಯ ಸಿಫಾರಸುಗಳು ಯೋಗ್ಯವಿದ್ದು ಅವುಗಳ ಬಗ್ಗೆ ರಾಜ್ಯ ಸರ್ಕಾರದ ಅಭಿಪ್ರಾಯವನ್ನು ಇಲ್ಲಿಯವರೆಗೆ ಪ್ರಕಟಪಡಿಸಲಾಗಿದೆಯೇ ಹೇಗೆ ಎಂಬುದು ತಿಳಿದುಬಂದಿಲ್ಲ. ಈಗಿದ್ದ ಕೈಮಗ್ಗ ಸಲಹಾ ಸಮಿತಿಯನ್ನು ಸ್ವಾಯತ್ತ ಸಂಸ್ಥೆಯನ್ನಾಗಿ ಮಾಡಲು ಕೇಳಿಕೊಳ್ಳಲಾಗಿದೆ. ಆ ಬಗ್ಗೆ ಸರ್ಕಾರದ ನಿರ್ಣಯ ತಿಳಿದುಬಂದಿಲ್ಲ. ಕೈಮಗ್ಗ ನೇಕಾರರು ದುರ್ಬಲವರ್ಗದವರಾಗಿದ್ದು ಬಡತನ ರೇಖೆಗಿಂತ ಕೆಳಮಟ್ಟದಲ್ಲಿರುವ ಅವರಿಗೆ ಸರ್ಕಾರ ಸಹಾಯ ಮಾಡಬೇಕೆಂದು ಕೋರುತ್ತೇನೆ.

## ಆಹಾರ ಧಾನ್ಯಗಳ ಸಮರ್ಪಕ ವಿತರಣೆಯಾಗಲಿ:

ಫುಡ್‌ಗ್ರೇನ್ಸ್ ವಿತರಣೆಯಲ್ಲಿ ಸಾಕಷ್ಟು ಅಕ್ರಮ ವ್ಯವಹಾರಗಳು ತಾಲೂಕು ಮಟ್ಟದಲ್ಲಿ ನಡೆದ ಬಗ್ಗೆ ನಮ್ಮ ಶಾಸಕರು ಅಧಿಕಾರಿಗಳಿಗೆ ತಿಳಿಸಿದ್ದರು ಕೂಡ ಏನೂ ವ್ಯವಸ್ಥೆಯಾಗುತ್ತಿಲ್ಲ. ನಮ್ಮ ತಾಲೂಕಿನಲ್ಲಿ ಇಂಥಾ ವಿಷಯಗಳನ್ನು ಅಧಿಕಾರಿಗಳಿಗೆ ಮತ್ತು ಡೆಪ್ಯುಟಿ ಕಮೀಷನರಿಗೆ ಪತ್ರ ಮುಖೇನ ತಿಳಿಸಿದರೂ ಏನೂ ಉಪಯೋಗವಾಗಿಲ್ಲ. ತಾಲೂಕಾ ಮಟ್ಟದಲ್ಲಿ ಧಾನ್ಯ ಮತ್ತು ಸಕ್ಕರೆ ವಿತರಣೆಯಲ್ಲಿ ಅಕ್ರಮ ವ್ಯವಹಾರಗಳಾಗುತ್ತವೆ. ಅದರ ಮೇಲೆ ಸರಿಯಾದ ನಿಯಂತ್ರಣವಿಲ್ಲ. ತಾಲೂಕಾ ಫುಡ್ ಅಡ್ವೈಜರಿ ಕಮಿಟಿಗಳ ಅವಧಿ ಮುಗಿದು ಸುಮಾರು 9 ತಿಂಗಳಾಯಿತು. ಇನ್ನೂ ವರೆಗೆ ಹೊಸ ಸಮಿತಿಗಳ ರಚನೆಯಾಗಿಲ್ಲ.

ಇವನ್ನು ಆದಷ್ಟು ಬೇಗ ಹೊಸದಾಗಿ ರಚಿಸಬೇಕೆಂದು ವಿನಂತಿಸಿಕೊಂಡು ಮಾನ್ಯ ಆಹಾರ ಖಾತೆಯ ಮಂತ್ರಿಗಳಿಗೆ ಮತ್ತು ಮಾನ್ಯ ಮುಖ್ಯ ಮಂತ್ರಿಗಳಿಗೆ ಕಾಗದ ಬರೆದರು ಕೂಡ ಅದರ ಬಗ್ಗೆ ಯಾವ ನಿರ್ಧಾರಗಳನ್ನೂ ಕೈಗೊಂಡಿಲ್ಲ.

**ಶ್ರೀಮತಿ ಇವಾ ಇ. ವಾಜ್**– ಎಲ್ಲಿ ಯಾವ ತಾಲೂಕಿನಲ್ಲಿ?

**ಶ್ರೀ ಪಿ. ಎಂ. ಬಾಂಗಿ**– ಜಮಖಂಡಿ ತಾಲೂಕಿನಲ್ಲಿ ಸಕ್ಕರೆ ಹಂಚುವ ವಿಷಯದಲ್ಲಿ ಸಾಕಷ್ಟು ದುರ್ವ್ಯವಹಾರವಾಗಿದೆಯೆಂದು ತಿಳಿಯುತ್ತದೆ. ಆ ಬಗ್ಗೆ ಜಿಲ್ಲಾಧಿಕಾರಿಗಳಿಗೆ ದೂರು ಕೊಟ್ಟರೂ ಇನ್ನೂ ತನಿಖೆಯಾಗಿಲ್ಲ. ತಹಶೀಲ್ದಾರರ ಕಚೇರಿಯಲ್ಲಿ ಸಾಕಷ್ಟು ದುರ್ವ್ಯವಹಾರ ಆಗಿದ್ದರೂ ಅಲ್ಲಿ ಕೆಲಸ ಮಾಡತಕ್ಕ ಕಾರಕೂನನನ್ನು ಇನ್ನೂ ವರ್ಗ ಮಾಡಿಲ್ಲ. ಅಧಿಕಾರಿಗಳು ಮತ್ತು ಸೊಸೈಟಿಗಳ ಆಡಳಿತದವರು ಕೂಡಿಕೊಂಡು ಲೂಟಿ ಮಾಡುವುದಕ್ಕೆ ಹತ್ತಿದ್ದಾರೆ. ಸಂಬಂಧಪಟ್ಟ ಮಂತ್ರಿಗಳಿಗೆ ಮತ್ತು ಮುಖ್ಯ ಮಂತ್ರಿಗಳಿಗೆ ಪತ್ರ ಬರೆದರೂ ಇಂದಿನವರೆಗೂ ಏನೂ ಆಗಿಲ್ಲ. ಹರಿಜನ– ಗಿರಿಜನರಿಗೆ ಮತ್ತು ದುರ್ಬಲವರ್ಗದವರಿಗೆ ಸಕ್ಕರೆ ಮತ್ತು ಇತರ ಕಂಟ್ರೋಲ್ ಪದಾರ್ಥಗಳು ಸಿಕ್ಕಿಲ್ಲ. ವಿಜಾಪೂರ ಜಿಲ್ಹೆಯಲ್ಲಿ, ನಮ್ಮ ತಾಲೂಕಿನಲ್ಲಿ ಬೋಗಸ್ ಸೊಸೈಟಿಗಳು ಕಂಟ್ರೋಲ್ ಸಾಮಾನುಗಳನ್ನು ಸರ್ಕಾರದಿಂದ ತಂದು ಅವನ್ನು ಹರಿಜನ ಗಿರಿಜನರಿಗಾಗಲೀ, ದುರ್ಬಲವರ್ಗದವರಿಗಾಗಲೀ ವಿತರಣೆ ಮಾಡದೆ ಲೂಟಿ ಮಾಡುತ್ತಿದ್ದಾರೆಂದು ನಾನು ಈ ಸಂದರ್ಭದಲ್ಲಿ ಸರ್ಕಾರದ ಗಮನಕ್ಕೆ ತರಬಯಸುತ್ತೇನೆ.

**ಶ್ರೀ ಕಾಗೋಡು ತಿಮ್ಮಪ್ಪ**– ನಿಮ್ಮ ಕ್ಷೇತ್ರಕ್ಕೆ ಫುಡ್ ಖಾತೆಯ ಮಂತ್ರಿಗಳು ಬಂದಿಲ್ಲವೇ?

**ಶ್ರೀ ಪಿ. ಎಂ. ಬಾಂಗಿ**– ಅವರು ಫುಡ್ ಖಾತೆಯ ಮಂತ್ರಿಗಳಾದ ಮೇಲೆ ನಮ್ಮ ಕ್ಷೇತ್ರಕ್ಕೆ ಬಂದಿಲ್ಲ. ಅಸೆಂಬ್ಲಿ ಮುಗಿದ ನಂತರ ಬರುತ್ತೇನೆಂದು ಹೇಳಿದ್ದಾರೆ. ಆಹಾರ ವಿತರಣೆ ವಿಷಯದಲ್ಲಿ ಸರ್ಕಾರದವರು ಸಾಕಷ್ಟು ಗಮನ ಕೊಡಬೇಕು. ಜಿಲ್ಲಾ ಮಟ್ಟದಲ್ಲಿ ಫುಡ್ ಅಡ್ವೈಜರಿ ಕಮಿಟಿಗಳನ್ನು ರಚನೆ ಮಾಡಿ

2 ವರ್ಷಗಳಾದರೂ ಒಂದು ಮೀಟಿಂಗ್ ಕರೆದಿಲ್ಲ. ಬಡಜನಗಳು ಒಂದು ಕೆ.ಜಿ. ಜೋಳಕ್ಕೆ ಓಪನ್ ಮಾರ್ಕೆಟ್ಟಿನಲ್ಲಿ ಎಡ್ರೂ ವರೆ ರೂಪಾಯಿ ಕೊಟ್ಟು ತಂದು ತಿನ್ನುವುದಕ್ಕೆ ಶಕ್ತಿ ಇಲ್ಲದೆ ಅವರಿಗೆ ಬಹಳ ತೊಂದರೆಯಾಗಿದೆ. ಆದ್ದರಿಂದ ಕೂಲಿಕಾರರಿಗೆ, ದುರ್ಬಲವರ್ಗದವರಿಗೆ ರೈತರು ಧಾನ್ಯ ರೂಪದಲ್ಲಿ ಕೂಲಿ ಕೊಡುವಂತೆ ವ್ಯವಸ್ಥೆ ಮಾಡಬೇಕು. ಬಡ ಜನಗಳಿಗೆ, ದುರ್ಬಲ ವರ್ಗದವರಿಗೆ ಗೊಂಜಾಳವನ್ನು ಯೋಗ್ಯದರದಲ್ಲಿ ಕೊಡುವಂತೆ ಮಾಡಬೇಕು. ಧಾನ್ಯಗಳ ಬೆಲೆ ಏರಿರುವುದರಿಂದ ಕೂಲಿಕಾರರಿಗೆ ಕೂಲಿ ದರ ಜಾಸ್ತಿ ಮಾಡಬೇಕು. ಇಲ್ಲದೇ ಹೋದರೆ ಅವರಿಗೆ ಬರುವ ಕೂಲಿಯಿಂದ ಹೊಟ್ಟೆ ತುಂಬುವುದಿಲ್ಲ. ನಾನು ಎಲ್ಲಾ ಹಳ್ಳಿಗಳಲ್ಲೂ ಅಡ್ಡಾಡಿದ್ದೇನೆ. ಪಂಚಾಯ್ತಿ, ತಾಲೂಕಾ ಬೋರ್ಡ್, ಮುನ್ಸಿಪಾಲ್ಟಿಗಳ ಬಜೆಟ್ಟಿನಲ್ಲಿ 18 ಪರ್ಸೆಂಟ್ ಹಣವನ್ನು ಹರಿಜನ ಗಿರಿಜನರಿಗೆ ರಿಜರ್ವ್ ಮಾಡಿ ಹಂಚಬೇಕೆಂದು ಸರ್ಕಾರದವರು ಆಜ್ಞೆ ಮಾಡಿದ್ದಾರೆ. ಆದರೆ ಆ ರೀತಿ ಅವರಿಗೆ ಪರಿಹಾರ ಸಿಕ್ಕಿಲ್ಲ. ದೊಡ್ಡ ದೊಡ್ಡ ಭೂಮಾಲೀಕರು, ತಮ್ಮ ಬಂಧುಗಳ ಹೆಸರಿಗೆ ದಾಖಲು ಮಾಡಿಸಿಕೊಂಡು ಹರಿಜನ ಗಿರಿಜನರಿಗೆ ದುರ್ಬಲ ವರ್ಗದವರಿಗೆ ಕೂಲಿಗಾರರಿಗೆ ಯಾವುದೂ ಭೂಮಿ ಸಿಗಬಾರದೆಂದು ಪ್ರಯತ್ನ ಮಾಡಿದ್ದಾರೆ. ಹರಿಜನ ಗಿರಿಜನರು ಮತ್ತು ದುರ್ಬಲವರ್ಗದವರು ತಹಶೀಲ್ದಾರರ ಕಡೆ ಹೋಗಿ ಈ ಬಗ್ಗೆ ತಕರಾರು ಮಾಡುವ ಅಧಿಕಾರ ಇಲ್ಲ. ಆದ್ದರಿಂದ ಇಂಥಾ ತಹಶೀಲ್ದಾರರನ್ನು ಹತೋಟಿಯಲ್ಲಿಡಲು ಕ್ರಮಗಳನ್ನು ಕೈಗೊಳ್ಳಬೇಕು. ಆಯಾ ತಾಲೂಕುಗಳಲ್ಲಿರುವಂಥಾ ಹರಿಜನ ಗಿರಿಜನ ಮತ್ತು ಭೂಹೀನರು ಇಂಥಾ ಜಮೀನುಗಳಲ್ಲಿ ಆಸಕ್ತಿಯುಳ್ಳವರೆಂದು ಸರ್ಕಾರದವರು ನೋಟಿಫಿಕೇಷನ್ ತೆಗೆದು ಸ್ಪಷ್ಟಪಡಿಸಬೇಕು. ಇಲ್ಲದೇ ಹೋದರೆ ಲ್ಯಾಂಡ್ ಲಾರ್ಡ್ ಒಪ್ಪುತ್ತಾನೆಂದು ಗೇಣಿದಾರರು ಹೇಳುತ್ತಾರೆ. ಲ್ಯಾಂಡ್ ಲಾರ್ಡ್ ಮಾಡಿದ್ದನ್ನು ಒಂದೊಂದು ಸಾರಿ ಒಂದೊಂದು ಸಮಯದಲ್ಲಿ ಲ್ಯಾಂಡ್ ಟ್ರಿಬ್ಯೂನಲ್ ಅನಿವಾರ್ಯವೆಂದು ಒಪ್ಪುತ್ತದೆ. ಒಪ್ಪಿದ ನಂತರ ಲ್ಯಾಂಡ್‌ಗಳನ್ನು ಹರಿಜನ ಗಿರಿಜನರಿಗೆ ನ್ಯಾಯವಾಗಿ ಕೊಡೋದಿಲ್ಲ. ಟ್ರಿಬ್ಯೂನಲ್‌ಗೆ ಹೆಚ್ಚಿನ ಅಧಿಕಾರವಿಲ್ಲ. ಅವರಿಗೆ ಇರತಕ್ಕ ಅಧಿಕಾರಗಳಲ್ಲಿ ಅನ್ಯಾಯಗಳು ನಡೆಯುವ ಸಂಭವವಿದೆ. 1966–67 ರಲ್ಲಿ ಹಾಗೂ 1965–66 ರಲ್ಲಿ ಬಂದಿರತಕ್ಕ ರಿಸಂಪ್ಷನ್ ಅಪ್ಲಿಕೇಷನ್‌ಗಳು ಇದುವರೆಗೆ ಯಾವ ರೀತಿಯಲ್ಲಿಯೂ ತೀರ್ಮಾನವಾಗಿಲ್ಲ. ಅನೇಕ ಕೇಸುಗಳು ಹೈಕೋರ್ಟಿನಲ್ಲಿ ಇನ್ನೂ ಪೆಂಡಿಂಗ್ ಇವೆ. ಇಂಥ ವ್ಯಾಜ್ಯಗಳಿಗೆ

ಸಂಬಂಧಪಟ್ಟ ಗೇಣೀದಾರರು Form VII ಮೇರೆಗೆ ಅರ್ಜಿ ಸಲ್ಲಿಸಿದ್ದರೆ, ಅವರು ನಿಜವಾದ ಗೇಣೀದಾರರೆಂದು ಭಾವಿಸತಕ್ಕದ್ದು. ಇಂಥ ವ್ಯಾಜ್ಯಗಳ ಕಾಗದಗಳನ್ನು ಮತ್ತು ರಿಜಿಸ್ಟರಗಳನ್ನು ಹೈಕೋರ್ಟಿನ ಮುಖಾಂತರ, ಭೂ ಪಂಚಾಯಿತಿಗಳಿಗೆ ಒದಗಿಸತಕ್ಕದ್ದು. ಲ್ಯಾಂಡ್ ರಿಫಾರ್ಮ್ಸ್‌ಗೆ ಸಂಬಂಧಪಟ್ಟ ಮಾನ್ಯ ಮಂತ್ರಿಗಳು ದುರ್ದೈವದಿಂದ ಇಲ್ಲಿ ಇಲ್ಲ. ಲ್ಯಾಂಡ್ ರಿಫಾರ್ಮ್ಸ್ ಬಗ್ಗೆ ಎಷ್ಟೋ ನೊಟಿಫಿಕೇಷನ್‌ಗಳನ್ನು ಮಾಡಿದ್ದರೂ, ಈ ಕಾಯ್ದೆಯಲ್ಲಿ ತಿದ್ದುಪಡಿ ಮಾಡಿ ಅದಕ್ಕೆ ತಕ್ಕಹಾಗೆ ರೂಲ್ಸ್ ಆ್ಯಂಡ್ ರೆಗ್ಯುಲೇಷನ್ಸ್ ಮಾಡಿದ್ದರೂ ಈಗಿನ ಲ್ಯಾಂಡ್ ರಿಫಾರ್ಮ್ಸ್‌ನಿಂದ ವಕೀಲರಿಗೆ ಮತ್ತು ಭೂಮಾಲಿಕರಿಗೆ ಹೆಚ್ಚಿನ ಅನುಕೂಲ ದೊರೆಯುತ್ತಿದೆಯೇ ಹೊರತು ಬಡವರಿಗೆ ಸಾಕಷ್ಟು ಸೌಲಭ್ಯ ದೊರೆಯುತ್ತಿಲ್ಲ. ಹಿತಾಸಕ್ತರಾದ ಕೆಲವು ವಕೀಲರು Land Tribunals ಗಳಲ್ಲಿ ಇರುವರು. ಅಂಥ ವಕೀಲರಿಂದ ಗೇಣೀದಾರರಿಗೆ ನ್ಯಾಯ ಸಿಗೂದಿಲ್ಲ. ಆ ವ್ಯಾಜ್ಯಗಳನ್ನು ಬೇರೆ Tribunalಗಳಿಗೆ ವರ್ಗ ಮಾಡಿ ಕಳುಹಿಸುವ ವ್ಯವಸ್ಥೆ ಲ್ಯಾಂಡ್ ರಿಫಾರ್ಮ್ಸ್ ಆ್ಯಕ್ಟ್‌ನಲ್ಲಿ ಇಲ್ಲ. Civil Procedure Codeದಲ್ಲಿ ಒಂದು ದಾವೆಯನ್ನು, ಒಂದು ಕೋರ್ಟಿನಿಂದ ಮತ್ತೊಂದು ಕೋರ್ಟಿಗೆ ಕಳುಹಿಸುವ ಅಧಿಕಾರ District Judgeಗೆ ಇದೆ.

## ಕೈಮಗ್ಗಗಳು ಇಲ್ಲದವರಿಗೆ ಕೈಮಗ್ಗ:

ಇನ್ನೊಂದು ವಿಷಯ. ನೇಕಾರರಿಗೆ, S.C. ಮತ್ತು S.T. ಗಳಂತೆ ಶೇಕಡ 18 ರಷ್ಟು ರಿಲೀಫ್ ಸಿಗಬೇಕು. ಮಗ್ಗ ಇಲ್ಲದವರಿಗೆ ಮಗ್ಗ ಮತ್ತು ಒಂದು ಸಾವಿರ ರೂಪಾಯಿ ವರ್ಕಿಂಗ್ ಕ್ಯಾಪಿಟಲ್ ಕೊಡಬೇಕು. ಇದರಿಂದ ನಿರುದ್ಯೋಗ ಸಮಸ್ಯೆ ನಿವಾರಣೆಯಾಗುತ್ತದೆ. ಕೇಂದ್ರ ಸರ್ಕಾರದವರು ನೇಮಿಸಿದ್ದ ಶಿವರಾಮನ್ ಕಮಿಟಿಯ ಶಿಫಾರಸುಗಳು ಯೋಗ್ಯವಾಗಿದ್ದು ಅವನ್ನು ಅಮಲ್ ಬಜಾವಣೆಗೆ ತರಬೇಕು. ಹ್ಯಾಂಡ್ ಲ್ಯೂಮ್ಸ್‌ಗಳನ್ನು ಬೆಳೆಸುವ ಸಲುವಾಗಿ ಜಿಲ್ಲಾ ಮಟ್ಟದ welfare ಸಮಿತಿಗಳನ್ನು ನೇಮಿಸಿ ಅವುಗಳ ಮೂಲಕ ಕೈಮಗ್ಗ ಇಲ್ಲದವರಿಗೆ ಅವನ್ನು ಒದಗಿಸಿಕೊಟ್ಟರೆ ಹಾಗೂ ಆ ಶಿಫಾರಸುಗಳನ್ನು ಇಂಪ್ಲಿಮೆಂಟ್ ಮಾಡಿದರೆ ನೇಕಾರ ವರ್ಗದ ಉದ್ಧಾರವಾಗುತ್ತದೆ.

## ಟಿಪ್ಪಣಿ ರೂಪದ ಬಿಡಿ ಪ್ರಶ್ನೆಗಳು

### 18ನೇ ಫೆಬ್ರವರಿ 1975

**Sri P. M. Bangi (Jamkhandi)**- Will the Minister for Co-operation be pleased to state:-

a) whether proper register of attendance of labourers, wages, over-time work are maintained by powerloom factory owners producing cotton textile in the State;

b) the towns and villages in the State in which powerloom, producing cotton textiles, are installed;

c) whether the Government is aware that the Pattalas (ಪತ್ತಲಗಳು) and coloured sarees (ಬಣ್ಣದ ಸೀರೆಗಳು), produced from powerloom, are stamped as handloom product and sold as handloom cloth;

d) whether the Government is aware that excise duty, sales tax and octroi are evaded by the powerloom factory owners by enlisting their powerlooms (upto 4 in number) in the names of their family members, relatives and friends;

e) whether the Government proposes to issue notification under section 85 (1) of the Factories Act, notifying that powerloom industries conducted by less than ten labourers is a factory;

f) the result of the representation made by me and the Labour Union styled as "Akhila Karnataka Weavers' Sangh" at Bangalore to issue notification under Section 85 (1) of the Factories Act ?

Minister for Co-operation

a) The district officers have reported that the prowerloom factories are maintaining the registers of attendance, wages, overtime etc. The Labour Department is in the overall charge of supervision over such maintenance of records, registers etc., and periodical inspection.

b) Statement appended.

c) The district officers have reported that such instances have not come to notice.

d) The subject relating to levy of excise duty comes under the purview of Central government. Evasion of payment in regard to Sales Tax and Octori, no such thing has come to the notice of Government.

e) and (f) Government have notified under Section 85 (1) of the Factories Act, the Powerloom Industries employing less than 10 workers as Factories as per Government Notification No. SLW 131 LFB 73 dated 27.5.1974.

# ಟಿಪ್ಪಣಿ ರೂಪದ ಬಿಡಿ ಪ್ರಶ್ನೆಗಳು

## 20ನೇ ಫೆಬ್ರವರಿ 1975

**Sri P. M. Bangi (Jamkhandi)-** Will the Minister for Food and Civil Supplies be pleased to state:

a) whether it is a fact that the term of the Taluka Level Advisory Committees for Food and Civil Supplies in Bijapur District constituted as per Government Order No. FOL 16 SLF 73 (ii) dated 20.7.1973 has expired on 20.8.1974;

b) whether it is a fact that new committees have not been constituted since then;

c) the reasons for not continuing the old committees or for not re-constituting these Advisory Committees for Bijapur and other districts in the State;

d) whether there is any proposal before Government to extend the term of old Committees with retrospective effect from 20.8.1974 or to constitute new committees with M.L.As. and other non-official members (with at least one of them being a Harijan);

e) whether there is any proposal before Government to take census of the population (men, women and children) of the towns in Bijapur and other districts and issue new Ration Cards

for the supply of food grains, sugar and other civil supplies to the real residents of towns and eliminate bogus ration cards;

f) if not, the reasons for the same?

Smt. Eva E. Vaz (Minister for Food and Civil Supplies)-

a) Yes.

b) Yes.

c) The question of reconstitution of all the Advisory Committees for Food and Civil Supplies is under consideration.

d) The reconstitution of the Committees is being considered. Generally, all the M.L.As. M.L.Cs. and M.Ps. of the District and M.L.As. and M.L.Cs. of the Talukas will be the members of the concerned District and Taluka Level Advisory Committees. Invariably there is a Harijan member in each of the Committees.

e) No census is proposed but constant effort is made to eliminate bogus cards.

f) Does not arise in view of reply to clause (e).

ಶ್ರೀ ಪಿ. ಎಂ. ಬಾಂಗಿ– ನನ್ನ ಮೂರನೇ ಪ್ರಶ್ನೆಗೆ ಉತ್ತರವಾಗಿ ವಿಷಯವು ಸರ್ಕಾರದವರ ಪರಿಶೀಲನೆಯಲ್ಲಿದೆ ಎಂದು ಹೇಳಿದ್ದೀರಿ; ಅದನ್ನು ಯಾವಾಗ ಮಾಡುತ್ತೀರಿ?

ಶ್ರೀಮತಿ ಇ.ಇ. ವಾಜ್– ಈ ಹಿಂದೆ ರಚನೆ ಮಾಡಿದ ಸಮಿತಿಗಳ ಅವಧಿ ಒಂದೊಂದು ಜಿಲ್ಲೆಯಲ್ಲಿ ಬೇರೆ ಬೇರೆ ಕಾಲದಲ್ಲಿ ಅಂದರೆ ಜೂನ್, ಜುಲೈ, ಆಗಸ್ಟ್ ತಿಂಗಳುಗಳಲ್ಲಿ ಮುಗಿಯುವುದರಲ್ಲಿತ್ತು. ಈ ಕಾರಣದಿಂದ ಎಲ್ಲ ಜಿಲ್ಲೆಗಳಲ್ಲಿಯೂ ಒಂದೇ ಸಲ ಮಾಡೋಣವೆಂದು ನಿಧಾನ ಮಾಡಲಾಗಿದೆ.

ಶ್ರೀ ಪಿ. ಎಂ. ಬಾಂಗಿ – ಈ ಸಮಿತಿಗಳನ್ನು ರಚನೆ ಮಾಡುವ ವಿಚಾರದಲ್ಲಿ ಈಗಾಗಲೇ 8 ತಿಂಗಳಷ್ಟು ನಿಧಾನವಾಗಿದೆ. ಜಮಖಂಡಿ ಮತ್ತಿತರ ಕಡೆಗಳಲ್ಲಿ ಹೊಸ ಸಮಿತಿಗಳನ್ನು ರಚನೆ ಮಾಡದಿರುವ ಪ್ರಯುಕ್ತ ಬಹಳಷ್ಟು ಹಣ ದುರುಪಯೋಗವಾಗಿದೆ; ಆದಕಾರಣ ಇದನ್ನು ಜಾಗ್ರತೆ ಪರಿಶೀಲನೆ ಮಾಡುತ್ತೀರಾ?

ಶ್ರೀಮತಿ ಇ.ಇ. ವಾಜ್– ಆದಷ್ಟು ಜಾಗ್ರತೆ ಪರಿಶೀಲನೆ ಮಾಡುತ್ತೇವೆ.

## ಆರೋಗ್ಯ ಇಲಾಖೆಯ ಮೇಲಿನ ಚರ್ಚೆ

### 4ನೇ ಮಾರ್ಚ್ 1975

### ಬಡವರ ಮಕ್ಕಳು ಡಾಕ್ಟರಾಗಬಾರದೇ ?

ಶ್ರೀ ಪಿ. ಎಂ. ಬಾಂಗಿ (ಜಮಖಂಡಿ)– ಮಾನ್ಯ ಅಧ್ಯಕ್ಷಣಿಯವರೇ, ಮಾನ್ಯ ಆರೋಗ್ಯ ಮಂತ್ರಿಗಳು ಇಟ್ಟಿರತಕ್ಕಂಥ ಬೇಡಿಕೆಗಳನ್ನು ನಾನು ಅನುಮೋದಿಸುತ್ತಾ, ಕೆಲವು ವಿಚಾರಗಳನ್ನು ಈ ಸಮಯದಲ್ಲಿ ಹೇಳಬಯಸುತ್ತಿದ್ದೇನೆ. ಮೊಟ್ಟಮೊದಲನೆಯದಾಗಿ ಹೇಳುವುದಾದರೆ ನಮ್ಮ ರಾಜ್ಯದಲ್ಲಿ ಒಟ್ಟು 9 ಮೆಡಿಕಲ್ ಕಾಲೇಜುಗಳು ಇದ್ದು ಸರ್ಕಾರದ ಪರವಾಗಿ 4 ಮೆಡಿಕಲ್ ಕಾಲೇಜುಗಳು, ಪ್ರೈವೇಟ್ 5 ಮೆಡಿಕಲ್ ಕಾಲೇಜುಗಳು ಇರುತ್ತವೆ. ಸರ್ಕಾರದ ಪರವಾಗಿರತಕ್ಕಂಥ ಮೆಡಿಕಲ್ ಕಾಲೇಜ್‌ಗಳಲ್ಲಿ ಸಿಲೆಕ್ಷನ್ ಕಮಿಟಿ ಮೆರಿಟ್ ಮೇಲೆ ಸರಿಯಾಗಿ ಅಡ್ಮಿಷನ್ ಮಾಡುತ್ತಿದ್ದಾರೆ. ಆದರೆ ಪ್ರೈವೇಟ್

ಮೆಡಿಕಲ್ ಕಾಲೇಜುಗಳು ಧನವಂತರ ಮಕ್ಕಳಿಗೇ ಎಲ್ಲಾ ಅಡ್ಮಿಷನ್ ಕೊಡುತ್ತವೆ. ಬಡವರ ಮಕ್ಕಳಿಗೆ ಎಳ್ಳಷ್ಟೂ ಪ್ರವೇಶವಿಲ್ಲ. ಬೆಳಗಾವಿಯಲ್ಲಿನ ಜವಾಹರಲಾಲ್ ನೆಹರೂ ಮೆಡಿಕಲ್ ಕಾಲೇಜಿನಲ್ಲಿ ನಾನು ಬೋರ್ಡ್ ಆಫ್ ಮ್ಯಾನೇಜ್‌ಮೆಂಟಿನಲ್ಲಿ ಒಬ್ಬ ಸದಸ್ಯನಾಗಿದ್ದಾಗ್ಯೂ, ಸರ್ಕಾರದ ಪರವಾಗಿ ಇಷ್ಟು ಅಡ್ಮಿಷನ್ ತೆಗೆದುಕೊಳ್ಳಬೇಕೆಂದು ಹೇಳಿದಾಗ್ಯೂ ಉಪಯೋಗವಾಗುತ್ತಿಲ್ಲ. ಬೆಳಗಾವಿಯಲ್ಲಿನ ಈ ಕಾಲೇಜಿನಲ್ಲಿ ಪ್ರತಿ ವರ್ಷ ಒಂದು ನೂರು ವಿದ್ಯಾರ್ಥಿಗಳನ್ನು ಅಡ್ಮಿಟ್ ಮಾಡುತ್ತಿದ್ದರು. ಆದರೆ ಕಳೆದ ವರ್ಷ ಆಲ್ ಇಂಡಿಯಾ ಮೆಡಿಕಲ್ ಕೌನ್ಸಿಲ್‌ದವರು 25 ಸೀಟ್‌ಗಳನ್ನು ಕಡಿಮೆ ಮಾಡಿದ್ದಾರೆ. ಅದರ ಪರಿಣಾಮವಾಗಿ ಉಳಿದ 75 ಸೀಟುಗಳಿಗೆ ಕೇವಲ ಶ್ರೀಮಂತರ ಮಕ್ಕಳಿಗೆ ಅಡ್ಮಿಷನ್ ಸಿಗುತ್ತಿದೆ. ಹೊರಗಿನಿಂದ ಬರತಕ್ಕಂಥ ಅಂದರೆ ಕೇರಳ, ಮದ್ರಾಸ, ಆಂಧ್ರ, ಗುಜರಾತ ಮುಂತಾದ ಕಡೆಗಳ 25 ವಿದ್ಯಾರ್ಥಿಗಳು 50 ಸಾವಿರ, 70 ಸಾವಿರ, 1 ಲಕ್ಷದವರೆಗೂ ಹಣವನ್ನು ಕೊಟ್ಟು ಸೇರುತ್ತಿದ್ದಾರೆ. ನಮ್ಮ ರಾಜ್ಯ ಸರ್ಕಾರದ ಅನುಮತಿಯ ಮೂಲಕ 20 ಸಾವಿರ 50 ಸಾವಿರ ಹೀಗೆ ಬೇಕಾದಷ್ಟು ಹಣವನ್ನು ಈ ಮೆಡಿಕಲ್ ಕಾಲೇಜ್‌ನವರು ತೆಗೆದುಕೊಂಡು ಅಲ್ಲಿ 25 ವಿದ್ಯಾರ್ಥಿಗಳಿಗೆ ಅಡ್ಮಿಷನ್ ಕೊಡುತ್ತಿದ್ದಾರೆ. ಆನಂತರ ನಮ್ಮ ಕರ್ನಾಟಕ ರಾಜ್ಯದಲ್ಲಿದ್ದಂತಹ ವಿದ್ಯಾರ್ಥಿಗಳಿಗೆ 5 ಸಾವಿರ ರೂಪಾಯಿ ಕ್ಯಾಪಿಟೇಷನ್ ಫೀ ತೆಗೆದುಕೊಂಡು ಸೀಟ್ ಕೊಡಬೇಕೆಂದು ಸರ್ಕಾರದ ಆಜ್ಞೆ ಇದೆ. ಆ ಪ್ರಕಾರ 5 ಸಾವಿರ ರೂಪಾಯಿ ಕ್ಯಾಪಿಟೇಷನ್ ಫೀಸ ತೆಗೆದುಕೊಂಡು ಪಾವತಿ ಕೊಡುತ್ತಿದ್ದಾರೆ. ಈ ಕಾಲೇಜುಗಳಲ್ಲಿ ಏನಿದೆ ಎಂದರೆ, ಕಾಲೇಜಿಗೆ ಒಂದು ಬಜೆಟ್, ಸಂಸ್ಥೆಗೆ ಒಂದು ಬಜೆಟ್ ಹೀಗೆ ಬೇರೆ ಬೇರೆ ಬಜೆಟ್‌ಗಳಲ್ಲಿ ಕೇವಲ ಐದು ಸಾವಿರ ರೂಪಾಯಿ ಜಮಾ ಆಗುತ್ತದೆ. ಆದರೆ ಸಂಸ್ಥೆಗೆ ಕಾಲೇಜಿನ ಬಗ್ಗೆ ಎಷ್ಟು ಹಣ ಬಂತು ಎಂಬುದಕ್ಕೆ ಲೆಖ್ಖ ಇಲ್ಲ. ಸಂಸ್ಥೆಯಲ್ಲೇ ಒಂದು ಪೆಟ್ಟಿಗೆ ಇಟ್ಟು, ಸೀಲ್ ಮಾಡುತ್ತಾರೆ. ಕೊಡುವವರು ಯಾರಾದರೂ ಇದ್ದರೆ ಅದರಲ್ಲಿ ಹಣ ಹಾಕಬಹುದು. ಇದಕ್ಕೆ ಪಾವತಿ, ಲೆಖ್ಖ ಏನೇನೂ ಇಲ್ಲ. ಪೆಟ್ಟಿಗೆಯಿಂದ ಎಷ್ಟು ಹಣ ಬರುತ್ತದೆ ಎಂಬುದು ಗೊತ್ತಾಗುವುದಿಲ್ಲ. ಕಾಲೇಜಿನ ಬಜೆಟ್ಟಿನಲ್ಲಿ ಹತ್ತಿಪ್ಪತ್ತು ಲಕ್ಷ ಲಾಸ್ ತೋರಿಸುತ್ತಾರೆ. ಈ ಲಾಸ್‌ಅನ್ನು ಹೇಗೆ ತುಂಬಿಕೊಳ್ಳುತ್ತೀರಿ ಎಂದು ಕೇಳಿದರೆ ಅದನ್ನು ಸಂಸ್ಥೆ ಕೊಡುವ ಡೊನೇಷನ್‌ದಲ್ಲಿ ತೆಗೆದುಕೊಳ್ಳುತ್ತೇವೆ ಎನ್ನುತ್ತಾರೆ. ಈ ವಿಧವಾದ ಅವ್ಯವಹಾರಗಳು

ನಿಲ್ಲಬೇಕು. ಸರ್ಕಾರದ ಆದೇಶವನ್ನು ಅವರು ಪಾಲಿಸುವುದಿಲ್ಲ, ಆರ್ಡಿನನ್ಸ್ ಹೊರಡಿಸುತ್ತೇವೆಂದು ಮಂತ್ರಿಗಳು ಹೇಳಿದ್ದರೂ, ಅದನ್ನೂ ಹೊರಡಿಸಿಲ್ಲ. ಕಾನೂನು ಮಾಡುತ್ತೇವೆ, ಬಿಲ್ ತರುತ್ತೇವೆ ಎಂದು ಹೇಳಿದಿರಿ. ಕ್ಯಾಬಿನೆಟ್ ಸಬ್ ಕಮಿಟಿಯಲ್ಲಿ ಬಿಲ್ಲು ಪರಿಶೀಲನೆಯಲ್ಲಿದೆ ಎಂದು ಹೇಳುತ್ತೀರಿ. ಆದುದರಿಂದ ನಾನು ತಮಗೆ ಹೇಳುವುದೇನೆಂದರೆ ಈಗ ಅಸೆಂಬ್ಲಿ ಹಾಗೂ ಕೌನ್ಸಿಲ್‌ಗಳು ನಡೆಯುತ್ತಿವೆ. ಈಗಲೇ ಒಂದು ಬಿಲ್ಲನ್ನು ತಂದು ಪಾಸ್ ಮಾಡಿಸುವ ವ್ಯವಸ್ಥೆ ಮಾಡಬೇಕು. ಇಲ್ಲದೇ ಹೋದರೆ ಬಡವರ ಮಕ್ಕಳಿಗೆ, ಜನಸಾಮಾನ್ಯರಿಗೆ ಈ ಕಾಲೇಜುಗಳಲ್ಲಿ ಅಡ್ಮಿಷನ್ ಸಿಗುವುದಿಲ್ಲ. ಸರ್ಕಾರದವರು ಕಾಲೇಜುಗಳ ಮೇಲೆ ನಿರ್ಬಂಧ ಹಾಕಬೇಕಾದರೆ ಕಾಯ್ದೆ ಪ್ರಕಾರ ಮಾಡಬೇಕಾಗುತ್ತದೆ. ಸರ್ಕಾರದ ಪರವಾಗಿ ನಾವು ಈ ಕಾಲೇಜಿನ ಬೋರ್ಡಿನಲ್ಲಿ ಕೆಲಸ ಮಾಡುತ್ತಿದ್ದೇವೆ. ಅಲ್ಲಿ ಸರ್ಕಾರಕ್ಕೆ ಬೆಲೆ ಇಲ್ಲ, ನಮಗೂ ಬೆಲೆ ಇಲ್ಲ. ನಾವು ಏನೇ ಹೇಳಿದರೂ ಕೂಡ ಅವರ ಮೇಲೆ ಪರಿಣಾಮವಾಗುವುದಿಲ್ಲ. ಇದಕ್ಕೆ ಒಂದೇ ಒಂದು ಉಪಾಯ ಎಂದರೆ ನೀವು ಒಂದು ಕಾಯ್ದೆ ಮಾಡಿ ನಿರ್ಬಂಧ ಹಾಕಿದರೆ ಮಾತ್ರ ಅದು ಸಾಧ್ಯವಾಗುತ್ತದೆ. ಆಗ ಅವರು ಜೋರು ಮಾಡುವುದಕ್ಕಾಗುವುದಿಲ್ಲ. ಪಾವತಿ ಕೊಡುವಾಗ ಇಂತಿಷ್ಟು ಹಣ ಎಂದು ತೆಗೆದುಕೊಳ್ಳಬೇಕು. ಅದಕ್ಕಿಂತ ಹೆಚ್ಚು ತೆಗೆದುಕೊಳ್ಳಬಾರದು. ಹಾಗೇನಾದರೂ ತೆಗೆದುಕೊಂಡರೆ ಶಾಸನಕ್ಕೆ ಗುರಿಯಾಗುತ್ತಾರೆ ಎಂದು ನಿರ್ಬಂಧ ಹಾಕಬೇಕು. ಸರ್ಕಾರದ ಪರವಾಗಿ ಮೆರಿಟ್ ಮೇಲೆ 25 ಜನ ವಿದ್ಯಾರ್ಥಿಗಳನ್ನು ತೆಗೆದುಕೊಳ್ಳಬೇಕೆಂದು ಮೊದಲು ವ್ಯವಸ್ಥೆ ಇತ್ತು. ಈಗ ಈ ಬಿಲ್ಲನ್ನು ತರದೇ ಹೋದರೆ ಆ ವ್ಯವಸ್ಥೆ ಮತ್ತೆ ಬರುವುದಿಲ್ಲವೆಂದು ಹೇಳಬಯಸುತ್ತೇನೆ.

**ಶ್ರೀ ಎಸ್. ಬಂಗಾರಪ್ಪ**– ತಾವು ಈ ಕ್ಯಾಪಿಟೇಷನ್ ಬಗ್ಗೆ ಹೇಳಿದ್ದೀರಿ. ಬೆಳಗಾಂ ಕಾಲೇಜ್‌ನ ಉದಾಹರಣೆಯನ್ನು ಕೊಟ್ಟು ಹೇಳಿದ್ದೀರಿ. ಪೆಟ್ಟಿಗೆ ಇಟ್ಟಿದ್ದಾರೆ, ಸೀಲ್ ಹಾಕಿದ್ದಾರೆ, ಅದರಲ್ಲೆ ಯಾರು ಯಾರು ಎಷ್ಟೆಷ್ಟು ದುಡ್ಡು ಹಾಕುತ್ತಾರೆ ಎಂಬುದಕ್ಕೆ ಲೆಕ್ಕ ಸಿಕ್ಕುವುದಿಲ್ಲ, ರಸೀದಿ ಕೊಡುವುದಿಲ್ಲ ಎಂದು ಆಪಾದನೆ ಮಾಡಿದ್ದೀರಿ. ಜನ ಕೊಡಬೇಕೆಂದಿರುವ 50 ಸಾವಿರವಾಗಲಿ 75 ಸಾವಿರವಾಗಲಿ ಅಥವಾ ಒಂದು ಲಕ್ಷವಾಗಲಿ, ಕ್ಯಾಷ್ ಆಗಲಿ ಅಥವಾ ಪೆಟ್ಟಿಗೆಯಲ್ಲಾಗಲಿ ಒಯ್ದು ಹಾಕುತ್ತಾರೆ. ಏತಕ್ಕೆಂದರೆ ವಿದ್ಯಾರ್ಥಿಗಳಿಗೆ ಅಡ್ಮಿಷನ್ ಸಿಕ್ಕುವ ಅಂತಹವರು ಸಾಕಷ್ಟು ಹಣ ಕೊಡುತ್ತಾರೆ.

**ಶ್ರೀ ಪಿ. ಎಂ. ಬಾಂಗಿ**– ನಮ್ಮ ಕರ್ನಾಟಕ ರಾಜ್ಯದಲ್ಲಿ ಶ್ರೀಮಂತರ ಮಕ್ಕಳು ಕೇವಲ ಪೆಟ್ಟಿಗೆಯಲ್ಲಿ ಹಾಕುತ್ತಾರೆ. ಅವರ ಹೆಸರಿಗೆ ಪಾವತಿ ಸಹ ಇರುವುದಿಲ್ಲ. ಪ್ರೆಸಿಡೆಂಟ್ ಹೆಸರಿನಲ್ಲಿ ಲಮ್ಸ್‌ಮ್ ಹಣ ಜಮಾ ಮಾಡುತ್ತಾರೆ ಎಂದು ಹೇಳುತ್ತಾರೆ. ಬೋರ್ಡ್ ಆಫ್ ಮ್ಯಾನೇಜ್‌ಮೆಂಟಿನ ನಮಗೆ ಸಂಸ್ಥೆಯಲ್ಲಿ ಬಂದ ಹಣದ ಲೆಖ್ಖ ಕೇಳಿದರೂ ಅವರು ಲೆಖ್ಖ ತೋರಿಸುವುದಿಲ್ಲ. ಇದರಿಂದಾಗಿ ಪ್ರತಿ ವರ್ಷವೂ 75 ವಿದ್ಯಾರ್ಥಿಗಳು ಶ್ರೀಮಂತರ ಮಕ್ಕಳೇ ಅಡ್ಮಿಟ್ ಆಗುತ್ತಾರೆ. ಜನಸಾಮಾನ್ಯರಿಗೆ – ಬಡವರ ಮಕ್ಕಳಿಗೆ ಯಾವ ರೀತಿಯಿಂದಲೂ ಪ್ರವೇಶ ಇಲ್ಲ. ಆದುದರಿಂದ ಕೂಡಲೇ ಒಂದು ಕಾಯ್ದೆ ಮಾಡಿ ಐದೂ ಪ್ರೈವೇಟ್ ಮೆಡಿಕಲ್ ಕಾಲೇಜುಗಳನ್ನು ಹತೋಟಿಯೊಳಗೆ ತರಬೇಕೆಂದು ಸಲಹೆ ಮಾಡುತ್ತೇನೆ.

## ಸರಕಾರಿ ವೈದ್ಯರು ಪ್ರೈವೇಟ್ ಪ್ರ್ಯಾಕ್ಟಿಸ್ ಮಾಡಬಾರದು:

ಇನ್ನು ಎರಡನೇ ವಿಷಯ ಏನೆಂದರೆ ಸರ್ಕಾರಿ ಡಾಕ್ಟರುಗಳಿಗೆ ಪ್ರೈವೇಟ್ ಪ್ರ್ಯಾಕ್ಟಿಸ್ ಮಾಡಲು ಪರವಾನಗಿ ಕೊಟ್ಟಿದ್ದು ಸರಿಯಲ್ಲ. ಪ್ರೈವೇಟ್ ಪ್ರ್ಯಾಕ್ಟಿಸ್ ಯಾವುದು, ಕರಪ್ಷನ್ ಯಾವುದು ಎನ್ನುವುದನ್ನು ಯಾವ ರೀತಿಯಿಂದಲೂ ಡಿಫ್‌ರನ್ಷಿಯೇಟ್ ಮಾಡಲು ಬರುವುದಿಲ್ಲ. ಸರ್ಕಾರಿ ದವಾಖಾನೆಗಳಿಗೆ ರೋಗಿಗಳು ಬಂದರೆ ಅವರ ಕಡೆಯಿಂದ ಸಾಕಷ್ಟು ಹಣವನ್ನು ತೆಗೆದುಕೊಳ್ಳುತ್ತಾರೆ. ಆದುದರಿಂದ ತಾವು ದಯಮಾಡಿ ಸರ್ಕಾರಿ ಡಾಕ್ಟರುಗಳು ಪ್ರೈವೇಟ್ ಪ್ರ್ಯಾಕ್ಟಿಸ್ ಮಾಡಬಾರದೆಂದು ಹುಕುಂ ಮಾಡಬೇಕೆಂದು ಸೂಚಿಸುತ್ತೇನೆ. ಸರ್ಕಾರಿ ದವಾಖಾನೆಗಳಲ್ಲಿ ಇನ್‌ಪೇಷಂಟ್ಸ್‌ಗೋಸ್ಕರ ಬ್ರೆಡ್ ಮತ್ತು ಹಾಲನ್ನು ಕೊಡಲು ನಮ್ಮ ಜಿಲ್ಹೆಯಲ್ಲಿನ ದವಾಖಾನೆಗಳ ಚೀಫ್ ಮೆಡಿಕಲ್ ಆಫೀಸರ್ ಕ್ರೆಡಿಟ್ ಬೇಸಿಸ್ ಮೇಲೆ ಸಾಮಾನುಗಳನ್ನು ತಂದರೆ ಅವರಿಗೆ ಹಣವನ್ನು ಕೊಡುವ ವ್ಯವಸ್ಥೆ ಇಲ್ಲ. ಹೀಗಾಗಿ ಇನ್ನು ಮುಂದೆ ರೋಗಿಗಳಿಗೆ ಹಾಲು – ಬ್ರೆಡ್ ಕೊಡುವ ವ್ಯವಸ್ಥೆಯನ್ನು ನಿಲ್ಲಿಸಬೇಕಾಗುತ್ತದೆ. ದವಾಖಾನೆಗಳಿಗೆ ಕ್ರೆಡಿಟ್ ಬೇಸಿಸ್ ಮೇಲೆ ಏನು ಸಾಮಾನುಗಳನ್ನು ತಂದಿದ್ದಾರೆ ಅದಕ್ಕೆ ಸಂಪೂರ್ಣ ಹಣ ಕೊಡುವುದಕ್ಕೆ ವ್ಯವಸ್ಥೆ ಮಾಡಬೇಕೆಂದು ಸಲಹೆ ಮಾಡುತ್ತಿದ್ದೇನೆ. ಬೋರ್ಡ್

ಆಫ್ ವಿಜಿಟರ್ಸ್‌ದವರು ಪ್ರತಿಯೊಂದು ದವಾಖಾನೆಗಳ ಬಗ್ಗೆ ಮಾಡುವ ರೆಸಲ್ಯೂಷನ್ ಕಡೆಗೆ ಗಮನಕೊಟ್ಟು ಅದನ್ನು ಆಚರಣೆಯಲ್ಲಿ ತರುವ ವ್ಯವಸ್ಥೆ ಮಾಡಬೇಕೆಂದು ಹೇಳಿ ನನಗೆ ಇಷ್ಟು ಮಾತುಗಳನ್ನಾಡಲು ಅವಕಾಶ ಕೊಟ್ಟ ಅಧ್ಯಕ್ಷರಿಗೆ ವಂದಿಸಿ ನನ್ನ ಭಾಷಣವನ್ನು ಮುಗಿಸುತ್ತೇನೆ.

## ಟಿಪ್ಪಣಿ ರೂಪದ ಬಿಡಿ ಪ್ರಶ್ನೆಗಳು

### 8ನೇ ಮಾರ್ಚ 1975

**Sri P.M. Bangi (Jamkhandi)-** Will the Minister for Industries and Parliamentary Affairs be pleased to state:-

a) The names of spinning Mills in the State producing Yarn in the Co-operative Sector, Private Sector and Public Sector and the Talukas and Districts in which they are located.

b) The number of the spindle attached to each mill and what count of yarn is being produced by each mill.

c) The quantity of yarn in Kgs. produced by each mill per year;

d) Whether any yarn produced in the State is exported outside the State and India, if so the quantity of Yarn, of what counts and by which mill.

e) The nature of encouragement and assistance given by government by way of (1) share participation, (2) by giving Government undertaking for loan to be released by the Society,

(3) by giving sites or forest area for the installation of the Spinning Mills and their offices (4) by managerial subsidy if the Co-operative spinning Mills are registered and started in Co-operative Sector, during the year 1974-75?

**Sri S.M. Krishna (Minister for Industries and Parliamentary Affairs)**

a) Vide column 1 of the statement placed on the Table of the House copy placed in the Karnataka Legislative library vide No. 16/Q8/3/75.

b) Vide column 2 of the Statement placed on the Table of the House.

c) Vide column 3 of the Statement placed on the Table of the House.

d) Available information is furnished in column (4) of the statement placed on the Table of the House.

e) Nil.

**ಶ್ರೀ ಪಿ. ಎಂ. ಬಾಂಗಿ**– ತಾವು ಕೊಟ್ಟ ಸ್ಟೇಟ್‌ಮೆಂಟ್ ನೋಡಲಿಕ್ಕೆ ಹೋದರೆ ತಮಿಳುನಾಡಿನಲ್ಲಿ ಸುಮಾರು ಒಂದು ಕೋಟಿ ರೂಪಾಯಿಗಳಷ್ಟು ನೂಲು ಇಟ್ಟುಕೊಂಡು ಹೆಚ್ಚಿನದನ್ನು ಹೊರ ದೇಶಗಳಿಗೆ ಕಳಿಸಲಿಕ್ಕೆ ವ್ಯವಸ್ಥೆ ಮಾಡಿದ್ದಾರೆ. ಆ ಪ್ರಕಾರ ತಾವೂ ಇಲ್ಲಿ ವ್ಯವಸ್ಥೆ ಮಾಡಲಿಕ್ಕೆ ಏನು ಅಡ್ಡಿ ಇದೆ?

ಶ್ರೀ ಎಸ್.ಎಂ. ಕೃಷ್ಣ– ನಮ್ಮ ಎಸ್ಟಿಮೇಟ್ ಪ್ರಕಾರ, total quantity of yarn produced in our spinning mills is 9,52,000 Kgs. of various counts. We are having 1,37,000 cotton handlooms approximately. Their requirement comes to 8,00,000 Kg. yarn of different count. ಇದರ ಜೊತೆಗೆ 26,000 ಪವರ್ ಲೂಮ್ಸ್ ಇವೆ. ಅದಕ್ಕೆ 5 ಲಕ್ಷ ಕೆ.ಜಿ. ಬೇಕು ಎಂದು ಎಸ್ಟಿಮೇಟ್ ಇದೆ. ಆದುದರಿಂದ ಕೆಲವು ಕಾಂಪೊಸಿಟ್ ಮಿಲ್ಸ್ ನಮ್ಮ ರಾಜ್ಯದಿಂದ ಹೊರಗಡೆ ಕಳಿಸಬೇಕಾಗುತ್ತದೆ. ನಮ್ಮ ರಾಜ್ಯದ ನೇಕಾರರ ಅವಶ್ಯಕತೆಗಳನ್ನು ಪೂರೈಸುವುದಕ್ಕೆ ತಕ್ಕ ಕಾರ್ಯಕ್ರಮಗಳನ್ನು ತೆಗೆದುಕೊಂಡಿದ್ದೇವೆ.

ಶ್ರೀ ಪಿ. ಎಂ. ಬಾಂಗಿ– ತಮಿಳುನಾಡಿನಲ್ಲಿ ಕೋ ಆಪರೇಟಿವ್ ಮತ್ತು ಪಬ್ಲಿಕ್ ಸೆಕ್ಟರ್‌ಗಳಲ್ಲಿ ಹುಟ್ಟುವ ಯಾರ್ನ ಬಗ್ಗೆ ಪ್ರತಿ ತಿಂಗಳು ಡಿಕ್ಲರೇಷನ್ ತೆಗೆದುಕೊಂಡು ನೇಕಾರರಿಗೆ ಎಷ್ಟು ಬೇಕು ಅಷ್ಟು ಇಟ್ಟುಕೊಂಡು ಹೆಚ್ಚಿನದನ್ನು ಎಕ್ಸ್‌ಪೋರ್ಟ್ ಮಾಡುತ್ತಾರೆ. ಅದೇ ರೀತಿ ತಾವೂ ಮಾಡುತ್ತೀರಾ?

ಶ್ರೀ ಎಂ.ಎಸ್.ಕೃಷ್ಣ– ಇಲ್ಲೂ ಕೂಡ ನಮ್ಮ ಸಹಕಾರಿ ಕ್ಷೇತ್ರದ ಟೆಕ್ಸ್‌ಟೈಲ್ ಮಿಲ್‌ಗಳು ಅವರ ಪ್ರೊಡಕ್ಷನ್ ಪ್ಯಾಟರ್ನ ಏನಿದೆ ಆ ಪ್ರೊಡಕ್ಷನ್ ಫಿಗರ್ಸ್‌ನ್ನು ಡೈರಕ್ಟರ್ ಆಫ್ ಇಂಡಸ್ಟ್ರೀಸ್‌ಗೆ ಕೊಡುತ್ತಾ ಬಂದಿದ್ದಾರೆ.

## ಕಂದಾಯ ಇಲಾಖೆಯ ಮೇಲಿನ ಚರ್ಚೆ

### 17ನೇ ಮಾರ್ಚ 1975

ಶ್ರೀ ಪಿ. ಎಂ. ಬಾಂಗಿ (ಜಮಖಂಡಿ)– ಮಾನ್ಯ ಸಭಾಪತಿಗಳೇ, ಇವತ್ತಿನ ದಿವಸ ಕಂದಾಯ ಮಂತ್ರಿಗಳು ಇಟ್ಟಿರತಕ್ಕಂಥ ಐದೂ ಬೇಡಿಕೆಗಳನ್ನು ಸಮರ್ಥಿಸುತ್ತಾ, ಆ ವಿಷಯದಲ್ಲಿ ನಾನು ಹಲವು ಸೂಚನೆಗಳನ್ನು ಮಾಡಬಯಸುತ್ತೇನೆ. ಲ್ಯಾಂಡ್ ರಿಫಾರ್ಮ್ಸ್ ಆ್ಯಕ್ಟ್ ಬಗ್ಗೆ ಮಾತನಾಡಬೇಕಾದರೆ ಮೊಟ್ಟಮೊದಲು ಇದು ಇಂಪ್ಲಿಮೆಂಟ್ ಆಗಬೇಕಾಗಿದೆ.

## ಭೂಸುಧಾರಣಾ ಕಾಯ್ದೆಯ ತೊಂದರೆಗಳು :

ಲ್ಯಾಂಡ್ ರಿಫಾರ್ಮ್ಸ್ ಅಮೆಂಡ್‌ಮೆಂಟ್ ಆ್ಯಕ್ಟ್ ಸೆಕ್ಷನ್ 134, 2(ಎ) ಮತ್ತು (ಬಿ) ಈ ಕಲಂಗಳಲ್ಲಿ ಸಿವಿಲ್ ಕೋರ್ಟಿನಲ್ಲಿ ಯಾವುದೇ ಖಟ್ಲೆಯಲ್ಲಿ ಟೆನೆನ್ಸಿ ಪ್ರಶ್ನೆ ಬಂದರೆ ಅದನ್ನು ಲ್ಯಾಂಡ್ ಟ್ರಿಬ್ಯೂನಲ್‌ಗೆ ಒಪ್ಪಿಸಬೇಕೆಂದು ಹೇಳಲಾಗಿದೆ. ಆದರೆ ರೆವಿನ್ಯೂ ಮತ್ತು ಕ್ರಿಮಿನಲ್ ಕೋರ್ಟುಗಳಲ್ಲಿ ಇಂಥ ಪ್ರಶ್ನೆ ಬಂದರೆ, ಅವನ್ನು ಲ್ಯಾಂಡ್ ಟ್ರಿಬ್ಯೂನಲ್‌ಗಳಿಗೆ ಒಪ್ಪಿಸಬೇಕೆಂದು ಹೇಳಿಲ್ಲ. ಆದುದರಿಂದ ಟೆನೆನ್ಸಿ ವಿಷಯವನ್ನು ನಿರ್ಣಯ ಮಾಡುವ ಅಧಿಕಾರ ಕೇವಲ ಲ್ಯಾಂಡ್ ಟ್ರಿಬ್ಯೂನಲ್‌ಗೆ ಇರಬೇಕೇ ಹೊರತು ಬೇರೆ ಯಾರಿಗೂ ಇರಬಾರದು. ಈ ಪ್ರಕಾರ ಕಾಯ್ದೆಯಲ್ಲಿ ತಿದ್ದುಪಡಿ ಮಾಡಬೇಕೆಂದು ಈ ಸಮಯದಲ್ಲಿ ಸೂಚಿಸಬಯಸುತ್ತೇನೆ. ಧಾರವಾಡ, ಬೆಳಗಾವಿ, ವಿಜಾಪೂರ ಈ ಉತ್ತರ ಕರ್ನಾಟಕದ ಜಿಲ್ಹೆಗಳಲ್ಲಿ ಇರುವಂತೆ ದೇಸಾಯಿ, ದೇಶಪಾಂಡೆ, ನಾಡಗೌಡಾ ಮುಂತಾದ ಭೂ ಮಾಲೀಕರು ತಮ್ಮಲ್ಲಿದ್ದಂಥ ಬಹಳ ದೊಡ್ಡ ಪ್ರಮಾಣದ ಹಿಡುವಳಿಗಳನ್ನು ಬೇರೆಯವರ ಹೆಸರುಗಳಲ್ಲಿ ಗೇಣಿದಾರರೆಂದು ಅವರ ಕಡೆಯಿಂದ ಎಂಟ್ರಿ ಮಾಡಿಸಿ ಸೀಲಿಂಗ್ ಲಿಮಿಟ್‌ಗೆ ಹೆಚ್ಚಾಗದಂತೆ ಫಾರಂ ನಂ. 7 ರಲ್ಲಿ ಅರ್ಜಿಗಳನ್ನು ಹಾಕಿಸಿದ್ದಾರೆ. ಇಂಥ ಅಕ್ರಮಗಳನ್ನು ರದ್ದು ಮಾಡಿ ಅಂಥ ಜಮೀನುಗಳನ್ನು ಸರ್ಕಾರದವರು ತಮ್ಮ ವಶಕ್ಕೆ ತೆಗೆದುಕೊಂಡು ಸೆಕ್ಷನ್ 77ರ ಪ್ರಕಾರ ಅವುಗಳನ್ನು ಡಿಸ್ಟ್ರಿಬ್ಯೂಟ್ ಮಾಡಬೇಕು. ಕಾಯ್ದೆ ಪ್ರಕಾರ ಕೇವಲ ಸ್ಮಾಲ್ ಹೋಲ್ಡರ್ಸ್‌ಗೆ, ವಿಧವೆಯರಿಗೆ, ಅಂಗವಿಕಲರಿಗೆ ಲೀಸ್ ಮಾಡುವ ಅಧಿಕಾರವಿದೆ, ಹೊರತಾಗಿ ಇಂಥ ಜಮೀನ್ದಾರರಿಗೆ ಭೂಮಿಯನ್ನು ಲೀಸ್ ಮಾಡುವ ಅಧಿಕಾರ ಇಲ್ಲ. ಮುಂಬೈ ಮತ್ತು ಹೈದರಾಬಾದ ಕರ್ನಾಟಕದಲ್ಲಿ ಇನಾಂ ಎಬಾಲಿಷನ್ ಆ್ಯಕ್ಟನ್ನು ಪಾಸ್ ಮಾಡಿದ್ದರೂ ಅದು ಇನ್ನೂ ಅಮಲಿನಲ್ಲಿ ಬರಲಿಲ್ಲ. ಲ್ಯಾಂಡ್ ರೆಫಾರ್ಮ್ಸ್ ಆ್ಯಕ್ಟ್ ಇಷ್ಟರಲ್ಲಿ ಅಮಲಿನಲ್ಲಿ ಬರುವ ಕಾರಣದಿಂದ ಮುಂಬೈ ಮತ್ತು ಹೈದರಾಬಾದ ಕರ್ನಾಟಕದಲ್ಲಿ ರಿಲಿಜಿಯಸ್ ಜಮೀನುಗಳಲ್ಲಿ ಇರುವ ಕುಳಗಳಿಗೆ ಈ ಇನಾಮ್ ಅಬಾಲಿಷನ್ ಆ್ಯಕ್ಟ್ ಹತ್ತುವುದಿಲ್ಲ. ಪರ್ಮನಂಟ್ ಕುಳಗಳು, ಪ್ರೊಟೆಕ್ಟೆಡ್ ಕುಳಗಳು ಮತ್ತು ಆರ್ಡಿನರಿ ಕುಳಗಳು ಎಂದು ಮೂರು ಭಾಗ ಮಾಡಿ, ಮುಂಬೈ ಮತ್ತು ಹೈದರಾಬಾದ ಕರ್ನಾಟಕದಲ್ಲಿ ಧಾರ್ಮಿಕ

ಜಮೀನುಗಳ ಕುಳಗಳು ಏನಿದ್ದಾರೋ ಅವರಿಗೆ ಲ್ಯಾಂಡ್ ರೆಫಾರ್ಮ್ಸ್ ಆ್ಯಕ್ಟ್ ಹೊರತಾಗಿ ಬೇರೆ ಕಾಯ್ದೆ ಹತ್ತುವುದಿಲ್ಲ ಎಂದು ಅಲ್ಲಿನ ಲ್ಯಾಂಡ್ ಟ್ರಿಬ್ಯುನಲ್‌ಗಳಿಗೆ ಆದೇಶವನ್ನು ಕೊಡಬೇಕು. ಒಂದು ಲ್ಯಾಂಡ್ ಟ್ರಿಬ್ಯುನಲ್‌ನಲ್ಲಿ ನಡೆದಂಥ ವ್ಯಾಜ್ಯವನ್ನು ಮತ್ತೊಂದು ಲ್ಯಾಂಡ್ ಟ್ರಿಬ್ಯುನಲ್‌ಗೆ ವರ್ಗಾಯಿಸುವ ಅಧಿಕಾರ ಈ ಕಾಯ್ದೆ ಪ್ರಕಾರ ಯಾರಿಗೂ ಇರುವುದಿಲ್ಲ. ಯಾವುದೇ ಖಟ್ಲೆಯಲ್ಲಿ ಮುನ್ಸೀಫ್ ಮೇಲೆ ಅರ್ಜಿಗಳು ಬಂದರೆ ಅಂಥವುಗಳನ್ನು ಬೇರೆ ಕಡೆಗೆ ವರ್ಗ ಮಾಡುವ ಅಧಿಕಾರ ಡಿಸ್ಟ್ರಿಕ್ಟ್ ಜಜ್‌ಗೆ ಇರುತ್ತದೆ. ಲ್ಯಾಂಡ್ ಟ್ರಿಬ್ಯುನಲ್‌ದಲ್ಲಿನ ಅರ್ಜಿಗಳ ಬಗ್ಗೆ ಲ್ಯಾಂಡ್ ಟ್ರಿಬುನಲ್ ಚೇರ್ಮನ್ ಅಥವಾ ಪ್ರೆಸಿಡೆಂಟ್ ಅವರುಗಳ ಬಗ್ಗೆ ದೂರು ಬಂದರೆ ಅಂಥ ಪ್ರಕರಣಗಳನ್ನು ಬೇರೆ ಲ್ಯಾಂಡ್ ಟ್ರಿಬ್ಯುನಲ್‌ಗೆ ವರ್ಗಾಯಿಸುವ ಅಧಿಕಾರವನ್ನು ಈ ಕಾಯ್ದೆಯಲ್ಲಿ ಯಾರಿಗೂ ಕೊಟ್ಟಿಲ್ಲ. ಈ ದೃಷ್ಟಿಯಿಂದ ಸರ್ಕಾರದವರು ಈ ಕಾಯ್ದೆಯಲ್ಲಿ ತಿದ್ದುಪಡಿ ಮಾಡಿ ಈ ಅಧಿಕಾರವನ್ನು ಡೆಪ್ಯೂಟಿ ಕಮೀಷನರ್‌ಗೆ ಕೊಡಬೇಕು. ಮುನ್ಸೀಫ್ ಕೋರ್ಟ್‌ನಿಂದ ಸೆಕ್ಷನ್ 133 (2) (3) ಮತ್ತು (ಬಿ) ಪ್ರಕಾರ ಟ್ರಿಬ್ಯುನಲ್ ಕಡೆಗೆ ಟೆನೆನ್ಸಿ ಇಷ್ಯೂ ರೆಫರ್ ಆದ ನಂತರ ಅದಕ್ಕೆ ಯಾವ ಪ್ರೊಸೀಜರ್ ಹಚ್ಚಬೇಕು ಎಂಬ ಬಗ್ಗೆ ಕಾಯ್ದೆಯಲ್ಲಿ ವ್ಯವಸ್ಥೆ ಇಲ್ಲ. ಈ ಪ್ರಕಾರ ಟೆನೆನ್ಸಿ ಇಷ್ಯೂ ಬಂದ ನಂತರ ಟ್ರಿಬ್ಯುನಲ್ ಮೊದಲು ಗೇಣೀದಾರರಿಗೂ, ಭೂಮಾಲೀಕರಿಗೂ ಹಿಡುವಳಿದಾರರು ಎಂದು ದಾಖಲು ಮಾಡಿ ಸಾರ್ವಜನಿಕ ನೋಟೀಸ್ ಮತ್ತು ವೈಯಕ್ತಿಕ ನೋಟೀಸ್ ಕೊಟ್ಟು ಫಾರಂ ನಂಬರ್ 7 ರ ಪ್ರಕಾರ ವಿಚಾರಣೆ ಮಾಡಬೇಕು. ಆ ದೃಷ್ಟಿಯಿಂದ ಸರ್ಕಾರದವರು ನೋಟಿಫಿಕೇಷನ್ ತೆಗೆದು ಭೂ ಪಂಚಾಯ್ತಿಗಳಿಗೆ ಆದೇಶ ಕೊಡಬೇಕೆಂದು ಈ ಸಮಯದಲ್ಲಿ ಸೂಚಿಸಬಯಸುತ್ತೇನೆ.

**ಭೂ ಹಂಚಿಕೆ ತ್ವರಿತ ಮತ್ತು ಕ್ರಮಬದ್ಧವಾಗಿರಬೇಕು:**

ಇನ್ನೊಂದು ವಿಷಯ ಸ್ಪೀಡಿ ಡಿಸ್ಪೋಸಲ್‌ಗೆ ಸಂಬಂಧಿಸಿದ್ದು. ಈ ಬಗ್ಗೆ ಏನು ಮಾಡಬೇಕೆಂದರೆ ಲ್ಯಾಂಡ್ ಲಾರ್ಡ್ಸ್ ಮತ್ತು ಟೆನೆಂಟ್ಸ್ ಎನ್‌ಕ್ವಯರಿಗೆ ಬಂದಾಗ ಜಾಯಿಂಟ್ ಮೆಮೋ ಫೈಲ್ ಮಾಡಿದರೆ ಅದನ್ನು

ಸ್ವೀಕರಿಸುವ ಬಿಡುವ ಡಿಸ್ಕ್ರೀಷನ್‌ಅನ್ನು ಟ್ರಿಬ್ಯುನಲ್‌ಗೆ ಕೊಡಬೇಕು. ಏತಕ್ಕೆಂದರೆ ಜಾಯಿಂಟ್ ಮೆಮೋ ಹಾಕಲು ಅವಕಾಶ ಕೊಟ್ಟರೆ, ಅದನ್ನು ಲ್ಯಾಂಡ್ ಲಾರ್ಡ್ಸ್ ಮಿಸ್‌ಯೂಸ್ ಮಾಡಬಹುದು. ಟೆನೆಂಟ್‌ಗೆ ಏನೋ ಹೇಳಿ ಮರಳು ಮಾಡಿ ಜಾಯಿಂಟ್ ಮೆಮೋ ಹಾಕಿಸಿದರೆ, ಟೆನೆಂಟ್ ಸ್ವಾಧೀನಕ್ಕೆ ಹೋದಂಥ ಆಸ್ತಿಯನ್ನು ಲ್ಯಾಂಡ್ ಲಾರ್ಡ್ ಮರಳಿ ತನ್ನ ಸ್ವಾಧೀನಕ್ಕೆ ತೆಗೆದುಕೊಳ್ಳುವ ಗಂಡಾಂತರವಿದೆ. ಜಾಯಿಂಟ್ ಮೆಮೋದಲ್ಲಿ ಡಿಕ್ಲರೇಷನ್‌ಗೆ ಸಂಬಂಧಟ್ಟ ಸರ್ವೇ ನಂಬರ್ ಇರದಿದ್ದರೆ, ಜಾಯಿಂಟ್ ಮೆಮೋ ಸರಿಯಾಗಿ ಇಲ್ಲದಿದ್ದರೆ, ಅದನ್ನು ರಿಜೆಕ್ಟ್ ಅಥವಾ ಅಕ್ಸೆಪ್ಟ್ ಮಾಡಲಿಕ್ಕೆ ಟ್ರಿಬ್ಯೂನಲ್‌ಗೆ ಡಿಸ್ಕ್ರೀಷನ್ ಕೊಡಬೇಕು. ಇಂಥಾದ್ದನ್ನು ಮಾಡಿದರೆ ಟ್ರಿಬ್ಯೂನಲ್ ಖಂಡಿತ ಹೆಚ್ಚಿನ ವೇಗದಿಂದ ಕೆಲಸ ಮಾಡುತ್ತದೆ. ಬಜೆಟ್‌ನಲ್ಲಿ ಲ್ಯಾಂಡ್ ರಿಫಾರ್ಮ್ಸ್ ಇಂಪ್ಲಿಮೆಂಟೇಶನ್‌ಗೆ ಯಾವ ಪ್ರಾವಿಶನ್ ಇಲ್ಲದ ಕಾರಣ ಎಲ್ಲರಿಗೂ ಬೇಸರ ಉಂಟಾಗಿದೆ. ಆದರೆ ತಾವು ನಿನ್ನೆ ಕಳುಹಿಸಿದ ಆಜ್ಞೆಯಲ್ಲಿ ಎಷ್ಟೋ ಲಕ್ಷ ರೂಪಾಯಿಗಳನ್ನು ಇಂಪ್ಲಿಮೆಂಟ್‌ಗಾಗಿ ಇಟ್ಟಿದ್ದೇವೆ, ಲ್ಯಾಂಡ್ ಡೆವಲಪ್‌ಮೆಂಟ್ ಬ್ಯಾಂಕಿನಿಂದ ಎಷ್ಟೋ ಹಣ ಬರುತ್ತದೆ ಎಂದು ಇದೆ. ಮೂರು ವರ್ಷದಲ್ಲಿ 10 ಕೋಟಿ ರೂಪಾಯಿ ಲ್ಯಾಂಡ್ ಡೆವಲಪ್‌ಮೆಂಟ್ ಬ್ಯಾಂಕಿನಿಂದ ಬಂದರೂ ನಮ್ಮ ಲ್ಯಾಂಡ್ ರಿಫಾರ್ಮ್ಸ್ ಇಂಪ್ಲಿಮೆಂಟೇಶನ್‌ಗೆ ಸಾಕಾಗಲಿಕ್ಕಿಲ್ಲ. ಆದ್ದರಿಂದ ತಾವು ನ್ಯಾಷನಲ್ ಬ್ಯಾಂಕಿನ ಸಹಾಯದಿಂದ ಅಥವಾ ವರ್ಲ್ಡ್ ಬ್ಯಾಂಕಿನಿಂದ ಸಹಾಯಧನ ಪಡೆದು ಸ್ಪೀಡಿ ಡಿಸ್‌ಪೋಸಲ್‌ಗೆ ಅನುಕೂಲವಾಗುವಂತೆ ಮಾಡಬೇಕು. ಒಂದು ಸಲ ಟ್ರಿಬ್ಯುನಲ್ ಆಜ್ಞೆ ಮಾಡಿದರೂ ಸೆಕೆಂಡ್ ಸ್ಟೇಜ್‌ನಲ್ಲಿ ಕಾಂಪೆನ್ಸೇಶನ್‌ಗೆ ಹೋಗುತ್ತದೆ ಮತ್ತು ಕಾಂಪೆನ್ಸೇಶನ್ ಆರ್ಡರ್ ಆಗಲು ಸಮಯ ವ್ಯರ್ಥವಾಗುತ್ತದೆ. ಅವರಿಗೆ ಕಾಂಪೆನ್ಸೇಶನ್ ಸರಾಗವಾಗಿ ದೊರಕುವಂತೆ ಹಣದ ವ್ಯವಸ್ಥೆಯ ಅಗತ್ಯವಿದೆ.

**ಸೌತ್ ಕೆನರಾ ನೆರೆಹಾವಳಿ ಪರಿಹಾರ:**

ಇನ್ನು ಬೇರೆ ವಿಷಯವೆಂದರೆ, ಸೌಥ್ ಕೆನರಾದಲ್ಲಿ 50 ವರ್ಷಗಳ ಹಿಂದೆ ಬಂದಂಥ ಅಗಾಧ ನೆರೆ ಬಂದು ಏಳು ಸಾವಿರಕ್ಕಿಂತ ಹೆಚ್ಚು ಮನೆಗಳಿಗೆ ಅದರಲ್ಲೂ ಮಣ್ಣಿನ ಗೋಡೆಯ ಮನೆಗಳಿಗೆ ಬಹಳ ಉಪದ್ರವವಾಗಿದೆ. ಐದು

ಸಾವಿರಕ್ಕಿಂತ ಹೆಚ್ಚು ಮನೆಗಳು ಸಂಪೂರ್ಣ ಬಿದ್ದು ಹೋಗಿವೆ. ತತ್ಕಾಲಕ್ಕೆ ಸರ್ಕಾರ ಅವರ ರಿಹ್ಯಾಬಿಲಿಟೇಶನ್‌ಗೆ ಮುಂದೆ ಬಂದಿದೆ. ಒಂದು ಸಾವಿರ ರೂಪಾಯಿ ಸಬ್‌ಸಿಡಿ, ಒಂದು ಸಾವಿರದ ನಾನೂರು ರೂಪಾಯಿಗಳನ್ನು ಲೋನ್ ಕೊಡುತ್ತಾ ಬಂದಿದೆ. ಮನೆಗಳನ್ನು ಕಟ್ಟಿ ಕೊಳ್ಳುವುದಕ್ಕೆ ಸೈಟ್‌ಗಳನ್ನು ಕೊಟ್ಟಿದೆ. ಆದರೆ ಈ ಕೆಲಸ ನಾವು ನಿರೀಕ್ಷಿಸಿದಷ್ಟು ವೇಗವಾಗಿ ನಡೆದಿಲ್ಲವೆಂದು ಹೇಳುವುದಕ್ಕೆ ವ್ಯಥೆಪಡುತ್ತೇನೆ.

**ಭೂ ಪಂಚಾಯ್ತಿಗಳ ಮೇಲೆ ಹಿಡಿತವಿರಲಿ:**

ಇನ್ನು ಎಷ್ಟೋ ಭೂ ಪಂಚಾಯ್ತಿಗಳಲ್ಲಿ ವಕೀಲರು ಸದಸ್ಯರಾಗಿದ್ದಾರೆ. ಸದಸ್ಯರಾಗುವ ಪೂರ್ವದಲ್ಲಿ ಫಾರಂ ನಂ.7 ಮತ್ತು ಫಾರಂ ನಂ. 11 ಅನ್ನು ತುಂಬಿ ತಮ್ಮ ಪಕ್ಷಗಾರರ ಕಡೆಯಿಂದ ದಾಖಲು ಮಾಡಿಸಿ, ಈ ರೀತಿ ವಕಾಲತ್ತಿನಿಂದ ಸಾಕಷ್ಟು ಸಂಪಾದನೆ ಮಾಡುತ್ತಿದ್ದಾರೆ, ಅಂಥವರನ್ನು ಕಂಡು ಹಿಡಿದು ಭೂ ಪಂಚಾಯ್ತಿಗಳಿಂದ ಕಡಿಮೆ ಮಾಡಬೇಕು. ಭೂ ಮಾಲೀಕರಿಗೆ ಮತ್ತು ಗೇಣೀದಾರರಿಗೆ ನಿರ್ಮಲವಾದ ನ್ಯಾಯ ಕೊಡುವ ದೃಷ್ಟಿಯಿಂದ ಭೂ ಪಂಚಾಯ್ತಿಯ ಸದಸ್ಯರಾದವರ ಕಡೆಯಿಂದ ಅವರ ಅಸೆಟ್ಸ್ ಅಂಡ್ ಲಯಬಿಲಿಟೀಸ್ ಬಗ್ಗೆ ಡಿಕ್ಲರೇಷನ್‌ನ್ನು ತೆಗೆದುಕೊಳ್ಳಬೇಕು.

**ಸಮರ್ಪಕ ಛಾಪಾ ಕಾಗದಗಳನ್ನು ಒದಗಸಿ:**

ಇನ್ನು ರಿಜಿಸ್ಟ್ರೇಷನ್ ವಿಷಯದಲ್ಲಿ ಹೇಳುವುದಾದರೆ ಸ್ಟ್ಯಾಂಪ್ ಪೇಪರ್ ಸಿಗುವುದಿಲ್ಲವೆಂದು ಬಿಳಿ ಕಾಗದದ ಮೇಲೆ ಡಾಕ್ಯುಮೆಂಟ್ ಬರೆಯಲು ತಾವು ಆದೇಶವನ್ನು ಕೊಟ್ಟಿದ್ದೀರಿ. ಸ್ಟ್ಯಾಂಪ್ ಪೇಪರ್ ದೊರೆಯದೇ ಇದ್ದ ಪಕ್ಷದಲ್ಲಿ ಸರ್ಕಾರದ ಪ್ರಿಂಟಿಂಗ್ ಪ್ರೆಸ್‌ನಿಂದ ದಪ್ಪನೆಯ ಕಾಗದವನ್ನು ಒದಗಿಸಿ ಅದರಲ್ಲಿ ಬರೆಯಲು ಅವಕಾಶ ಕೊಡಬೇಕೆಂದು ಸೂಚಿಸಬಯಸುತ್ತೇನೆ.

## ಭೂಮಿ ಪರಭಾರೆಯಾಗುವದನ್ನು ತಪ್ಪಿಸಿ:

ಇನ್ನು ಫ್ರ್ಯಾಗ್ಮೆಂಟೇಶನ್ ವಿಷಯದಲ್ಲಿ ಹೇಳಬೇಕಾದರೆ, ಮುಂಬೈ, ಮೈಸೂರು ಮೊದಲಾದ ರಾಜ್ಯಗಳಲ್ಲಿ ಮೊದಲು ಫ್ರ್ಯಾಗ್ಮೆಂಟೇಶನ್ ಆ್ಯಕ್ಟ್‌ನ್ನು ಅನುಸರಿಸುತ್ತಿದ್ದರು. ಆನಂತರ ಕರ್ನಾಟಕ ಕನ್ಸೊಲಿಡೇಷನ್ ಆ್ಯಕ್ಟ್ ಬಂತು. ಆದರೆ ಇವತ್ತಿನವರೆಗೂ ಈ ಸಂಬಂಧವಾಗಿ ಮಾಲೀಕರಿಗೆ ಯಾವ ನೋಟೀಸ್‌ನ್ನೂ ಕೊಟ್ಟಿಲ್ಲ. ಇವತ್ತಿನ ದಿವಸ ಭೂಮಿ ಸಾಕಷ್ಟು ಪರಭಾರೆಯಾಗುತ್ತಿದೆ. ಆದುದರಿಂದ ಫ್ರ್ಯಾಗ್ಮೆಂಟೇಶನ್ ಸಂಬಂಧ ತಾವು ಕೂಡಲೇ ಜಮೀನು ಮಾಲೀಕರಿಗೆ ನೋಟೀಸು ಕೊಟ್ಟು ಇಂಥ ಫ್ರ್ಯಾಗ್ಮೆಂಟೇಶನ್ ಪರಭಾರೆ ಆಗದ ರೀತಿಯಲ್ಲಿ ಆಜ್ಞೆಯನ್ನು ಹೊರಡಿಸಬೇಕೆಂದು ಸೂಚಿಸಬಯಸುತ್ತೇನೆ.

## ನಿಗದಿತ ಕಂದಾಯ ವಸೂಲಿ ಮಾಡಿ:

ಇನ್ನೊಂದು ವಿಚಾರ ಏನೆಂದರೆ, ವಿಲೀನವಾದ ಡೆಕ್ಕನ್ ಸಂಸ್ಥಾನಗಳಾದ ಜಮಖಂಡಿ, ಮುಧೋಳ, ರಾಮದುರ್ಗ, ಮುಂತಾದ ಕಡೆ ಭೂ-ಕಂದಾಯವನ್ನು ರಿಕಾರ್ಡ್ ಆಫ್ ರೈಟ್ಸ್ ಪ್ರಕಾರ ಸರ್ಕಾರದವರು ವಸೂಲು ಮಾಡುತ್ತಿಲ್ಲ. ಸಂಸ್ಥಾನದ ರಾಜರ ಜೊತೆ ಮಾಡಿಕೊಂಡ ಅಗ್ರಿಮೆಂಟ್ ಕರಾರಿನಂತೆ ಕಡಿಮೆ ಹಣವಸೂಲು ಮಾಡುತ್ತಿದ್ದಾರೆ. ಇದರಿಂದ ಗೇಣಿದಾರರ ಕಡೆಯಿಂದ ಹೆಚ್ಚಿಗೆ ರೆಂಟ್ ಪಡೆಯುವ ಮತ್ತು ಹೆಚ್ಚಿನ ಕಾಂಪನ್ಸೇಷನ್‌ನ್ನು ಕೊಡುವ ಪ್ರಸಂಗ ಬರುತ್ತದೆ. ಆದುದರಿಂದ ತಿದ್ದುಪಡಿ ಮಾಡಿ ಪ್ರತ್ಯಕ್ಷವಾಗಿ ಏನು ಕಡಿಮೆ ಕಂದಾಯ ವಸೂಲು ಮಾಡುತ್ತಿದ್ದಾರೆ, ಅದನ್ನೇ ರಿಕಾರ್ಡ್ ಆಫ್ ರೈಟ್ಸ್‌ದಲ್ಲಿ ದಾಖಲು ಮಾಡುವಂತೆ ವ್ಯವಸ್ಥೆ ಮಾಡಬೇಕೆಂದು ಸೂಚಿಸಿ ಇವತ್ತಿನ ದಿವಸ ಇಷ್ಟು ಮಾತುಗಳನ್ನಾಡಲು ಅವಕಾಶ ಮಾಡಿಕೊಟ್ಟ ಅಧ್ಯಕ್ಷರಿಗೆ ವಂದಿಸಿ ನನ್ನ ಭಾಷಣವನ್ನು ಮುಗಿಸುತ್ತೇನೆ.

# ಕೈಗಾರಿಕಾ ಬೇಡಿಕೆಯ ಮೇಲಿನ ಚರ್ಚೆ

## 24ನೇ ಮಾರ್ಚ್ 1975

### ನೇಕಾರ ಉದ್ಧಾರವಾದರೆ ರಾಜ್ಯ ಉದ್ಧಾರ:

ಶ್ರೀ ಪಿ. ಎಂ. ಬಾಂಗಿ (ಜಮಖಂಡಿ)– ಮಾನ್ಯ ಅಧ್ಯಕ್ಷರೇ, ನಮ್ಮ ಬಜೆಟ್ಟಿನ ಕೈಗಾರಿಕಾ ಡಿಮ್ಯಾಂಡ್ ಬಗ್ಗೆ ಮಾತನಾಡುತ್ತ ಕೆಲವು ವಿಚಾರಗಳನ್ನು ನಮ್ಮ ಸ್ನೇಹಿತರು ಇಲ್ಲಿ ಹೇಳಿದ್ದಾರೆ. ಆದರೆ ಯಾರೂ ನೇಕಾರರ ಬಗ್ಗೆ ಇದುವರೆಗೆ ಮಾತನಾಡಲಿಲ್ಲ. ನಾನು ನೇಕಾರರ ಬಗ್ಗೆ ಒಂದೆರ್ಡು ವಿಚಾರಗಳನ್ನು ಇಲ್ಲಿ ಪ್ರಸ್ತಾಪ ಮಾಡಬೇಕಾಗಿದೆ. ನಮ್ಮ ರಾಜ್ಯದಲ್ಲಿ 518 ನೇಕಾರರ ಸೊಸೈಟಿಗಳಿವೆ. ಇವುಗಳಲ್ಲಿ 298 ಸೊಸೈಟಿಗಳು ಡಿಫಂಕ್ಟ್ ಆಗಿವೆ. ಇನ್ನುಳಿದಿರತಕ್ಕ ಸೊಸೈಟಿಗಳಲ್ಲಿ ಯಾವವೂ ಸರಿಯಾಗಿ ಕೆಲಸ ಮಾಡುತ್ತಿಲ್ಲ ಮತ್ತು ಇವುಗಳ ಲೆಖ್ಖಗಳನ್ನೂ ಸರಿಯಾಗಿ ಆಡಿಟ್ ಮಾಡಿಲ್ಲ. ನಮ್ಮ ಸರ್ಕಾರ ಇದರ ಕಡೆಗೆ ಹೆಚ್ಚು ಗಮನಹರಿಸಿ ಆಡಿಟ್ ಇಲಾಖೆಯವರು ಬಿಗಿ ತನಿಖೆ ಮಾಡಿ ಹಾನಿಯಲ್ಲಿರುವ ಸೊಸೈಟಿಗಳನ್ನು ಸರಿಪಡಿಸುವಂತೆ ಮಾಡಬೇಕು. ಇಂಥಾ ಸೊಸೈಟಿಗಳನ್ನು ದುರಸ್ತ ಮಾಡಬೇಕೆಂದು ನಾವು ಸರ್ಕಾರದವರನ್ನು ಕೇಳಿದಾಗ, ಸರಿಪಡಿಸುತ್ತೇವೆ ಎಂದು ಆಶ್ವಾಸನೆ ಕೊಟ್ಟರು. ಆದರೆ ಇದುವರೆಗೆ ಇವನ್ನು ಸರಿಪಡಿಸಲು ತಕ್ಕ ಕ್ರಮ ಕೈಗೊಳ್ಳಲಿಲ್ಲ. ನಮ್ಮಲ್ಲಿ ಸುಮಾರು ಐದು ಲಕ್ಷ ಜನರು ನೇಕಾರರಾಗಿ ಕೆಲಸ ಮಾಡುತ್ತಿದ್ದರೂ ಇವರಿಗೆ ಸಾಕಷ್ಟು ನೆರವು ಸರಕಾರದಿಂದ ದೊರೆಯುತ್ತಿಲ್ಲ. ಇವರಿಗೆ ಸರ್ಕಾರ ಪರಿಹಾರ ಕೊಡದಿದ್ದರೆ ಇವರು ತಮ್ಮ ವೃತ್ತಿ ನಡೆಸುವುದು ಕಷ್ಟವಾಗುತ್ತದೆ. ನಮ್ಮ ಪಕ್ಕದ ತಮಿಳುನಾಡು ರಾಜ್ಯದಲ್ಲಿರುವ ನೇಕಾರರಿಗೆ, ಅಲ್ಲಿನ ಸರ್ಕಾರ ಸಾಕಷ್ಟು ಪರಿಹಾರಗಳನ್ನು ಕೊಟ್ಟು, ಸುಮಾರು ಮೂವತ್ತು ಲಕ್ಷ ಜನ ನೇಕಾರರು ಉಪಜೀವನ ಮಾಡಲು ಅನುಕೂಲ ಮಾಡಿಕೊಟ್ಟಿದೆ. ಇದಕ್ಕಾಗಿ ನಾನು, ನಮ್ಮ ರಾಜ್ಯಮಂತ್ರಿಗಳಾದ ಶ್ರೀ ವೀರಪ್ಪಾ ಮೊಯ್ಲಿಯವರು, ಕೈಗಾರಿಕಾ ಇಲಾಖೆಯ ಕೆಲವು ಅಧಿಕಾರಿಗಳು, ಒಂದು ಸ್ಟಡೀ ಟೀಮು ಮದ್ರಾಸಿಗೆ ಹೋಗಿ ಅಲ್ಲಿ ತಮಿಳುನಾಡು ಸರ್ಕಾರ

ಯಾವರೀತಿ ನೇಕಾರರುಗಳಿಗೆ ಸಹಾಯ ಮಾಡಿದ್ದಾರೆ ಎನ್ನುವುದನ್ನು ಖುದ್ದಾಗಿ ನೋಡಿ, ಅಲ್ಲಿನ ಅಧಿಕಾರಿಗಳೊಡನೆ ವಿಚಾರ ವಿನಿಮಯ ಮಾಡಿ ಬಂದಿದ್ದೇವೆ. ಇಲ್ಲೂ ಕೂಡ ಅಂಥಾ ಕಾರ್ಯಕ್ರಮ ತೆಗೆದುಕೊಳ್ಳುವದರ ಕಡೆಗೆ ಗಮನ ಕೊಡುವುದು ಅವಶ್ಯವಿದೆ. ನಮ್ಮ ಸರ್ಕಾರದಲ್ಲೂ ರಿಜಿಸ್ಟ್ರಾರ್, ಜಾಯಿಂಟ್ ರಿಜಿಸ್ಟ್ರಾರ್, ಅಸಿಸ್ಟೆಂಟ್ ರಿಜಿಸ್ಟ್ರಾರ್ ಇಂಥ ಅಧಿಕಾರಿಗಳಿದ್ದಾರೆ. ಆದರೆ ಇವರು ನೇಕಾರರನ್ನು ಯಾವ ರೀತಿ ಡೆವಲಪ್ ಮಾಡುತ್ತಿದ್ದಾರೆ ಎನ್ನುವುದು ಇದುವರೆಗೆ ಗೊತ್ತಾಗುತ್ತಿಲ್ಲ.

ಇವೊತ್ತು ತಮಿಳನಾಡು ರಾಜ್ಯದಲ್ಲಿ 7 ಸರ್ಕಲ್‌ಗಳನ್ನು ಮಾಡಿ ಪ್ರತಿಯೊಂದು ಸರ್ಕಲ್ಲಿಗೂ ಅಸಿಸ್ಟಂಟ ಡಾಯರೆಕ್ಟರ್ ಇದ್ದು ಅವರಿಗೆ ಅಸಿಸ್ಟೆಂಟ್ ರಿಜಿಸ್ಟ್ರಾರ್‌ರಿಗೆ ಇರುವ ಅಧಿಕಾರ ಕೊಟ್ಟಿದ್ದಾರೆ. ಅವರ ಕೈಕೆಳಗೆ ಕೊ ಆಫೀಸರ ಇರುವರು. ಅವರಿಗೆ ಸಹಾಯ ಮಾಡಲು ಕೋ–ಇನ್ಸ್ಪೆಕ್ಟರರು ಇರುವರು. ಅವರು ಸೊಸೈಟಿಗಳ ಇನ್ಸ್ಪೆಕ್ಷನ್ ಮಾಡಿ ಅವುಗಳ ಮೇಲೆ ಸಾಕಷ್ಟು ಹತೋಟಿ ಇಟ್ಟುಕೊಂಡಿದ್ದಾರೆ. ಇದರಿಂದಾಗಿ ಅವು ಸರಿಯಾಗಿ ಕೆಲಸ ಮಾಡುವುದಕ್ಕೆ ಅವಕಾಶವಾಗಿದೆ. ಪ್ರೈಮರಿ ಸೊಸೈಟಿಗಳು ಕೋಟಿಗಟ್ಟಲೆ ಹಣವನ್ನು ಕೊಟ್ಟು ನೇಕಾರರಿಗೆ ಮನೆಗಳನ್ನು ಕಟ್ಟಿಕೊಟ್ಟಿವೆ. ನಮ್ಮ ರಾಜ್ಯದಲ್ಲಿ 500 ಸೊಸೈಟಿಗಳಿದ್ದು ಅವುಗಳೆಲ್ಲಾ ಹಾಳಾಗಿ ಹೋಗಿವೆ. ನಮ್ಮ ಸರ್ಕಾರದವರು ಸ್ಟ್ಯಾಚ್ಯೂಟರಿ ಕಮಿಟಿಯನ್ನು ಮಾಡುತ್ತೇವೆ, ಸ್ಟ್ಯಾಚ್ಯೂಟರಿ ಬೋರ್ಡ್ ಮಾಡುತ್ತೇವೆ ಎಂದು ಹೇಳುತ್ತಾರೆ. ಯಾವುದೂ ಮಾಡಿಲ್ಲ. ಕೇಂದ್ರ ಸರ್ಕಾರದವರು ಶಿವರಾಮನ್ ಸಮಿತಿಯವರಿಂದ ನೇಕಾರರ ಸ್ಥಿತಿ ಉತ್ತಮಪಡಿಸುವ ಬಗ್ಗೆ ವರದಿ ತರಿಸಿಕೊಂಡಿದ್ದಾರೆ. ನಮ್ಮ ಕೈಗಾರಿಕಾ ಮಂತ್ರಿಗಳು ದಿಲ್ಲಿಗೆ ಹೋಗಿ ಪ್ರಧಾನ ಮಂತ್ರಿಗಳನ್ನು ಭೇಟಿಮಾಡಿ ಶಿವರಾಮನ್ ಸಮಿತಿ ಶಿಫಾರಸಿನಂತೆ ನೇಕಾರರಿಗೆ ಸೌಲಭ್ಯಗಳನ್ನು ಒದಗಿಸುವುದಕ್ಕೆ ಬೇಕಾದ ಸಹಾಯವನ್ನು ಕೇಂದ್ರದಿಂದ ಪಡೆದುಕೊಂಡು ಬರುವುದಕ್ಕೆ ಪ್ರಯತ್ನ ಮಾಡಿದ್ದಾರೆ. ಆ ಶಿಫಾರಸಿನಂತೆ ನೇಕಾರರಿಗೆ ಮಗ್ಗಗಳನ್ನು ಒದಗಿಸಿಕೊಡಬೇಕಾಗಿದೆ ಮತ್ತು ಯಾವ ಯಾವ ರಾಜ್ಯದಲ್ಲಿ 5 ಸಾವಿರಕ್ಕಿಂತ ಹೆಚ್ಚು ಮಗ್ಗಗಳು ಇವೆ ಅಂಥವರ ಬಗ್ಗೆ ಒಂದು ಯೋಜನೆ ಮಾಡಿ ನೇಕಾರರಿಗೆ ಸೌಲಭ್ಯವನ್ನು ಒದಗಿಸಿಕೊಡಬೇಕಿದೆ.

ಇದಕ್ಕೆ ಕೇಂದ್ರ ಸರ್ಕಾರದವರೂ ಒಪ್ಪಿಗೆ ಕೊಡುವ ಸಂಬಂಧ ಪರಿಶೀಲನೆಗೆ ಸಬ್ ಕಮಿಟಿ ನೇಮಿಸಿದ್ದಾರೆ. ಹಿಂದೂಸ್ತಾನದಲ್ಲಿರುವ ಒಂದು ಕೋಟಿ ನೇಕಾರರಿಗೆ ಸಹಾಯಕ್ಕಾಗಿ ಒಂದು ಯೋಜನೆ ಮಾಡಲು ಕೇಂದ್ರದಲ್ಲಿ ವಿಚಾರ ನಡೆದಿದೆ. ನಮ್ಮ ನೇಕಾರರ ಸೊಸೈಟಿಗಳಿಗೆ 6 ಲಕ್ಷ ರೂಪಾಯಿಗಳ ರಿಬೇಟ್ ಕೊಡಬೇಕಾಗಿದೆ. ಆ ರಿಬೇಟ್ ನೇಕಾರರಿಗೆ ಮುಟ್ಟಿಲ್ಲ. ದಯಮಾಡಿ ನಮ್ಮ ಮಾನ್ಯ ಮಂತ್ರಿಗಳು ಕೇಂದ್ರ ಸರ್ಕಾರ ನೇಕಾರರಿಗೆ ಕೊಡುವ ಎಲ್ಲಾ ಸಹಾಯವನ್ನು ಪಡೆದುಕೊಂಡು ಬಂದು ನಮ್ಮ ನೇಕಾರರಿಗೆ ಸಹಾಯ ಮಾಡಬೇಕು ಎಂದು ನಾನು ವಿನಂತಿಮಾಡಿಕೊಳ್ಳುತ್ತೇನೆ.

ಮೊನ್ನೆ ಕೈಮಗ್ಗದಿಂದ ತಯಾರಾದ ರೇಷ್ಮೆ ಸೀರೆಗಳಿಗೆ ಸರ್ಕಾರದವರು 8 ಪರ್ಸೆಂಟ್ ಸೇಲ್ಸ್ ಟ್ಯಾಕ್ಸ್ ಹಾಕಿದ್ದರು. ಆ ಮೇಲೆ ಕೈಮಗ್ಗದ ರೇಷ್ಮೆ ಸೀರೆಗಳಿಗೆ ಸೇಲ್ಸ್ ಟ್ಯಾಕ್ಸ್ ಹಾಕಬಾರದೆಂದು, ಸಹಾಯಕ ಕೈಗಾರಿಕಾ ಮಂತ್ರಿಗಳು ಹೇಳಿದ ಮೇಲೆ ಮಾನ್ಯ ಆರ್ಥಿಕ ಮಂತ್ರಿಗಳು ಒಪ್ಪಿಕೊಂಡರು. ಅದಕ್ಕಾಗಿ ಮಾನ್ಯ ಅರ್ಥಮಂತ್ರಿಗಳಿಗೆ ನನ್ನ ಕೃತಜ್ಞತೆಯನ್ನು ಅರ್ಪಿಸುತ್ತೇನೆ. ಕೈಮಗ್ಗ ನೇಕಾರರ ಸಲುವಾಗಿ ಸೆಪರೇಟ್ ಡೈರೆಕ್ಟೋರೇಟ್, ಕಾರ್ಪೋರೇಷನ್, ಸ್ಟ್ಯಾಚ್ಯೂಟರಿ ಬೋರ್ಡ ಮಾಡುತ್ತೇವೆ ಎಂದು ಸುಮ್ಮನೆ ಆಶ್ವಾಸನೆ ಕೊಡುತ್ತಾ ಬಂದಿದ್ದಾರೆ. ವಿನಹಾ ಅವು ಕಾರ್ಯಗತವಾಗದೆ ಹಾಗೆಯೇ ಉಳಿದಿವೆ. ಸ್ವತಂತ್ರ ಡೈರೆಕ್ಟೋರೇಟ್ ನೇಮಿಸಿ ನೇಕಾರರಿಗೆ ಅನುಕೂಲ ಮಾಡಿಕೊಡುತ್ತೇವೆ ಎಂದು ಕೈಗಾರಿಕಾ ಮಂತ್ರಿಗಳು ಹೇಳಿದ್ದರು. ಕಳೆದ ವರ್ಷದ ಬಜೆಟ್ಟಿನಲ್ಲಿ 5 ಲಕ್ಷ ರೂಪಾಯಿ Separate Directorate ಬಗ್ಗೆ ತೋರಿಸಿದರು. ಈ ಸಲ 5 ಲಕ್ಷ ರೂಪಾಯಿಗಳೂ ಇಲ್ಲ. 5 ರೂಪಾಯಿಗಳೂ ಇಲ್ಲ. ಇದಕ್ಕೆ ಜೀರೋ ಸಂಖ್ಯೆ ಹಾಕಿದ್ದಾರೆ. ನೇಕಾರರನ್ನು ಉಳಿಸಿ ಬದುಕಿಸಲು ಸರ್ಕಾರಿ ಅಧಿಕಾರಿಗಳು ಮತ್ತು ಎಲ್ಲರೂ ಕೈಮಗ್ಗದ ಬಟ್ಟೆಯನ್ನೆ ಧರಿಸುವಂತೆ ಎಲ್ಲ ಮಂತ್ರಿಗಳು ಪ್ರಚಾರ ಮಾಡಬೇಕು. ನೇಕಾರ ಉದ್ಧಾರವಾದರೆ ರಾಜ್ಯ ಉದ್ಧಾರವಾಗುತ್ತದೆ. ಇಷ್ಟು ಹೇಳಿ ಮಾನ್ಯ ಅಧ್ಯಕ್ಷರು ನನಗೆ ಮಾತನಾಡುವುದಕ್ಕೆ ಅವಕಾಶವನ್ನು ಕೊಟ್ಟಿದ್ದಕ್ಕಾಗಿ ಅವರಿಗೆ ವಂದಿಸಿ ನಾನು ನನ್ನ ಮಾತನ್ನು ಮುಗಿಸುತ್ತೇನೆ.

**31ನೇ ಮಾರ್ಚ್ 1975**

**Sri P. M. Bangi (Jamkhandi)-** Will the Minister for Agriculture and Animal husbandry be pleased to state:-

a) the number of Varalaxmi Cotton seed plots (10 guntas) that were given to the ryots in the State during the year 1974-75 (District-wise and Taluka-wise figures be given);

b) the number of plots that failed to produce Varalaxmi Seeds;

c) Whether the Government has sanctioned the plots only to the land owners or tenants who personally cultivate Bagayat lands; if not, the basis on which the plots were sanctioned;

d) the quantity of Varalaxmi Seed expected from each plot;

e) whether the Government intend to procure the certified seeds from all the concerned ryots;

f) if so, when and at what price;

g) if not, how the Government intend to help the ryots in selling the seeds;

h) the amount invested for each plot on an average by the concerned cultivator for the production of Varalaxmi Cotton Seeds during 1974-75?

Sri N. Chikke Gowda (Minister for Agriculture and animal Husbandry)

a) 4,041 Varalaxmi Seed Production plots of 10 guntas each have been allotted in the State during the year 1974-75. A Statement showing district-wise and taluka-wise figures is placed on the Table of the House**

b) The number of plots that have failed to produce Varalaxmi Seeds will be known after completion of the Seed Certification work.

c) The following points were considered by the Government, while alloting the Varalaxmi Seed Production Plots to the ryots during the year 1974-75:-

(1) The farmers who had taken production of HY 4 Cotton during 1973-74.

(2) The farmers who had taken Varalaxmi Seed Production Plots during 1973-74 and had surrendered more than one quintal seed to the Department of Agriculture;

(3) The farmers who had taken Varalaxmi Cotton Seed Production during 1973-74 but did not surrender seeds (i.e. 1 quintal) to the Department have been black-listed and allotment of seed production plots for 1974-75 has been denied to them;

(4) Experience of Hybridization of Cotton in the case of new applicants.

d) The average yield per plot is estimated at about 1 to 1.25 quintal.

e) The matte is under the consideration of Government.

f) The matter is under the consideration of Government.

g) The matter is under the consideration of Government.

h) Amount invested for each plot ranges from Rs. 8,000 to Rs. 10,000.

## ಟಿಪ್ಪಣಿ ರೂಪದ ಬಿಡಿ ಪ್ರಶ್ನೆಗಳು

### 31ನೇ ಮಾರ್ಚ್ 1975

**Sri P. M. Bangi (Jamkhandi)-** Will the Minister for Agriculture and Animal Husbandry be pleased to state:-

i) the Agency appointed for the certification of the Varalaxmi Cotton Seeds grown and processed by the cultivators;

j) whether the Government intend to give special allowance to the supervising staff for the supervision made and guidance given to the cultivators;

k) if not, the reasons why supervision charges are demanded from cultivators when the supervision of plots is carried on by Cotton Assistants and other Government Servants to whom extra allowances will not be given for the supervision of plots?

**Sri N. Chikke Gowda (Minister for Agriculture and Animal Husbandry)**

a) Department of Agriculture.

b) No.

c ) No charges are levied for supervision.

# ಟಿಪ್ಪಣಿ ರೂಪದ ಬಿಡಿ ಪ್ರಶ್ನೆಗಳು

## 31ನೇ ಮಾರ್ಚ್ 1975

**Sri P.M. Bangi (Jamkhandi)-** Will the Minister for Agriculture and Animal Husbandry be pleased to state:-

a) the rate at which per K.G. Varalaxmi Foundation Seeds (male and female) wee supplied to the growers at the beginning of the year 1974-75 up to 15th of August 1974;

b) the rate at which the said seeds were procured by the Government?

Sri N. Chikke Gowda (Minister for Agriculture and Animal Husbandry)

a) Rs. 100 has been collected for each seed kit, which is sufficient to sow in 10 guntha plot.

b) Purchased at the rate of Rs. 30 per Kg. from the Cotton Specialist, Dharwar.

ಶ್ರೀ ಪಿ. ಎಂ. ಬಾಂಗಿ– ನನ್ನ (ಸಿ) ಪ್ರಶ್ನೆಗೆ ಕೆಲವು ವಿವರಗಳನ್ನು ಕೊಟ್ಟಿದ್ದೀರಿ. ಆದರೆ ನಾನು ಕೇಳಿದ್ದು, ಯಾರಿಗೆ ಭೂಮಿ ಇಲ್ಲ, ನೀರು ಇಲ್ಲ, ಇಂಥವರಿಗೆ ಯಾವ ಆಧಾರದ ಮೇಲೆ ಇವನ್ನು ಕೊಟ್ಟಿದ್ದೀರಿ?

ಶ್ರೀ ಎನ್. ಚಿಕ್ಕೇಗೌಡ– ಅಲ್ಲಿ ಯಾರಿಗೆ ಭೂಮಿ, ನೀರಿನ ಅನುಕೂಲತೆ ಇದೆ, ಅಂಥವರನ್ನು ನೋಡಿ ಸಂಬಂಧಪಟ್ಟ ಜಿಲ್ಲಾ ವ್ಯವಸಾಯ ಅಧಿಕಾರಿಗಳು ಕಳಿಸಿದಂಥ ಮಾಹಿತಿಯ ಮೇಲೆ ಬೀಜಗಳನ್ನು ಕೊಟ್ಟಿದ್ದೇವೆ.

ಶ್ರೀ ಪಿ. ಎಂ. ಬಾಂಗಿ – ಈಗ ತಮ್ಮ ಗಮನಕ್ಕೆ ತಂದುಕೊಡುವುದೇನೆಂದರೆ, ಯಾರಿಗೆ ಭೂಮಿ ಇಲ್ಲ, ಜಮೀನು ಇಲ್ಲ, ಇರಿಗೇಶನ್ ಅನುಕೂಲ ಇಲ್ಲ ಅಂಥವರು ತಮ್ಮ ಇಲಾಖೆ ಕಡೆಯಿಂದ ಸೀಡ್ ತೆಗೆದುಕೊಂಡು ಅದನ್ನು ದುರ್ವ್ಯವಹಾರ ಮಾಡಿದ್ದಾರೆ, ಇದು ತಮ್ಮ ಗಮನಕ್ಕೆ ಬಂದಿದೆಯೇ ಹೇಗೆ?

ಶ್ರೀ ಎನ್. ಚಿಕ್ಕೇಗೌಡ– ಅದು ನನ್ನ ಗಮನಕ್ಕೆ ಬಂದಿಲ್ಲ. ಸದಸ್ಯರಾದವರು ಆ ಬಗ್ಗೆ ಮಾಹಿತಿ ಒದಗಿಸಿದರೆ ನಾನು ವಿಚಾರಣೆ ಮಾಡುತ್ತೇನೆ.

ಶ್ರೀ ಪಿ. ಎಂ. ಬಾಂಗಿ– ನನ್ನ ಪ್ರಶ್ನೆಗಳಿಗೆ ಸರ್ಕಾರ ವಿಚಾರ ಮಾಡುತ್ತದೆ ಎಂದು ಹೇಳಿದೆ. ನನ್ನ ಕಾಲ್ ಅಟೆನ್ಶನ್ ಮೋಷನ್ನಿಗೆ ಸರ್ಕಾರದವರು ತನಿಖೆ ನಡೆಸಿ ಕೂಡಲೆ ರೇಟ್ ಜಾಹಿರು ಮಾಡುತ್ತಾರೆಂದು ಹೇಳಿದ್ದರೂ ಇದುವರೆಗೆ ಯಾವ ವಿಚಾರವೂ ಆಗಿಲ್ಲ. ಈ ವಿಷಯದಲ್ಲಿ ಸರ್ಕಾರದ ನಿಲುಮೆಯನ್ನು ಯಾವಾಗ ಸ್ಪಷ್ಟಪಡಿಸುತ್ತೀರಿ?

ಶ್ರೀ ಎನ್. ಚಿಕ್ಕೇಗೌಡ– ಈ ವಿಚಾರದಲ್ಲಿ ಪ್ರಶ್ನೋತ್ತರ ಮುಗಿದ ನಂತರ ಸವಿಸ್ತಾರವಾಗಿ ಸರ್ಕಾರದ ನೀತಿಯ ಬಗ್ಗೆ ಒಂದು ಸ್ಟೇಟ್‌ಮೆಂಟ್ ಮಾಡುವವನಿದ್ದೇನೆ.

ಶ್ರೀ ಪಿ. ಎಂ. ಬಾಂಗಿ– ತಾವು ಹೊಸ ಅರ್ಜಿದಾರರಿಗೆ ಮಿಶ್ರ ತಳಿ ಹತ್ತಿಯ ಬಗ್ಗೆ ಹೊಂದಿರುವ ಅನುಭವ ನೋಡಿಕೊಂಡು ಸೀಡ್ ಕೊಟ್ಟಿದ್ದೀರಿ ಎಂದು ಹೇಳಿದ್ದೀರಿ. ಹೊಸ ಅಪ್ಲಿಕಂಟ್ಸ್ ಎಷ್ಟೋ ಜನಕ್ಕೆ ಭೂಮಿ ಇಲ್ಲದ್ದರಿಂದ ಅನುಭವ ಬರುವ ಸಂಭವವಿಲ್ಲ. ಆದರೂ ಕೂಡ ತಾವು ಕೊಟ್ಟಿದ್ದೀರಿ. ಅಂಥವರಿಗೆ ಕೊಟ್ಟ ಬಗ್ಗೆ ತಾವು ಏನು ಹೇಳುತ್ತೀರಿ?

ಶ್ರೀ ಎನ್. ಚಿಕ್ಕೇಗೌಡ- ಹೊಸಬರಿಗೆ ಅವಕಾಶ ಕೊಡಬೇಕೆಂದು ಕೊಟ್ಟಿದ್ದೇವೆ. ಎಲ್ಲಾ ಕ್ಷೇತ್ರದಲ್ಲೂ ಹೊಸಬರಿಗೆ ಉತ್ತೇಜನ ಮಾಡಬೇಕು. ಹೊಸ ರಕ್ತ ಬರಬೇಕು ಎನ್ನುವುದು ನಮ್ಮ ಸಮಾಜವಾದದ ನೀತಿ ಆಗಿದೆ. ಅದಕ್ಕೆ ಅನುಗುಣವಾಗಿ ಹೊಸಬರಿಗೆ ಅವಕಾಶ ಕೊಟ್ಟಿದ್ದೇನೆ.

## ಟಿಪ್ಪಣಿ ರೂಪದ ಬಿಡಿ ಪ್ರಶ್ನೆಗಳು

### 9ನೇ ಏಪ್ರಿಲ್ 1975

**Sri P.M. Bangi (Jamkhandi)-** Will the Minister for Revenue be pleased to state:-

a) whether the Government is aware that Revenue Stamps and Stamp papers are in short supply during the last six months;

b) whether the Government is aware that stamps and Stamp Papers are alleged to have been sold at exorbitant rates by the licensed Stamp Vendors in the State;

c) whether any order is issued by the Government to pay amount in cash of the value of stamps and stamp papers and execute documents on plain paper, whenever there is short supply of Revenue Stamps and Stamp Papers;

d) the reasons for short supply of Revenue stamps, Stamp Paper and Court Fee Stamps;

e) the steps taken to supply sufficient number of Revenue Stamps and Stamp Papers and Court Fee Stamp?

Sri N. Hutchamasthy Gowda (Minister for Revenue)

a) Yes.

b) No.

c) yes, regarding Stamp Paper.

d) Due to non-supply of required quantity from the Controller. Central Stores, Nasik, as per indent sent by several District Treasuries and Superintendent of Stamps, Bangalore.

e) The Controller of Central Stamp Stores, Nasik, is being reminded frequently for supply of the same. Sub-Registrars are empowered to act as Deputy Commissioners under the Karnataka Stamp Act to certify that the document is duly stamped and proceed to register the same, after challan is produced by the parties for having remitted the required amount towards the stamp papers either to the Treasury or to the Bank. Further, documents can be got embossed.

ಶ್ರೀ ಪಿ. ಎಂ. ಬಾಂಗಿ– (ಬಿ)ಗೆ ಉತ್ತರವಾಗಿ 'ಇಲ್ಲ' ಎಂದು ತಿಳಿಸಲಾಗಿದೆ. ತಮಗೆ ಮೂರು ತಿಂಗಳ ಕೆಳಗೆ ಚೇಂಬರ್ ಆಫ್ ಕಾಮರ್ಸ್ ಮೂಲಕ ಒಂದು ಮನವಿ ಕೊಟ್ಟು ರಾಜ್ಯದಲ್ಲಿ ಸ್ಟ್ಯಾಂಪ್ ಮತ್ತು ಸ್ಟ್ಯಾಂಪ್ ಕಾಗದಗಳ

ಅಭಾವವಿದೆ, ಇದನ್ನು ಬೇಗನೆ ಸುಧಾರಣೆ ಮಾಡಬೇಕೆಂದು ಕೇಳಿರಲಿಲ್ಲವೇ? ಇದರ ಬಗ್ಗೆ ಪೇಪರುಗಳಲ್ಲಿ ಕೂಡ ಅಭಾವವಿದೆ ಎಂದು ಬಂದಿರುವುದು ತಮ್ಮ ಗಮನಕ್ಕೆ ಬರಲಿಲ್ಲವೇ?

**ಶ್ರೀ ಎನ್. ಹುಚ್ಚಮಾಸ್ತಿಗೌಡ–** ಹೆಚ್ಚು ಬೆಲೆಯಲ್ಲಿ ಸ್ಟ್ಯಾಂಪ್ ಕಾಗದಗಳನ್ನು ಮಾರುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿಲ್ಲ. ಹಾಗೆ ಏನಾದರೂ ಬಂದರೆ ಅಂತಹವರ ಮೇಲೆ ಸೂಕ್ತ ತೆಗೆದುಕೊಳ್ಳಬೇಕೆಂದು ಅಧಿಕಾರಿಗಳಿಗೆ ಆದೇಶವನ್ನು ಕೊಡಲಾಗಿದೆ. ನನ್ನ ಗಮನಕ್ಕೆ ಅಂತಹವುಗಳು ಯಾವುವು ಬಂದಿಲ್ಲ.

**ಶ್ರೀ ಪಿ. ಎಂ. ಬಾಂಗಿ–** (ಸಿ) ಪ್ರಶ್ನೆಗೆ ಕೋರ್ಟು ಕಾಗದಗಳ ಸಪ್ಲೈ ಮಾಡುವ ಬಗ್ಗೆ ವ್ಯವಸ್ಥೆ ಮಾಡಿದ್ದೇವೆಂದು ಹೇಳಿದ್ದೀರಿ. ಏನು ವ್ಯವಸ್ಥೆ ಇದುವರೆಗೆ ಮಾಡಲಾಗಿದೆ?

**ಶ್ರೀ ಎನ್. ಹುಚ್ಚಮಾಸ್ತಿಗೌಡ–** ಕೋರ್ಟು ಫೀ ಸ್ಟ್ಯಾಂಪ್‌ಗಳು ಒಂದೇ ಅಲ್ಲ, ಸ್ಟ್ಯಾಂಪ್ ಕಾಗದಗಳನ್ನು ಜರೂರಾಗಿ ಕಳುಹಿಸಿಕೊಡಬೇಕೆಂದು ನಮ್ಮ ರಾಜ್ಯ ಸರ್ಕಾರದವರಿಂದ ಕಂಟ್ರೋಲರ್ ಸೆಂಟ್ರಲ್ ಸ್ಟೋರ್ಸ್ ನಾಸಿಕ್ ಅವರಿಗೆ ಕಳೆದ ಸಾಲಿನ ಫೆಬ್ರವರಿ ತಾರೀಖು 15 ರಿಂದ 28 ಸಾರಿ ಟೆಲಿಗ್ರಾಂಗಳ ಮೂಲಕ ಟೆಲಿಫೋನುಗಳ ಮೂಲಕ ಹಾಗೂ ಕಾಗದಗಳ ಮೂಲಕ ಸಪ್ಲೈ ಕಳುಸಹಿಸಬೇಕೆಂದು ಒತ್ತಾಯ ಮಾಡಿದ್ದರೂ ಇದುವರೆಗೆ ಅವರು ಕಳುಹಿಸಲಿಲ್ಲ. ಮತ್ತು ನಮ್ಮ ಅವಶ್ಯಕತೆಗಳನ್ನು ಪೂರ್ಣವಾಗಿ ಪೂರೈಸಲು ಸಾಧ್ಯವಾಗಿಲ್ಲ. ಇದಕ್ಕೋಸ್ಕರ ನಮ್ಮ ಸರ್ಕಾರ ಬೇರೆ ವ್ಯವಸ್ಥೆ ಮಾಡಿದೆ. ಇತ್ತೀಚೆಗೆ ಬರೀ ಕಾಗದದ ಮೇಲೆ ಎಂಬಾಸ್ ಮಾಡಿಕೊಡಬಹುದೆಂದು ಇದನ್ನು ಆಯಾ ಜಿಲ್ಲಾ ಕೇಂದ್ರಗಳಲ್ಲಿ ಮಾಡಬೇಕೆಂದು ಸೂಚನೆ ಕೊಡಲಾಗಿದೆ. ಹೀಗೆ ಬಿಳಿ ಕಾಗದದ ಮೇಲೆ ಎಂಬಾಸ್ ಮಾಡಿಕೊಡುವುದರಿಂದ ಸ್ವಲ್ಪಮಟ್ಟಿಗೆ ಇದರಲ್ಲಿರುವ ಕೊರತೆ ನಿವಾರಣೆಯಾಗಬಹುದು.

ಶ್ರೀ ಪಿ. ಎಂ. ಬಾಂಗಿ– ಸೆಂಟ್ರಲ್ ಗವರ್ನಮೆಂಟಿಗೆ ಸರಿಯಾಗಿ ಕಾಗದ ಸರಬರಾಜು ಆಗುತ್ತಿಲ್ಲ ಎಂದು ಸ್ಟ್ಯಾಂಪ್ ಪೇಪರುಗಳಿಗೆ ಕೊರತೆಯಾಗಿದೆಯೇ ಇಲ್ಲ ಇದಕ್ಕೆ ಬೇರೆ ಕಾರಣಗಳೇನಾದರೂ ಇವೆಯೋ?

ಶ್ರೀ ಎನ್. ಹುಚ್ಚಮಾಸ್ತಿಗೌಡ– ಕಾರಣಗಳು ಏನಿದೆ ಎನ್ನುವುದು ನಮಗೆ ಗೊತ್ತಾಗಿಲ್ಲ.

## ಬಾಡಿಗೆ ನಿಯಂತ್ರಣ ಮೇಲಿನ ಚರ್ಚೆ

### 10ನೇ ಜುಲೈ 1975

ಶ್ರೀ ಪಿ. ಎಂ. ಬಾಂಗಿ (ಜಮಖಂಡಿ)– ಮಾನ್ಯ ಉಪ ಸಭಾಪತಿಗಳೇ, ಈ ತಿದ್ದುಪಡಿ ಮಸೂದೆಯನ್ನು ನಾನು ಸ್ವಾಗತಿಸುತ್ತಾ ಕೆಲವು ಸಲಹೆಗಳನ್ನು ಕೊಡಬಯಸುತ್ತೇನೆ. ರೆಂಟ್ ಕಂಟ್ರೋಲ್ ಆ್ಯಕ್ಟ್ ಟೌನ್ ಮುನಿಸಿಪಾಲಿಟಿಯಲ್ಲಿ ಬರುವಂಥಾ ಕಟ್ಟಡಗಳಿಗೆ ಅನ್ವಯಿಸುವುದಿಲ್ಲ. ಆದ್ದರಿಂದ ರಾಜ್ಯದಲ್ಲಿರುವ ಎಲ್ಲಾ ಮುನಿಸಿಪಲ್ ಏರಿಯಾದಲ್ಲಿನ ಕಟ್ಟಡಗಳಿಗೆ ಇದು ಅನ್ವಯಿಸುವಂತಾಗಬೇಕೆಂದು ಹೇಳಬಯಸುತ್ತೇನೆ.

ಇನ್ನು ಎರ್ಡನೆಯದಾಗಿ ಈ ವಿಧಾನವನ್ನು ತಪ್ಪಿಸುವುದಕ್ಕೋಸ್ಕರ ಕಾಯ್ದೆ ತಿದ್ದುಪಡಿ ಮಾಡಿ ಡಿಸ್ಟ್ರಿಕ್ಟ್ ಕೋರ್ಟ್ ಮತ್ತು ಹೈಕೋರ್ಟ್‌ಗಿರುವ ಅಪೀಲ್ ಅಧಿಕಾರವನ್ನು ತೆಗೆದುಹಾಕಬೇಕೆಂದು ಮಾಡಿದ್ದೀರಿ. ಆದರೂ ಈ ವಿಧಾನವನ್ನು ತಪ್ಪಿಸುವುದಕ್ಕೆ ಆಗುವುದಿಲ್ಲ. ಇದನ್ನು ತಪ್ಪಿಸಬೇಕಾದರೆ ಯಾವ ಸ್ಥಳಗಳಲ್ಲಿ ಅರಿಯರ್ಸ್ ಇರುತ್ತದೆ ಅಂಥಾ ಸ್ಥಳಗಳಲ್ಲಿ ಆಯಾ ಸಿವಿಲ್ ಜಡ್ಜಸ್‌ಗೆ ಕೇವಲ ರೆಂಟ್ ಕೇಸಸ್ ಡೀಲ್ ಮಾಡುವ ಅಧಿಕಾರವನ್ನು ಕೊಡಬೇಕು. ಆಗ ತಾವು ತಂದಂಥ ಈ ತಿದ್ದುಪಡಿ ಸಾರ್ಥಕವಾಗುತ್ತದೆ. ಈ ತಿದ್ದುಪಡಿಯಲ್ಲಿ ಸೆಕ್ಷನ್ 22ರಲ್ಲಿ ಹೇಳಿದ ನೋಟಿಫಿಕೇಷನ್‌ಅನ್ನು ಕೂಡಲೇ ತೆಗೆದು ಯಾವ ಯಾವ ಸಿವಿಲ್ ಜಡ್ಜಗಳಿಗೆ ಮತ್ತು ಮುನ್ಸೀಫರುಗಳಿಗೆ ಜೂರಿಸ್‌ಡಿಕ್ಷನ್ ಇದೆ

ಎನ್ನುವುದನ್ನು ಸ್ಪಷ್ಟಮಾಡಬೇಕು. ಅದೇ ಪ್ರಕಾರ ಸೆಕ್ಷನ್ 4, ಸಬ್ ಸೆಕ್ಷನ್ 5 (6) ತಿದ್ದುಪಡಿಯಲ್ಲಿ ಅಪೆಲೇಟ್ ಅಥಾರಿಟಿ ಅಧಿಕಾರವನ್ನು ಕಿತ್ತುಕೊಂಡರೂ ಅಪೆಲೇಟ್ ಅಥಾರಿಟಿ ಎಂಬ ಶಬ್ದವನ್ನು ಏತಕ್ಕೆ ಬಳಸಿದ್ದೀರಿ? ರಿವಿಷನಲ್ ಅಥಾರಿಟಿ ಎಂಬ ಶಬ್ದ ಹಾಕಿದ್ದರೆ ಒಳ್ಳೆಯದು. ನಾನು ಹೇಳುವುದೇನೆಂದರೆ ಈ ಕಾಯ್ದೆ 1961ರಲ್ಲಿ ಜಾರಿಗೆ ಬಂತು. ಇದರಲ್ಲಿ ಸಾಕಷ್ಟು ಬದಲಾವಣೆಗಳು ಆಗತಕ್ಕದ್ದು ಇದೆ. ಪಗಡಿ ಸಿಸ್ಟಂ, ಅಡ್ವಾನ್ಸ್ ಡಿಪಾಸಿಟ್ ಇವೆಲ್ಲಾ ಹೋಗಬೇಕು. ಬಹಳಷ್ಟು ಬದಲಾವಣೆಗಳನ್ನು ಅಳವಡಿಸಿ ಮುಂದಿನ ಅಧಿವೇಶನದಲ್ಲಿ ಹೊಸದಾಗಿ ಒಂದು ಬಿಲ್ಲನ್ನು ತರಬೇಕೆಂದು ಹೇಳಿ, ಇಷ್ಟು ಮಾತುಗಳನ್ನಾಡಲು ಅವಕಾಶ ಕೊಟ್ಟ ಮಾನ್ಯ ಅಧ್ಯಕ್ಷರಿಗೆ ವಂದಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

# ಆಯವ್ಯಯದ ಮೇಲಿನ ಚರ್ಚೆ

## 3ನೇ ಮಾರ್ಚ್ 1976

ಶ್ರೀ ಪಿ. ಎಂ. ಬಾಂಗಿ (ಜಮಖಂಡಿ)– ಮಾನ್ಯ ಸಭಾಪತಿಗಳೆ, ನಮ್ಮ ಅರ್ಥಮಂತ್ರಿಗಳು ಮಂಡಿಸಿದ ಆಯವ್ಯಯವನ್ನು ನಾನು ಸಂಪೂರ್ಣ ಸ್ವಾಗತಿಸುತ್ತಾ, ಈ ವಿಷಯದಲ್ಲಿ ಕೆಲವು ಸೂಚನೆಗಳನ್ನು ಮಾಡಬಯಸುತ್ತೇನೆ. ಪ್ರಧಾನಮಂತ್ರಿಯವರ 20 ಅಂಶದ ಕಾರ್ಯಕ್ರಮ ಜಾರಿ ಆದ ನಂತರ ಆ ಕಾರ್ಯಕ್ರಮವನ್ನು ಕೃತಿಯಲ್ಲಿ ತರುವುದಕ್ಕೋಸ್ಕರ ಈ ಬಜೆಟ್ಟಿನಲ್ಲಿ ನಮ್ಮ ಅರ್ಥಮಂತ್ರಿಗಳು ದುರ್ಬಲವರ್ಗದವರಿಗೆ ಸಾಕಷ್ಟು ಗಮನಕೊಟ್ಟಿದ್ದಾರೆ. ಇದು ತುಂಬಾ ಸಂತೋಷ.

### ನೇಕಾರಿಕೆಯನ್ನು ಒಂದು ಉದ್ಯಮವನ್ನಾಗಿ ಮಾಡಬೇಕು:

ಇಪ್ಪತ್ತಂಶದ ಕಾರ್ಯಕ್ರಮದಲ್ಲಿ ಮೊದಲು ಕೃಷಿ ವಿಷಯ. ಎರಡನೆಯದಾಗಿ ಕೈಮಗ್ಗ ವಿಷಯದತ್ತ ಪ್ರದಾನಮಂತ್ರಿಗಳು ಸಾಕಷ್ಟು ಗಮನಕೊಟ್ಟು 25 ಕೈಮಗ್ಗ ಯೋಜನೆಗಳನ್ನು ಘೋಷಿಸಿದ್ದಾರೆ. ಅವುಗಳಲ್ಲಿ ಒಂದು ಯೋಜನೆ ಕರ್ನಾಟಕದಲ್ಲಿ ಅಂದರೆ ರಬಕವಿ ಬನಹಟ್ಟಿಯಲ್ಲಿ ಮೊಟ್ಟಮೊದಲು ಪ್ರಾರಂಭವಾಗಿದೆ. ಪ್ರತಿಯೊಂದು ಯೋಜನೆಗೆ ಒಂದು ಕೋಟಿ 85 ಲಕ್ಷ ರೂಪಾಯಿ ವೆಚ್ಚ ಮಾಡಬೇಕೆಂದು ಕೇಂದ್ರ ಸರ್ಕಾರದವರು ನಿರ್ಣಯ ಮಾಡಿದ್ದಾರೆ. ಈ ಒಂದು ಕೋಟಿ 85 ಲಕ್ಷದಲ್ಲಿ ಕೇಂದ್ರ ಸರ್ಕಾರದವರು ಅರ್ಧ ಹಣ, ರಾಜ್ಯ ಸರ್ಕಾರದವರು ಅರ್ಧ ಹಣ ವೆಚ್ಚ ಮಾಡಬೇಕು ಎನ್ನುವುದು ಕೇಂದ್ರ ಸರ್ಕಾರದ ನೀತಿಯಾಗಿದೆ. ಆ ಪ್ರಕಾರ ಈ ಒಂದು ಯೋಜನೆಗೋಸ್ಕರ ನಮ್ಮ ರಾಜ್ಯ ಸರ್ಕಾರ 92 ಲಕ್ಷ ರೂಪಾಯಿಯನ್ನು ಕೊಡಬೇಕಾಗುತ್ತದೆ. ಆದ್ದರಿಂದ ನಮ್ಮ ಹಣಕಾಸಿನ ಮಂತ್ರಿಗಳು ಅದಕ್ಕೆ ಒಂದು ವ್ಯವಸ್ಥೆ ಮಾಡಬೇಕೆಂದು ನಾನು ಹೇಳಬಯಸುತ್ತೇನೆ. ಎಲ್ಲೆಲ್ಲಿ ನೇಕಾರರ ವಸತಿ ಹೆಚ್ಚಿದೆ ಮತ್ತು ಕೈಮಗ್ಗ ಎಲ್ಲೆಲ್ಲಿ ನಡೆಯುತ್ತಿದೆ ಆ ಸ್ಥಳಗಳಲ್ಲಿ ನೇಕಾರರಿಗೆ ಶಾಶ್ವತವಾಗಿ ಕಾರ್ಪೋರೇಷನ್ *ಪರವಾಗಿ ಸಹಾಯ* ಮಾಡಬೇಕಾಗುತ್ತದೆ.

ಕೈಮಗ್ಗ ಅಭಿವೃದ್ಧಿ ಕಾರ್ಪೋರೇಷನ್‌ಗೆ ಒಂದು ಕೋಟಿ ರೂಪಾಯಿ ಯೋಜನೆ ಇದ್ದರು ಕೂಡ ಕೇವಲ 10 ಲಕ್ಷ ರೂಪಾಯಿಗಳನ್ನು ಚಾಲ್ತಿ ವರ್ಷದಲ್ಲಿ ಕೊಡಲಾಗಿದೆ. ಇದರಿಂದ ಕಾರ್ಯ ಸಾಕಷ್ಟು ಚುರುಕಾಗಿ ಸಾಗುವುದಿಲ್ಲ. ಕಾರ್ಪೋರೇಷನ್ನಿಗೆ ಒಂದು ಕೋಟಿ ರೂಪಾಯಿ ಷೇರ್ ಬಂಡವಾಳ ಹಾಕುವುದಕ್ಕೆ ಸರ್ಕಾರದವರು ಒಪ್ಪಿದ್ದಾರೆ. ಅದಕ್ಕೆ ಮುಂದಿನ ವರ್ಷದಲ್ಲಿ ನಮ್ಮ ಅರ್ಥಮಂತ್ರಿಗಳು ವ್ಯವಸ್ಥೆ ಮಾಡಬೇಕು. ನೇಕಾರರ ವಸತಿ ಹೆಚ್ಚಿರುವ ಕಡೆಗಳಲ್ಲಿ ರಾ ಮಟೀರಿಯಲ್ಸ್ ಬ್ಯಾಂಕ್ ತೆಗೆಯಬೇಕು ಮತ್ತು ನೇಕಾರರಿಗೆ ಆರ್ಥಿಕ ಸಹಾಯ ಮಾಡಬೇಕು. ಅದೇ ಪ್ರಕಾರ procurement-cum-sale depot ಗಳನ್ನು ಪ್ರತಿಯೊಂದು ಜಿಲ್ಲೆಯಲ್ಲಿ ತೆರೆಯುವುದು ಅವಶ್ಯಕವಿದೆ ಎಂದು ಈ ಸಮಯದಲ್ಲಿ ಹೇಳಬಯಸುತ್ತೇನೆ.

ನಾನು ಇನ್ನೂ ಒಂದು ವಿಷಯವನ್ನು ಸೂಚಿಸಬಯಸುತ್ತೇನೆ. ಅದು ಏನೆಂದರೆ ನಮ್ಮ ರಾಜ್ಯದಲ್ಲಿ ಕೈಮಗ್ಗ ಬಟ್ಟೆ ಮಾರಾಟದಲ್ಲಿ ಏನು ಒಂದು ರಿಬೇಟ್‌ನ್ನು ಕೊಡುತ್ತಿದ್ದಾರೋ ಅದಕ್ಕೆ ಚಾಲ್ತಿ ಸಾಲಿನ ಬಜೆಟ್ಟಿನಲ್ಲಿ ನಾಲ್ಕು ಲಕ್ಷ ರೂಪಾಯಿಗಳನ್ನು ಏನು ಇಟ್ಟಿದ್ದಾರೆ, ಅದು ದುರುಪಯೋಗವಾಗುತ್ತಿದೆ. ಅನೇಕ ಡಿಫಂಕ್ಟ್ ಸೊಸೈಟಿಗಳು ಈ ರಿಯಾಯ್ತಿಯ ಪ್ರಯೋಜನ ಪಡೆಯುತ್ತಿವೆ. ಈ ಬಗ್ಗೆ ಮಾನ್ಯ ಅರ್ಥ ಮಂತ್ರಿಗಳು ಸಾಕಷ್ಟು ಗಮನ ಕೊಡಬೇಕು. ಇದಕ್ಕೆ ಸಂಬಂಧಪಟ್ಟಂತೆ ಹೇಳುವುದಾದರೆ ಆಂಧ್ರ ಪ್ರದೇಶದಲ್ಲಿ ಕೈಮಗ್ಗ ಬಟ್ಟೆ ವಿಕ್ರಿಯ ಮೇಲೆ ಕೊಡುವ Rebate ಅನ್ನು ನಿಲ್ಲಿಸಿ ಅದರ ಬದಲು ಚೆನ್ನಾಗಿ ನಡೆಯುವ ಸೊಸೈಟಿಗಳಿಗೆ ಇನ್ಸೆಂಟಿವ್ ಕೊಡುತ್ತಿದ್ದಾರೆ. ಅದೇ ರೀತಿ ನಮ್ಮ ರಾಜ್ಯದಲ್ಲೂ ಚೆನ್ನಾಗಿ ಕೆಲಸ ಮಾಡುವ ಸೊಸೈಟಿಗೆ ಇನ್ಸೆಂಟಿವ್ ಕೊಡಬೇಕು. ಸಬ್ಸಿಡಿ, ಷೇರ್ ಕ್ಯಾಪಿಟಲ್ ಅಥವಾ ಇನ್ನಾವುದೋ ಬೇರೆ ರೂಪದಲ್ಲಿ ಅವರಿಗೆ ಸಹಾಯ ಮಾಡಬೇಕು ಎಂದು ನಾನು ಈ ಸಮಯದಲ್ಲಿ ಹೇಳಬಯಸುತ್ತೇನೆ.

ಇದರ ಬಗ್ಗೆ ಅತಿ ಮುಖ್ಯವಾದ ವಿಷಯ ಹೇಳಬೇಕಾದರೆ ಕೇರಳ ರಾಜ್ಯದಲ್ಲಿ ಕೇವಲ 80 ಸಾವಿರ ಕೈಮಗ್ಗಗಳು ಇದ್ದರು ಕೂಡ ಅಲ್ಲಿ ಒಂದು ಸೆಪರೇಟ್ ಡೈರಕ್ಟೋರೆಟ್ ಫಾರ್ ಹ್ಯಾಂಡ್ಲೂಮ್ಸ್ ಅಂತ ಮಾಡಿ, ಕೈಮಗ್ಗದ ಅಭಿವೃದ್ಧಿ ಕಡೆಗೆ ಸಾಕಷ್ಟು ಗಮನಕೊಟ್ಟಿದ್ದಾರೆ. ಆಂಧ್ರ ಪ್ರದೇಶ ಮತ್ತು ಇದೇ

ರೀತಿ ತಮಿಳುನಾಡಿನಲ್ಲೂ ಕೂಡ Separate Directorate for Handlooms ಮಾಡಿ ಕೈಮಗ್ಗ ಅಭಿವೃದ್ಧಿಗೆ ಸಾಕಷ್ಟು ಗಮನಕೊಟ್ಟಿದ್ದಾರೆ. ಆ ಪ್ರಕಾರ ನಮ್ಮ ರಾಜ್ಯದಲ್ಲೂ ಒಂದು ಸೆಪರೇಟ್ ಡೈರಕ್ಟೋರೆಟ್ ಮಾಡುತ್ತೇವೆ ಎಂದು ಸರ್ಕಾರದವರು ಹಿಂದಿನ ಅಸೆಂಬ್ಲಿಯಲ್ಲಿ ಒಪ್ಪಿಕೊಂಡಿದ್ದರು. ಎರಡು ವರ್ಷದ ಹಿಂದೆ ಇದಕ್ಕಾಗಿ ಐದು ಲಕ್ಷ ರೂಪಾಯಿಗಳನ್ನು ಬಜೆಟ್ಟಿನಲ್ಲಿ ಮೀಸಲಾಗಿಟ್ಟಿದ್ದರೂ ಅದನ್ನು ಮಾಡಲಿಲ್ಲ. ಈಗಲಾದರೂ ಆ ಕೆಲಸ ಮಾಡಬೇಕು ಎಂದು ನಾನು ಹೇಳಬಯಸುತ್ತೇನೆ.

## ಕೃಷಿ ಹಾಗೂ ಕೈಮಗ್ಗಗಳ ಸುಧಾರಣೆಯಿಂದ ನಿರುದ್ಯೋಗ ನಿವಾರಣೆ :

ಈ ದೇಶದಲ್ಲಿರುವ ಅನ್‌ಎಂಪ್ಲಾಯ್‌ಮೆಂಟನ್ನು ಕೇವಲ ಎರಡು ಮಾರ್ಗಗಳಿಂದ ಮಾತ್ರ ನಿವಾರಣೆ ಮಾಡಬಹುದು. ಒಂದನೆಯದು ಕೃಷಿ, ಎರಡನೆಯದು ಕೈಮಗ್ಗ. ಈ ಬಜೆಟ್ಟಿನಲ್ಲಿ ಕೈಮಗ್ಗದ ಸಲುವಾಗಿ ಕೇವಲ 70 ಲಕ್ಷ ರೂಪಾಯಿಗಳನ್ನು ಮಾತ್ರ ಇಡಲಾಗಿದೆ. ಈ ಹಣ ಸಾಕಾಗುವುದಿಲ್ಲ. ಆದುದರಿಂದ ಈ ವಿಷಯದಲ್ಲಿ ಮಾನ್ಯ ಮಂತ್ರಿಗಳು ಗಮನಕೊಟ್ಟು ತಮ್ಮ ಅಧಿಕಾರಿಗಳ ಮುಖಾಂತರ ವಿಚಾರಣೆ ಮಾಡಿ ಬೇರೆ ಬೇರೆ ಐಟಂಗಳಿಗೆ ಎಷ್ಟೆಷ್ಟು ಹೆಚ್ಚಿಗೆ ಹಣ ಕೊಟ್ಟಿದ್ದಾರೆ ಅದನ್ನು ವಿಚಾರಣೆ ಮಾಡಿ ಇದಕ್ಕೆ ಎಷ್ಟು ಸೂಕ್ತವೋ ಅಷ್ಟನ್ನಾದರೂ ಈ ವರ್ಷದ ಬಜೆಟ್ಟಿನಲ್ಲಿ ಸೇರಿಸಬೇಕು.

ಇನ್ನೊಂದು ವಿಷಯ ಏನೆಂದರೆ ಬನಹಟ್ಟಿ ಕೋಆಪರೇಟೀವ್ ಸ್ಪಿನ್ನಿಂಗ್ ಮಿಲ್ ಬಗ್ಗೆ ಹೇಳುವುದಾದರೆ ಸರ್ಕಾರದವರು 1 : 2 ಪ್ರಮಾಣದಲ್ಲಿ ಷೇರು ಬಂಡವಾಳ ಕೊಟ್ಟು ಇದಕ್ಕೆ ಸಹಾಯ ಮಾಡಬೇಕಾಗಿದೆ ಎಂದು ಹೇಳುತ್ತೇನೆ. ಈಗಷ್ಟೇ ಕೈಮಗ್ಗದ ಒಂದು ಯೋಜನೆ ಪ್ರಾರಂಭವಾಗಿದೆ. ಈ ಯೋಜನೆಯಲ್ಲಿ ನೇಕಾರರಿಗೆ ಬೇಕಾದಂಥಾ ಮಟೀರಿಯಲ್ಸ್ ಕೊಟ್ಟು ಸಹಾಯ ಮಾಡಬೇಕು. ಅಲ್ಲದೆ ಇದಕ್ಕೆ ಸೇರಿರತಕ್ಕಂಥಾ 10 ಸಾವಿರ ಕೈಮಗ್ಗಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡು ಅವರಿಗೆ ಉತ್ತೇಜನ ಕೊಟ್ಟು ಸಹಾಯ ಮಾಡಬೇಕು. ಬನಹಟ್ಟಿ ಕೋಆಪರೇಟೀವ್ ಸ್ಪಿನ್ನಿಂಗ್ ಮಿಲ್ ಏನು ಇದೆ 12 ಲಕ್ಷ ರೂಪಾಯಿ ಕಲೆಕ್ಟ್ ಮಾಡಿದ್ದಾರೆ. 1 : 2 ರೇಷ್ಯೋ ಪ್ರಕಾರ 24 ಲಕ್ಷ ರೂಪಾಯಿಗಳನ್ನು

ಕೊಡುವುದಕ್ಕೆ ಸರ್ಕಾರ ವಿಚಾರ ಮಾಡಬೇಕೆಂದು ನಾನು ಈ ಸಮಯದಲ್ಲಿ ಸೂಚಿಸಬಯಸುತ್ತೇನೆ.

ಇನ್ನು ಆಂಧ್ರ ಪ್ರದೇಶದ ಎಮ್ಮಿಗನೂರದಲ್ಲಿ ಒಂದು ಸೊಸೈಟಿ ಇದೆ. ಅದು ಕೈಮಗ್ಗದ ಮಾದರಿ ಸೊಸೈಟಿ. ಅಂಥಾ ಒಂದು ಸೊಸೈಟಿ ನಮ್ಮ ರಾಜ್ಯದಲ್ಲೂ ನಿರ್ಮಾಣವಾಗಬೇಕು ಎಂದು ಹೇಳುತ್ತೇನೆ. ಆ ಸೊಸೈಟಿಯಲ್ಲಿ ಪ್ರಿಂಟಿಂಗ್, ವೀವಿಂಗ್, ಡೈಯಿಂಗ್ ಇದನ್ನೆಲ್ಲಾ ಪ್ರಾರಂಭ ಮಾಡಿದ್ದಾರೆ. ನಮ್ಮ ರಾಜ್ಯದಲ್ಲಿನ ಅನೇಕ ಸೊಸೈಟಿಗಳು ಸರಿಯಾಗಿ ಕೆಲಸ ಮಾಡುತ್ತಾ ಇಲ್ಲ. ಇವನ್ನು ಸರ್ಕಾರದವರು ವಶಕ್ಕೆ ತೆಗೆದುಕೊಂಡು ಯೋಗ್ಯವಾದ ಪ್ರೈಮರಿ ಸೊಸೈಟಿಗಳಿಗೆ ಸಹಾಯ ಕೊಟ್ಟು ಉತ್ತಮ ಕೆಲಸ ನಡೆಸುವಂತೆ ಮಾಡಬೇಕೆಂದು ಈ ಸಮಯದಲ್ಲಿ ಸೂಚಿಸಬಯಸುತ್ತೇನೆ.

ಇನ್ನು ಎರಡನೆಯ ವಿಚಾರ ಏನೆಂದರೆ, ಪ್ರಧಾನ ಮಂತ್ರಿಗಳು ಘೋಷಿಸಿದ 20 ಅಂಶಗಳಲ್ಲಿ ಒಂದು ಅಂಶವಾದ ರೂರಲ್ ಇಂಡೆಟ್‌ನೆಸ್‌ನ್ನು ರದ್ದು ಮಾಡಿರುವುದು. ಹಳ್ಳಿಗಳಲ್ಲಿರತಕ್ಕಂಥ ಬಡವರ ಎಲ್ಲಾ ಸಾಲಗಳನ್ನೂ ರದ್ದುಗೊಳಿಸುವುದಕ್ಕೆ ನಮ್ಮ ರಾಜ್ಯ ಸರ್ಕಾದವರು ಒಂದು ಕಾಯ್ದೆ ತಂದು ಪಾಸು ಮಾಡಿಸಿದ್ದಾರೆ. ಯಾರಿಗೆ 2400 ರೂಪಾಯಿಗಿಂತ ಕಡಿಮೆ ಆದಾಯ ಇರುತ್ತದೋ ಅವರು ಡೆಟ್ ರಿಲೀಫ್ ಆ್ಯಕ್ಟ್ ಪ್ರಕಾರ ಸಾಲದ ಹಣ ಕೊಡುವ ಹಾಗೆ ಇಲ್ಲ. ಇದರಿಂದ ಹಳ್ಳಿಗಳ ಬಡವರಿಗೆ ಈಗ ಸಾಲ ಸಿಗದಂತಾಗಿದೆ. ಆ ದೃಷ್ಟಿಯಿಂದ ಮಾನ್ಯ ಅರ್ಥ ಮಂತ್ರಿಗಳು ವಿಚಾರ ಮಾಡಿ, ನಾಲ್ಕೆಂಟು ಅಥವಾ ಹತ್ತು ಸಣ್ಣ ಸಣ್ಣ ಹಳ್ಳಿಗಳನ್ನು ಒಟ್ಟುಗೂಡಿಸಿ, ಒಂದು ಮುಖ್ಯ ಹಳ್ಳಿಯಲ್ಲಿ ರೂರಲ್ ಬ್ಯಾಂಕ್‌ನ್ನು ಸ್ಥಾಪನೆ ಮಾಡಿದರೆ ಈ ಬಡಜನರಿಗೆ ಅನುಕೂಲವಾಗುತ್ತದೆಂದು ಈ ಸಮಯದಲ್ಲಿ ಹೇಳಬಯಸುತ್ತೇನೆ.

**ನ್ಯಾಯಬೆಲೆ ಅಂಗಡಿಗಳ ಕುರಿತು:**

ಇನ್ನು ಸರ್ಕಾರದವರು ಅಗತ್ಯ ವಸ್ತುಗಳನ್ನು ರಾಜ್ಯದ್ಲಲಿರತಕ್ಕಂಥ ನ್ಯಾಯಬೆಲೆ ಅಂಗಡಿಗಳ ಮೂಲಕ ಮತ್ತು ಸೊಸೈಟಿಗಳ ಮೂಲಕ ಯೋಗ್ಯ

ದರದಲ್ಲಿ ಜನರಿಗೆ ಹಂಚಲು ವ್ಯವಸ್ಥೆ ಮಾಡಿದ್ದಾರೆ. ಈ ರೀತಿ ಹಂಚುವಾಗ ಸಾಕಷ್ಟು ಲಂಚಗುಳಿತನ ನಡೆಯುತ್ತಿದೆ. ಸಕ್ಕರೆಯ ಬಗ್ಗೆ ಹೇಳಬೇಕೆಂದರೆ, ಸರ್ಕಾರದವರು ಹಂಚುವ ಸಕ್ಕರೆ ನಮ್ಮ ಹಳ್ಳಿಗಳಿಗೆ ಮುಟ್ಟುವುದೇ ಇಲ್ಲ. ಇದನ್ನು ನ್ಯಾಯಬೆಲೆ ಅಂಗಡಿಯವರು ಮತ್ತು ಸೊಸೈಟಿಯವರು ತೆಗೆದುಕೊಂಡು ಅದನ್ನು ಆಯಾ ತಾಲೂಕಿನ ಮುಖ್ಯ ಸ್ಥಳಗಳಲ್ಲಿಯೇ ಹೆಚ್ಚಿನ ಬೆಲೆಗೆ ಮಾರಾಟ ಮಾಡಿ, ಆ ಹಣವನ್ನು ತಾವೇ ಬಳಸಿಕೊಳ್ಳುತ್ತಿರುವಂಥ ದೃಷ್ಟಾಂತಗಳು ಇವೆ. ಈ ಬಗ್ಗೆ ಅಧಿಕಾರಿಗಳಿಗೆ ಮತ್ತು ತಹಶೀಲ್ದಾರರಿಗೆ ಅರ್ಜಿಗಳನ್ನು ಕೊಟ್ಟರೂ ಇನ್ನೂ ತನಕ ಯಾವ ಉಪಯೋಗವೂ ಆಗಿಲ್ಲ. ಯಾರ ವಿರುದ್ಧ ಲಂಚಗುಳಿತನದ ತಕರಾರು ಇದೆ, ಅಂಥವರ ಕಡೆಗೇ ಆ ತಕರಾರನ್ನು ಸರ್ಕಾರದವರು ತನಿಖೆಗೆ ಕಳಿಸುತ್ತಾರೆ. ಇದು ಸರಿಯಲ್ಲ. ಈ ಪದ್ಧತಿಯನ್ನು ಬಿಟ್ಟು, ಅಂಥ ಅಧಿಕಾರಿಗಳ ಬಗ್ಗೆ ವಿಚಾರ ಮಾಡಲು ಸ್ವತಂತ್ರವಾದ ಸೆಲ್ ಮಾಡಿ, ಅದರ ಕಡೆಗೆ ದೂರುಗಳನ್ನು ವಿಚಾರಣೆಗೆ ಕಳುಹಿಸಿಕೊಡಬೇಕೆಂದು ಹೇಳುತ್ತೇನೆ.

**ಭೂನ್ಯಾಯ ಮಂಡಳಿಗಳು:**

ಇನ್ನು ಭೂಸುಧಾರಣೆಯ ಬಗ್ಗೆ ಹೇಳಬೇಕಾದರೆ, 5 ಲಕ್ಷಕ್ಕಿಂತ ಹೆಚ್ಚು ಅರ್ಜಿಗಳು ಎಲ್ಲ ಭೂನ್ಯಾಯ ಮಂಡಳಿಗಳ ಕಡೆಗೆ ಬಂದಿವೆ. ಇಷ್ಟು ಅರ್ಜಿಗಳ ಪೈಕಿ 61 ಸಾವಿರ ಅರ್ಜಿಗಳು ಮಾತ್ರ ವಿಲೇವಾರಿಯಾಗಿವೆ. ಉಳಿದ ಅರ್ಜಿಗಳು ಇತ್ಯರ್ಥವಾಗಲು ನಾಲ್ಕೈದು ವರ್ಷಗಳಾದರೂ ಆಗಬಹುದು. ಈ ದೃಷ್ಟಿಯಿಂದ ಮಾನ್ಯ ಆರ್ಥಿಕ ಮಂತ್ರಿಗಳು ವಿಚಾರ ಮಾಡಿ, ಪ್ರತಿಯೊಂದು ತಾಲೂಕಿನಲ್ಲಿ ಒಂದೊಂದು ಭೂನ್ಯಾಯ ಮಂಡಳಿ ರಚನೆಮಾಡಿ, ಆಯಾ ತಾಲೂಕಿನ ತಹಶೀಲ್ದಾರರಿಗೆ ಅವುಗಳನ್ನು ಇತ್ಯರ್ಥ ಮಾಡಲು ಅಧಿಕಾರ ಕೊಟ್ಟರೆ, ಜಾಗ್ರತೆ ಇತ್ಯರ್ಥ ಮಾಡಬಹುದು. ಭೂ ನ್ಯಾಯ ಮಂಡಳಿಗಳು ತಿಂಗಳಲ್ಲಿ ಒಂದು ವಾರ ಮಾತ್ರ ಸಭೆ ಸೇರಿ ನಿರ್ಣಯ ತೆಗೆದುಕೊಳ್ಳುತ್ತಿವೆ. ಇದರಿಂದ ಅರ್ಜಿಗಳು ಇತ್ಯರ್ಥವಾಗುವುದು ನಿಧಾನವಾಗುತ್ತಿದೆ. ಆದಕಾರಣ ಈ ಪದ್ಧತಿಯನ್ನು ತೆಗೆದುಹಾಕಿ ನಾನು ಮೊದಲೇ ಹೇಳಿದಂತೆ ಪ್ರತಿ ತಾಲೂಕಿನಲ್ಲಿ ಭೂ ನ್ಯಾಯ ಮಂಡಳಿ ರಚನೆ ಮಾಡಬೇಕು ಮತ್ತು ಇದರಲ್ಲಿನ ಸದಸ್ಯರ ಬಗ್ಗೆ ಏನಾದರೂ ತಕರಾರು ಬಂದರೆ, ಅಂಥವರನ್ನು ಆ ಜಾಗದಿಂದ ತೆಗೆದು ಒಳ್ಳೆಯವರನ್ನು

ನೇಮಕ ಮಾಡಿ ಜನರಿಗೆ ಒಳ್ಳೆಯ ನ್ಯಾಯ ಸಿಗುವಂತೆ ಮಾಡಬೇಕೆಂದು ಸರ್ಕಾರಕ್ಕೆ ಸೂಚಿಸಬಯಸುತ್ತೇನೆ.

ಇನ್ನು ಎಲ್ಲ ಮಾನ್ಯ ಸದಸ್ಯರು ಅಪರ್ ಕೃಷ್ಣಾ ಯೋಜನೆ ಮತ್ತು ನಾರಾಯಣಪೂರ ಡ್ಯಾಂ ಬಗ್ಗೆ ಹೇಳುತ್ತಾರೆ. ಆದರೆ ನಾನು ಹೇಳುವುದೇನೆಂದರೆ, ಅಪರ್ ಕೃಷ್ಣಾ ಯೋಜನೆಯ ಜೊತೆಗೆ, ಹಿಪ್ಪರಗಿ ಯೋಜನೆಗೂ ಸರ್ಕಾರ ಸಾಕಷ್ಟು ಗಮನ ಕೊಟ್ಟು ಆ ಕೆಲಸವನ್ನು ಜಾಗ್ರತೆ ಮುಗಿಸಿದರೆ, ಅದರಿಂದ ನಮ್ಮ ಜಮಖಂಡಿ ತಾಲೂಕಿಗೆ ಬಹಳ ಅನುಕೂಲವಾಗುತ್ತದೆ ಎಂದು ಹೇಳಿ ನನಗೆ ಇಷ್ಟು ಮಾತನಾಡಲು ಅವಕಾಶ ಕೊಟ್ಟ ಅಧ್ಯಕ್ಷರಿಗೆ ವಂದನೆಗಳನ್ನು ಅರ್ಪಿಸಿ ನನ್ನ ಭಾಷಣವನ್ನು ಮುಗಿಸುತ್ತೇನೆ.

## ಆಹಾರ ಇಲಾಖೆಯ ಮೇಲಿನ ಚರ್ಚೆ

### 13ನೇ ಮಾರ್ಚ್ 1976

**ಶ್ರೀ ಪಿ. ಎಂ. ಬಾಂಗಿ (ಜಮಖಂಡಿ)**– ಮಾನ್ಯ ಅಧ್ಯಕ್ಷರೇ, ಮಾನ್ಯ ಆಹಾರ ಮಂತ್ರಿಗಳು ಮಂಡಿಸಿದಂಥ ಬೇಡಿಕೆಗಳನ್ನು ಸಂಪೂರ್ಣವಾಗಿ ಬೆಂಬಲಿಸುತ್ತಾ, ಈ ಸಮಯದಲ್ಲಿ ಕೆಲವು ಸೂಚನೆಗಳನ್ನು ಕೊಡಬಯಸುತ್ತೇನೆ. ಪ್ರಧಾನಮಂತ್ರಿಗಳ 20 ಅಂಶಗಳ ಕಾರ್ಯಕ್ರಮದಲ್ಲಿ ಗ್ರಾಹಕರಿಗೆ ಅದರಲ್ಲಿಯೂ ಬಡವರಿಗೆ ಎಸೆನ್ಸಿಯಲ್ ಕಮಾಡಿಟೀಸ್ ಸರಿಯಾಗಿ ಮುಟ್ಟುತ್ತಿಲ್ಲವೆಂದು ನಾನು ಈ ಸಭೆಯಲ್ಲಿ ಹೇಳಬಯಸುತ್ತೇನೆ. ಒಂದು ವರ್ಷಕ್ಕಿಂತಲೂ ಮೇಲ್ಪಟ್ಟು ಇರತಕ್ಕ ಇನ್‌ಫಾರ್ಮಲ್ ರೇಷನಿಂಗ್ ಷಾಪ್‌ಗಳಲ್ಲಿ ಸಾಕಷ್ಟು ರೇಷನ್ ಪದಾರ್ಥಗಳು ಸಿಗುತ್ತಿಲ್ಲ. ಇದರಿಂದ ಬಡ ನೇಕಾರರಿಗೆ ಬಹಳ ತೊಂದರೆಯಾಗಿದೆ. ಸಂಬಂಧಪಟ್ಟ ಇಲಾಖೆಗಳಿಂದ ಆಹಾರ ಪದಾರ್ಥ ಹಂಚುವ ವ್ಯವಸ್ಥೆ ಏನೇನೂ ಸರಿಯಾಗಿಲ್ಲ. ನಮ್ಮ ಕ್ಷೇತ್ರಕ್ಕೆ ಸಂಬಂಧಪಟ್ಟ ಹಾಗೆ ಇನ್‌ಫಾರ್ಮಲ್ ರೇಷನಿಂಗನ್ನು ಕೂಡಲೇ ಅನ್ವಯಿಸಬೇಕೆಂದು ಹೇಳುತ್ತೇನೆ. ಇದರ ಬಗ್ಗೆ ನಾನು ಈಗಾಗಲೇ ಮೇಲಿಂದ ಮೇಲೆ ಇಲ್ಲಿ ಹೇಳುತ್ತಲೇ ಇದ್ದೇನೆ. ಮಾನ್ಯ ಮುಖ್ಯಮಂತ್ರಿಗಳು ನಮ್ಮ ಕ್ಷೇತ್ರಕ್ಕೆ ಬಂದಾಗ ಇನ್‌ಫಾರ್ಮಲ್

ರೇಷನಿಂಗ್‌ನ್ನು ನೇಕಾರರ ಕೇಂದ್ರಗಳಿಗೆಲ್ಲಾ ಅನ್ವಯಿಸಬೇಕೆಂದು ಕೇಳಿದಾಗ ಮಾನ್ಯ ಮುಖ್ಯಮಂತ್ರಿಗಳು ಒಂದು ಆಶ್ವಾಸನೆಯನ್ನು ಕೊಟ್ಟಿದ್ದರು. ಆದರೆ ಇದುವರೆಗೆ ಆ ನೇಕಾರರ ಕೇಂದ್ರಗಳಲ್ಲಿ ಅದರಲ್ಲಿಯೂ ಬಡ ಕೂಲಿಕಾರರು ಇರುವಲ್ಲಿ ಸುಮಾರು 50 ಸಾವಿರ ಸಂಸಾರಗಳಿಗೆ ಇನ್ನೂ ಇನ್‌ಫಾರ್ಮಲ್ ರೇಷನಿಂಗ್ ಪದ್ಧತಿಯನ್ನು ಅನ್ವಯಿಸಿಲ್ಲ.ಇದರಿಂದ ಅವರಿಗೆ ಬೇಕಾಗುವಷ್ಟು ಆಹಾರ ಧಾನ್ಯಗಳನ್ನು ಪೂರೈಸುವುದು ಆಗಲಿಲ್ಲವೆಂಬುದು ವಿಷಾದಕರ ಸಂಗತಿ. ಆದ್ದರಿಂದ ಬಡ ಕೂಲಿಕಾರರು ಮತ್ತು ಬಡ ನೇಕಾರರು ಇರುವ ಪ್ರದೇಶಗಳಲ್ಲಿ ಸಾಕಷ್ಟು ಪ್ರಮಾಣದಲ್ಲಿ ಆಹಾರಧಾನ್ಯಗಳನ್ನು ಕೂಡಿಸಿಟ್ಟು ಅವನ್ನು ಯೋಗ್ಯ ರೀತಿಯಲ್ಲಿ ಹಂಚುವುದಕ್ಕೆ ಕೂಡಲೇ ವ್ಯವಸ್ಥೆ ಮಾಡಬೇಕೆಂದು ನಾನು ಈ ಸಮಯದಲ್ಲಿ ಸರ್ಕಾರದವರನ್ನು ಮತ್ತೊಮ್ಮೆ ಕೇಳಿಕೊಳ್ಳುತ್ತೇನೆ.

**ಸಮರ್ಪಕ ಸಕ್ಕರೆ ವಿತರಣೆಯಾಗುತ್ತಿಲ್ಲ :**

ಇನ್ನು ಎರಡನೆಯ ವಿಷಯ ಹೇಳುವುದಾದರೆ ಸಕ್ಕರೆ ವಿತರಣೆಯಲ್ಲಿನ ಅವ್ಯವಹಾರ ಬಹಳ ವಿಷಾದಕರ ಹಾಗೂ ಸಾಕಷ್ಟು ಜಿಗುಪ್ಸೆಯ ಸಂಗತಿ. ಹಳ್ಳಿಗಾಡಿನಲ್ಲಿರುವ ಜನರಿಗೆ ಈ ರೀತಿ ಸಕ್ಕರೆ ವಿತರಣೆಯಾಗುತ್ತದೆ ಎಂಬುದೇ ಗೊತ್ತಿಲ್ಲ. ನಮ್ಮ ಜಮಖಂಡಿಯಲ್ಲಿ ಎರಡು ತಿಂಗಳಲ್ಲಿ ಸಾಕಷ್ಟು ಬೋಗಸ್ ಕಾರ್ಡ್ ಮೂಲಕ ಸಕ್ಕರೆ ವಿತರಣೆ ವಿರುದ್ಧ ಪದೇ ಪದೇ ತಹಸೀಲ್ದಾರರಿಗೆ, ಅಸಿಸ್ಟಂಟ್ ಕಮೀಷನರರಿಗೆ, ಡೆಪ್ಯೂಟಿ ಕಮೀಷನರ್ ಅವರಿಗೆ, ಅದೇ ಪ್ರಕಾರ ಮಂತ್ರಿಗಳಿಗೆ ಕೂಡ ಹೇಳಿದ್ದು ಉಪಯೋಗವಾಗಿಲ್ಲ. ಈಗ ಇರತಕ್ಕ ಬೋಗಸ್ ಕಾರ್ಡುಗಳನ್ನು ರದ್ದು ಮಾಡುವ ವ್ಯವಸ್ಥೆಯಾಗಿಲ್ಲ. ಕೆಲವರೊಂದಿಗೆ ಅಧಿಕಾರಿಗಳು ಸಾಮೀಲಾಗಿ ಸಕ್ಕರೆ ಲೂಟಿ ಮಾಡಿದ್ದರೂ, ಅವರ ಮೇಲೆ ಇದುವರೆಗೂ ಯಾವ ಕ್ರಮ ತೆಗೆದುಕೊಂಡಿಲ್ಲ. ಜಮಖಂಡಿ ತಹಸೀಲ್ದಾರರು, ಅದರಂತೆ ಅಲ್ಲಿರುವ ಕೆಲವು ಅಧಿಕಾರಿಗಳು ತಮ್ಮ ಮಕ್ಕಳಮದುವೆಗೆ ಸಕ್ಕರೆ ಬೇಕೆಂದು, ಫೇರ್‌ಪ್ರೈಸ್ ಡಿಪೋಗಳಿಗೆ ಹೋಗಿ ಚೀಲ ಹರಿದುಕೊಂಡು ಎಂಟ್ಹತ್ತು ಕೆ.ಜಿ. ಸಕ್ಕರೆ ತೆಗೆದುಕೊಂಡು ಮಕ್ಕಳ ಮದುವೆ ಮಾಡುತ್ತಾರೆ. ಇದಕ್ಕಿಂತ ಹೆಚ್ಚಿನ ವಿಷಾದಕರವಾದ ಸಂಗತಿ ಬೇರೊಂದು ಇಲ್ಲ. ಕೂಡಲೇ ಆಹಾರ ಮಂತ್ರಿಗಳು ಈ ಕಳ್ಳತನವನ್ನು ನಿಲ್ಲಿಸಬೇಕು. ನಾವು ಅಧಿಕಾರಿಗಳ ಬಗ್ಗೆ ತಕರಾರು ಮಾಡಿದಾಗ ಅವರ ವಿಚಾರಣೆಗೆ ಮಾನ್ಯ ಮಂತ್ರಿಗಳು ಕೂಡಲೇ ಗಮನ

ಕೊಡಬೇಕೆಂದು ಹೇಳುತ್ತೇನೆ. ಈ ದೃಷ್ಟಿಯಿಂದ ರಾಜ್ಯಮಟ್ಟದಲ್ಲಿ ಮತ್ತು ಜಿಲ್ಲಾ ಮಟ್ಟದಲ್ಲಿ ಸ್ವತಂತ್ರವಾದ ವಿಜಿಲೆನ್ಸ್ ಸೆಲ್ ನಿರ್ಮಾಣ ಮಾಡಬೇಕೆಂದು ನಾನು ಸೂಚಿಸುತ್ತೇನೆ.

ಸಿವಿಲ್ ಸಪ್ಲೈಸ್ ಬಗ್ಗೆ ಮಾತನಾಡುವುದಾದರೆ, ಕಂಟ್ರೋಲ್ ಧೋತರ ಮತ್ತು ಸೀರೆಗಳು ಇದುವರೆಗೂ ನಮ್ಮ ಭಾಗಗಳಲ್ಲಿ ಬಂದಿಲ್ಲ. ಅದು ಯಾವರೀತಿ ಇರುತ್ತದೆ ಎನ್ನುವುದನ್ನು ಸಹ ನಮ್ಮ ಭಾಗಗಳ ಜನರು ನೋಡಿಲ್ಲ. ಆದುದರಿಂದ ಮಾನ್ಯ ಆಹಾರ ಮಂತ್ರಿಗಳು ಕಂಟ್ರೋಲ್ ಧೋತರ ಮತ್ತು ಸೀರೆಗಳನ್ನು ಯೋಗ್ಯಬೆಲೆಯಲ್ಲಿ ಎಲ್ಲಾ ಕಡೆ ಹಂಚುವ ವ್ಯವಸ್ಥೆ ಮಾಡಬೇಕೆಂದು ಹೇಳಬಯಸುತ್ತೇನೆ. ಇನ್ನು ನಮ್ಮ ಕಡೆಯ ಜೋಳದ ಧಾರಣೆ ಬಗ್ಗೆ ಮಾತನಾಡುವುದಾದರೆ, ಲೆವಿ ಪ್ರೈಸ್ ಅಂದರೆ ರೈತರಿಂದ ಕೊಳ್ಳತಕ್ಕ ಜೋಳದ ಬೆಲೆ ಕ್ವಿಂಟಲ್ಲಿಗೆ 74 ರೂಪಾಯಿ. ಆದರೆ ಫೇರ್‌ಪ್ರೈಸ್ ಡಿಪೋದಲ್ಲಿ ಮಾರಾಟದ ದರ 114 ರೂಪಾಯಿ. ಹೀಗಾಗಿ ಜೋಳದ ವಿತರಣೆಯಿಂದ ಯಾರಿಗೂ ಉಪಯೋಗವಿಲ್ಲ. ಧಾನ್ಯದ ವ್ಯಾಪಾರಿಗಳು ಕೇವಲ ನಾಲ್ಕೈದು ಪರ್ಸೆಂಟ್ ಲಾಭ ಪಡೆದು ಮಾರುತ್ತಾರೆ. ಆದರೆ ಸರ್ಕಾರದ ಈ ಖಾತೆಯವರು 30–40 ಪರ್ಸೆಂಟ್ ಮಾರ್ಜಿನ್ ಹಾಕಿ ಮಾರುವುದು ಒಳ್ಳೆಯದಲ್ಲ. ಜೋಳವನ್ನು ಹಂಚುವಾಗ ಒಂದು ಸರಿಯಾದ ಬೆಲೆ ಇಡುವಂತೆ ಏರ್ಪಾಡು ಮಾಡಬೇಕು ಎಂದು ಕೇಳಿಕೊಂಡು ಇಷ್ಟು ಕಾಲ ಮಾತನಾಡಲು ಅವಕಾಶ ಕೊಟ್ಟ ಅಧ್ಯಕ್ಷರಿಗೆ ವಂದಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

## ವೃತ್ತಿ ತೆರಿಗೆ ಬಿಲ್ ಮೇಲಿನ ಚರ್ಚೆ

### 9ನೇ ಏಪ್ರಿಲ್ 1976

**ಶ್ರೀ ಪಿ. ಎಂ. ಬಾಂಗಿ (ಜಮಖಂಡಿ)–** ಮಾನ್ಯ ಅಧ್ಯಕ್ಷರೇ, ಇವತ್ತಿನ ದಿವಸ ನಮ್ಮ ಅರ್ಥಮಂತ್ರಿಗಳು ತಂದಿರತಕ್ಕಂಥ ಈ ಬಿಲ್‌ನ್ನು ಸಮರ್ಥಿಸುತ್ತಾ, ಹಲವು ವಿಷಯಗಳನ್ನು ಹೇಳಬಯಸುತ್ತೇನೆ. ಇದಕ್ಕೆ ಮೊದಲು ಮಾತನಾಡಿದ ವಿರೋಧಪಕ್ಷದ ಸದಸ್ಯರು ಮತ್ತು ನಮ್ಮ ಪಕ್ಷದ ಸದಸ್ಯರು ವಕೀಲಿ ವೃತ್ತಿ

ಮತ್ತು ಡಾಕ್ಟರ್ ವೃತ್ತಿ ಮಾಡುವವರ ಮೇಲೆ ವೃತ್ತಿ ತೆರಿಗೆ ಸರಿಯಲ್ಲವೆಂದು ತಿಳಿಸಿದರು. ಇಂಜಿನಿಯರಿಂಗ್ ಮತ್ತು ಮೆಡಿಕಲ್ ಕಾಲೇಜುಗಳಿಗೆ ಸೇರಲು ಅಡ್ಮಿಷನ್ ಸಿಗುತ್ತಿಲ್ಲವಾದ ಕಾರಣ, ಪದವೀಧರರು ಕಾಯ್ದೆ ಓದಿ ಲಾ ಪದವಿಯನ್ನು ಪಡೆದುಕೊಂಡು ವಕೀಲಿ ವೃತ್ತಿಗೆ ಬರುತ್ತಿದ್ದಾರೆ. ತಾಲೂಕು ಮತ್ತು ಜಿಲ್ಲಾ ಸ್ಥಳಗಳಲ್ಲಿ ಇರುವ ವಕೀಲರಿಗೆ ಕೆಲಸ ಇಲ್ಲದೆ ಸಿಮೆಂಟ್ ಪರ್ಮಿಟ್, ಇಲ್ಲವೇ ಬೇರೆ ಪರ್ಮಿಟ್ ತೆಗೆದುಕೊಂಡು ತಮ್ಮ ಜೀವನವನ್ನು ಸಾಗಿಸುವಂಥಾ ಪ್ರಸಂಗ ಬಂದಿದೆ. ಆದರೆ ಬೆಂಗಳೂರಿನಲ್ಲಿರುವ ವಕೀಲರ ವಿಷಯವೇ ಬೇರೆ. ಬೆಂಗಳೂರಿನಲ್ಲಿ ಲೀಡಿಂಗ್ ಪ್ರಾಕ್ಟೀಷನರ್‌ಗಳ ಪೈಕಿ ಕೆಲವರು ಏನಿದ್ದಾರೆ, ಅವರು ಬರೀ ಕಾಗದಗಳನ್ನು ಓದುವುದಕ್ಕೆ 2 ಸಾವಿರ ರೂಪಾಯಿ ಚಾರ್ಜ ಮಾಡುತ್ತಾರೆ. ಒಂದು ದಿವಸ ಕೋರ್ಟಿಗೆ ಹಾಜರಾಗುವುದಕ್ಕೆ ಒಂದೂವರೆ ಸಾವಿರ ರೂಪಾಯಿ ಚಾರ್ಜ ಮಾಡುತ್ತಾರೆ. ಪರಿಸ್ಥಿತಿ ಹೀಗಿರುವಾಗ, ನಮ್ಮ ಆರ್ಥಿಕ ಮಂತ್ರಿಗಳು, 2 ವರ್ಷಕ್ಕಿಂತ ಕಡಿಮೆ ಪ್ರಾಕ್ಟೀಸ್ ಮಾಡಿದವರಿಗೆ ತೆರಿಗೆ ವಿನಾಯ್ತಿ ಕೊಟ್ಟು, 2 ವರ್ಷದಿಂದ 5 ವರ್ಷದವರೆಗೆ ಪ್ರಾಕ್ಟೀಸ್ ಮಾಡಿದವರಿಗೆ ವರ್ಷಕ್ಕೆ 150 ರೂಪಾಯಿಗಳವರೆ ತೆರಿಗೆ ಹಾಕಿದ್ದಾರೆ. ಇದು ಡಾಕ್ಟರ್ ವೃತ್ತಿ ಮಾಡುವವರಿಗೂ ಅನ್ವಯವಾಗುತ್ತದೆ. ಈ ಪ್ರಕಾರ ಅವರಿಂದ ಟ್ಯಾಕ್ಸ್ ವಸೂಲಿ ಮಾಡುವುದು ಸರಿಯಲ್ಲವೆಂದು ಹೇಳುತ್ತೇನೆ. ಡಾಕ್ಟರ್ ವೃತ್ತಿಯೇ ಆಗಲಿ ಅಥವಾ ಇನ್ನಾವ ವೃತ್ತಿಯೇ ಆಗಲಿ, ಅದರಿಂದ ಸಾಕಷ್ಟು ಹಣ ಸಂಪಾದನೆ ಮಾಡಿ, Income Tax ಅನ್ನು ಯಾರು ಕೊಡುತ್ತಿದ್ದಾರೋ, ಅಂಥವರಿಗೆ ಮಾತ್ರ ವೃತ್ತಿ ತೆರಿಗೆ ಹಾಕಬೇಕೆಂದು ಸಲಹೆ ಮಾಡಿ ನನಗೆ ಇಷ್ಟು ಮಾತನಾಡಲು ಅವಕಾಶ ಕೊಟ್ಟ ಅಧ್ಯಕ್ಷರಿಗೆ ವಂದಿಸಿ ನನ್ನ ಭಾಷಣ ಮುಗಿಸುತ್ತೇನೆ.

## ಕಂದಾಯ ಇಲಾಖೆಯ ಮೇಲಿನ ಚರ್ಚೆ

### 10ನೇ ಏಪ್ರಿಲ್ 1976

ಶ್ರೀ ಪಿ. ಎಂ. ಬಾಂಗಿ (ಜಮಖಂಡಿ)– ಮಾನ್ಯ ಅಧ್ಯಕ್ಷರೇ ಈವತ್ತಿನ ದಿವಸ ಕಂದಾಯ ಮಂತ್ರಿಗಳು ತಂದಿರತಕ್ಕಂಥ ತಿದ್ದುಪಡಿಗೆ ಸಂಪೂರ್ಣ

ಬೆಂಬಲ ನೀಡುತ್ತಾ ಈ ವಿಷಯದಲ್ಲಿ ಕೆಲವು ಸಲಹೆಗಳನ್ನು ಕೊಡಲು ಬಯಸುತ್ತೇನೆ. ಈ ಕಾಯ್ದೆ ಪಾಸಾಗಿ 30 ತಿಂಗಳು ಕಳೆದರೂ ಇವತ್ತಿನವರೆಗೂ ಜಾರಿಯಲ್ಲಿ ಬಂದಿಲ್ಲ. It shall come into force on such date as the State Government may notify ಎಂದು ಹೇಳಿದೆ. ಆದರೆ ಇನ್ನೂ notification ಹೊರಟಿಲ್ಲ. ಈ ಪರಿಸ್ಥಿತಿಯಲ್ಲಿ ಈ ಕಾಯ್ದೆಯಲ್ಲಿಯ ಕೆಲವು ಕಲಮುಗಳು ಅನ್‌ಎನ್ಫೋರ್ಸಿಯೇಬಲ್ ಮತ್ತು ಇನಿಫೆಕ್ಟಿವ್ ಆಗಿವೆ. ಇದರಲ್ಲಿ 'ಪರ್ಮನಂಟ್ ಟೆನೆಂಟ್' 'ಪ್ರೊಟೆಕ್ಟೆಡ್ ಟೆನೆಂಟ್' ಎಂದು ಕ್ಲಾಸಿಫಿಕೇಶನ್ ಮಾಡಿ ಅವರವರಿಗೆ ಬೇರೆ ಬೇರೆ ರೀತಿ ಪರಿಹಾರ ಮತ್ತು ಆಕ್ಯುಪನ್ಸಿ ಕೊಡಬೇಕೆಂದು ಹೇಳಲಾಗಿದೆ. ಆದರೆ ಭೂ ಸುಧಾರಣೆ ಕಾಯ್ದೆ ಅಮಲಿನಲ್ಲಿ ಬಂದಿದ್ದು, ಆ ಕಾಯ್ದೆಯು 44 ನೇ ಸೆಕ್ಷನ್ ಪ್ರಕಾರ ಗೇಣಿದಾರರ ಭೂಮಿ ಸರ್ಕಾರದ ಮಾಲೀಕತ್ವದಲ್ಲಿ ಬಂದ ಮೂಲಕ ಈ ಕಾಯ್ದೆಯಲ್ಲಿನ 4, 5, 6, 10, 18 ಕಲಮುಗಳು ನಿರುಪಯೋಗಿ ಆಗಿರುತ್ತವೆ. ಇವೆಲ್ಲವನ್ನು ವಿಚಾರಮಾಡಿ ಈ ಕಲಮುಗಳನ್ನು ತೆಗೆಯಲು ಇದರಲ್ಲಿ ತಿದ್ದುಪಡಿಮಾಡಬೇಕು. ಈ ಬಗ್ಗೆ ರಿಪೀಲಿಂಗ್ ಆ್ಯಕ್ಟ್ ತಂದು ಬೇರೆ ಬೇರೆ ಕಲಮುಗಳಲ್ಲಿನ ಶಬ್ದ-ಪದ ಪ್ರಯೋಗಗಳನ್ನು ಡಿಲಿಟ್ ಮಾಡಿದರೆ, ಭೂ ಸುಧಾರಣಾ ಕಾಯ್ದೆಗೆ ವಿರುದ್ಧವಾಗುವುದಿಲ್ಲವೆಂದು ಹೇಳುತ್ತ, ಇಲ್ಲಿ ತಂದಿರತಕ್ಕಂಥ ತಿದ್ದುಪಡಿಯನ್ನು ಸ್ವಾಗತಿಸಿ ನನ್ನ ಮಾತನ್ನು ಮುಗಿಸುತ್ತೇನೆ.

## ನ್ಯಾಯಾಲಯಗಳ ಮೇಲಿನ ಚರ್ಚೆ

### 13ನೇ ಏಪ್ರಿಲ್ 1976

ಶ್ರೀ ಪಿ. ಎಂ. ಬಾಂಗಿ (ಜಮಖಂಡಿ)-- ಮಾನ್ಯ ಅಧ್ಯಕ್ಷರೆ, ಇವತ್ತಿನ ದಿವಸ ಮಾನ್ಯ ಸ್ನೇಹಿತರಾದ ಶ್ರೀಮಾನ್ ಬಣಕಾರ ಅವರು ತಂದಿರತಕ್ಕಂಥ ಗೊತ್ತುವಳಿ ಸೂಚನೆಯನ್ನು ಪರಿಪೂರ್ಣವಾಗಿ ಸಮರ್ಥನೆ ಮಾಡಿ, ನಾನು ಕೆಲವು ಮಾತುಗಳನ್ನು ಹೇಳಬಯಸುತ್ತೇನೆ. 1975 ರಲ್ಲಿ ಲ್ಯಾಂಡ್ ರಿಫಾರ್ಮ್ಸ್ ಕಾಯ್ದೆ ಬಗ್ಗೆ ಕೆಲವು ತೀರ್ಮಾನಗಳು ಹೈಕೋರ್ಟಿನಿಂದ ಬಂದಿವೆ. ಅದರಿಂದ ಸರ್ಕಾರಕ್ಕೆ ಮತ್ತು ಜನತೆಗೆ ತೊಂದರೆ ಉಂಟಾಯಿತು. ಈಗ ನಮ್ಮ ಸರ್ಕಾರ ಜನತಾ ನ್ಯಾಯಮಂಡಲಿಗಳನ್ನು ರಚಿಸಿದ್ದು ಲ್ಯಾಂಡ್ ರಿಫಾರ್ಮ್ಸ್ ಆ್ಯಕ್ಟನ್ನು

ಜಾರಿಗೆ ತರಲು ಸ್ವಲ್ಪ ಅನುಕೂಲವಾಗಿವೆ ಮತ್ತು ಜನರಿಗೆ ಸರಿಯಾದ ನ್ಯಾಯ ದೊರಕಲು ಅವಕಾಶವಾಗಿದೆ ಮತ್ತು ಇಲ್ಲಿ ಸಾಕಷ್ಟು ಕೇಸುಗಳು ಇತ್ಯರ್ಥವಾಗುತ್ತಿವೆ. ಆದರೆ ಸಿವಿಲ್ ಕೋರ್ಟುಗಳಿಗೆ ಕೆಲಸ ಕಡಿಮೆ ಆಗಿದೆ. ಹಿಂದೆ ಒಂದು ಸಾರಿ ನಾವು ನಮ್ಮ ಭಾಗಕ್ಕೆ ಸಿವಿಲ್ ಕೋರ್ಟ ಬೇಕೆಂದು ಕೇಳಿದಾಗ, ಸರ್ಕಾರದವರು ಹೈಕೋರ್ಟಿನವರನ್ನು ಕೇಳಿದರು, ಅದಕ್ಕೆ ಅವರು ಸಮ್ಮತಿ ಕೊಡಲಿಲ್ಲ, Figures do not justify ಅಂತ ಹೇಳಿದರು. ಈಗ ಕೂಡಾ ಕೋರ್ಟುಗಳನ್ನು ತೆಗೆಯಬೇಕೆಂದರೆ, ಸರ್ಕಾರದವರು ಹೈಕೋರ್ಟಿನ ಸಮ್ಮತಿ ಕೇಳುತ್ತಾರೆ ಮತ್ತು ಸರ್ಕಾರ ತನ್ನ ಹಣಕಾಸಿನ ಸ್ಥಿತಿಯನ್ನು ನೋಡುತ್ತದೆ. ಹೈಕೋರ್ಟಿನವರು ಸಮ್ಮತಿ ಕೊಡಬೇಕಾದರೆ ಕೇಸುಗಳ ಸಂಖ್ಯೆ ನೋಡುತ್ತಾರೆ. ಈಗ ಮ್ಯಾರೇಜ್ ಆ್ಯಕ್ಟ್, ಹಿಂದೂ ಸಕ್ಸೇಶನ್ ಆ್ಯಕ್ಟ್ ಇನ್ನೂ ಕೆಲವು ಕಾಯ್ದೆಗಳು ಬಂದಿರುವುದರಿಂದ, ಅವುಗಳ ಸಂಬಂಧ ಜನರು ನ್ಯಾಯ ಪಡೆಯಲು ವಕೀಲರನ್ನು ನೇಮಿಸಿ ಜಿಲ್ಹಾ ಸ್ಥಳಗಳಿಗೆ ಹೋಗ ಬೇಕಾಗುತ್ತದೆ. ಇದರಿಂದ ಸಾಕಷ್ಟು ತೊಂದರೆಯಾಗುತ್ತದೆ ಮತ್ತು ಖರ್ಚಾಗುತ್ತದೆ. ನ್ಯಾಯಾಲಯ ಪದ್ಧತಿಯಲ್ಲಿ ಬದಲಾವಣೆಯಾಗಿ ಎಲ್ಲೆಲ್ಲಿ ಸಾಕಷ್ಟು ಕೆಲಸವಿದೆ ಅಂಥಾ ಕಡೆಗಳಲ್ಲಿ Munsiff Magistrate ಕೋರ್ಟ ಸ್ಥಾಪನೆ ಮಾಡಿ ಮುನ್ಸೀಫ್‌ರಿಗೆ ಹೊಸ ಕಾಯ್ದೆಗನುಸಾರ ಅಧಿಕಾರ ಕೊಟ್ಟು ಅವರು ಅಲ್ಲಿನ ಕೇಸುಗಳನ್ನು ತೀರ್ಮಾನ ಮಾಡುವಂತೆ ಕಾಯ್ದೆ ಮಂತ್ರಿಗಳು ಮಾಡಬೇಕೆಂದು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ.

## ಮುನ್ಸಿಪಲ್ ಆ್ಯಕ್ಟ್ ತಿದ್ದುಪಡಿ ಮೇಲಿನ ಚರ್ಚೆ

### 19ನೇ ಮೇ 1976

**ಶ್ರೀ ಪಿ. ಎಂ. ಬಾಂಗಿ (ಜಮಖಂಡಿ)–** ಮಾನ್ಯ ಅಧ್ಯಕ್ಷರೇ ಮಾನ್ಯ ಕಂದಾಯ ಮಂತ್ರಿಗಳು ಕರ್ನಾಟಕ ಮುನಿಸಿಪಲ್ ಆ್ಯಕ್ಟ್‌ಗೆ 40 ತಿದ್ದುಪಡಿಗಳನ್ನು ಸೂಚಿಸಿದ್ದನ್ನು ಸ್ವಾಗತಿಸುತ್ತಾ ಕೆಲವು ಸೂಚನೆಗಳನ್ನು ಮಾಡಬಯಸುತ್ತೇನೆ. ಈಗಿದ್ದಂಥ ಮುನಿಸಿಪಾಲಿಟಿಗಳು ರಚನೆಯಾಗಿದ್ದು 1964 ರಲ್ಲಿ, ಅಂದರೆ 12 ವರ್ಷಗಳ ಹಿಂದೆ. ಈಗ ಈ ಕಾಯ್ದೆ ಜಾರಿಯಲ್ಲಿ ಬಂದಂಥ ತೊಂದರೆಗಳನ್ನು

ಲಕ್ಷ್ಯದಲ್ಲಿಟ್ಟುಕೊಂಡು ಕಾಯ್ದೆ ಮಂತ್ರಿಗಳು ಈ ತಿದ್ದುಪಡಿಗಳನ್ನು ತಂದಿದ್ದಾರೆ. ಸೆಕ್ಷನ್ 11 ರಲ್ಲಿ ಹೊಸ ಟೇಬಲ್‌ನ್ನು ನಮ್ಮ ಮಂತ್ರಿಗಳು ಸೂಚಿಸಿದ್ದಾರೆ. ಆದರೆ ಈ ಹೊಸ ಟೇಬಲ್ ಪ್ರಕಾರ ಕೆಲವು ಮುನಿಸಿಪಾಲಿಟಿಗಳಲ್ಲಿ ಸದಸ್ಯರ ಸಂಖ್ಯೆ ಕಡಿಮೆಯಾದರೆ, ಕೆಲವು ಮುನಿಸಿಪಾಲಿಟಿಗಳಲ್ಲಿ ಸದಸ್ಯರ ಸಂಖ್ಯೆ ಜಾಸ್ತಿಯಾಗುತ್ತದೆ. ಹಳೇ ಟೇಬಲ್ ಸರಿಯಾಗಿದೆ. For Municipality with a population exceeding 10,000 but not exceeding 20,000 ಇದ್ದರೆ, ಸದಸ್ಯ ಸಂಖ್ಯೆ 15 ಇದ್ದಿದ್ದನ್ನು ಕಡಿಮೆ ಮಾಡಿ 11 ಕ್ಕೆ ಇಳಿಸಿದ್ದಾರೆ. ಅದೇ ಪ್ರಕಾರ ಪಾಪ್ಯುಲೇಶನ್ ಆಧರಿಸಿ ಹೊಸ ಟೇಬಲ್‌ನ್ನು ಮಾಡಿರುವುದು ಸರಿಯಲ್ಲ. ಯಾಕೆಂದರೆ ಪ್ರತಿನಿಧಿಗಳನ್ನು ಆರಿಸಿ ಕಳಿಸುವ ಅಧಿಕಾರವನ್ನು ಮೊಟಕುಗೊಳಿಸಲಾಗಿದೆ. ಆದುದರಿಂದ ಹಳೇ ಟೇಬಲ್ ಪ್ರಕಾರ ಪಾಪ್ಯುಲೇಶನ್ ಆಧಾರ ಇಟ್ಟುಕೊಂಡು ಯಾವ ಯಾವ ಮುನಿಸಿಪಾಲಿಟಿಗಳಿಗೆ ಎಷ್ಟೆಷ್ಟು ಪ್ರತಿನಿಧಿಗಳನ್ನು ಕಳಿಸುವ ಅಧಿಕಾರ ಇದೆಯೋ ಅದನ್ನು ಖಾಯಂ ಮಾಡಬೇಕು ಎಂದು ಸೂಚಿಸಬಯಸುತ್ತೇನೆ. ನಂತರ 12ನೇ ಕಲಮಿನಲ್ಲಿ ಈ ರೀತಿ ಹೇಳಿದೆ. "Provided that election shall be held for any such vacancy as soon as may be but not later that one year from the date of vacancy". ಇದನ್ನು ನಾನು ಸ್ವಾಗತಿಸುತ್ತೇನೆ. ಈ 12 ನೇ ಕಲಮಿನ ಪ್ರಕಾರ ಮುನಿಸಿಪಾಲಿಟಿಯವರು ತಮ್ಮ ಪ್ರತಿನಿಧಿಗಳನ್ನು ಆರಿಸುವುದರಲ್ಲಿ ತಪ್ಪಿದರೆ, ಆಗ ಸರ್ಕಾರದವರಿಗೆ ನೇಮಕ ಮಾಡುವ ಅಧಿಕಾರ ಇದೆ. ಆದರೆ ಈ ರೀತಿ ನೇಮಕ ಮಾಡಿದ ಪ್ರತಿನಿಧಿಗಳು ಸರಿಯಾಗಿ ಕೆಲಸ ಮಾಡದೇ ಹೋದರೆ ಅವರನ್ನು ರಿಕಾಲ್ ಮಾಡುವ ಅಧಿಕಾರ ಸರ್ಕಾರಕ್ಕಿಲ್ಲ. ಆದುದರಿಂದ During the pleasure of the Government ಎನ್ನುವ ಶಬ್ದ ಉಪಯೋಗಿಸಿ ಪ್ರತಿನಿಧಿಗಳನ್ನು ವಾಪಸ್ ಪಡೆಯುವ ಅಧಿಕಾರವನ್ನು ಸರ್ಕಾರ ತನ್ನ ಕಡೆ ಇಟ್ಟುಕೊಳ್ಳಬೇಕು ಎಂದು ನಾನು ಸೂಚಿಸಬಯಸುತ್ತೇನೆ. 16 ನೇ ಕಲಮಿನಲ್ಲಿ ಈಗಿದ್ದಂಥ ಕ್ಲಾಸ್-ಬಿ ಕುರಿತು ಹೇಳುವುದೇನೆಂದರೆ, ಹಳೆಯ ಮುನಿಸಿಪಲ್ ಕಾಯ್ದೆಯಲ್ಲಿದ್ದಂಥ ಬಿ ಕಲಮಿನ ಪ್ರಕಾರ ತಪ್ಪಿತಸ್ಥನಾದವನಿಗೆ ಮುನಿಸಿಪಾಲಿಟಿ ಇಲೆಕ್ಷನ್‌ಗೆ ನಿಲ್ಲಲು ಅರ್ಹತೆಯಿಲ್ಲವೆಂದು ಇದ್ದು, ಅದನ್ನು ಖಾಯಂ ಮಾಡಿ ಒಂದು ಹೊಸ ಕಲಮನ್ನು ಸೇರಿಸಬೇಕೆಂದು ಈ ಸಂದರ್ಭದಲ್ಲಿ ಹೇಳಬಯಸುತ್ತೇನೆ. ಸದ್ಯಕ್ಕೆ ಮುನಿಸಿಪಾಲಿಟಿ ಕಾಯ್ದೆ ಮೇರೆಗೆ ಕೆಲವು ಸ್ಥಾನಗಳನ್ನು ಷೆಡ್ಯೂಲ್ಡ್ ಕ್ಯಾಸ್ಟ್ ಮತ್ತು ಷೆಡ್ಯೂಲ್ಡ್ ಟ್ರೈಬ್ಸ್‌ಗೆ ಇಡಬೇಕು. ಇನ್ನು ಯಾರು ಪುರುಷನೂ

ಅಲ್ಲ, ಸ್ತ್ರೀಯೂ ಅಲ್ಲ ಅಂಥವರಿಗೆ ಡಿಸ್‌ಕ್ವಾಲಿಫಿಕೇಷನ್ ಹಾಕತಕ್ಕಂಥಾದ್ದು ಒಳ್ಳೆಯದೆಂದು ಈ ಸಂದರ್ಭದಲ್ಲಿ ಸೂಚಿಸುತ್ತೇನೆ. ಮೊನ್ನೆ ಜಮಖಂಡಿ ಮುನಿಸಿಪಾಲಿಟಿಯಲ್ಲಿ ನಡೆದಿದ್ದು ಪೇಪರಿನಲ್ಲಿ ಬಂದಿದ್ದು, ಅದನ್ನು ತಾವೂ ಓದಿರಬಹುದು. ಅಂಥವರನ್ನು ಡಿಸ್‌ಕ್ವಾಲಿಫಿಕೇಷನ್ ಮಾಡುವುದನ್ನು 16 ನೇ ಕಲಮಿನಲ್ಲಿ ಸೇರಿಸಬೇಕು.

**ಶ್ರೀ ಡಿ.ಕೆ. ನಾಯ್ಕರ್**– ಮಾನ್ಯ ಅಧ್ಯಕ್ಷರೇ, ಮಾನ್ಯ ಸದಸ್ಯರು ಯಾರು ಸ್ತ್ರೀನೂ ಅಲ್ಲ, ಪುರುಷನೂ ಅಲ್ಲ ಅಂತಹವರನ್ನು ಡಿಸ್‌ಕ್ವಾಲಿಫಿಕೇಷನ್ ಮಾಡಬೇಕು ಎಂದು ಹೇಳುತ್ತಿದ್ದಾರೆ. ಅವರು ಪೊಟೆಂಟ್ ಎಂದು ಹೇಳುವ ಅಥಾರಿಟಿ ಡಾಕ್ಟರ್ ತಾನೇ?

**ಶ್ರೀ ಪಿ. ಎಂ. ಬಾಂಗಿ**– ಅಂಥವರಿಗೆ ಒತ್ತಾಯಮಾಡಿ ಬೇಕಾದವರು ಬೇಕಾದ ಕಡೆಗೆ ಎಳೆದುಕೊಂಡು ಹೋಗುತ್ತಾರೆ ಅಂಥ ಸದಸ್ಯರನ್ನು ಡಿಸ್‌ಕ್ವಾಲಿಫಿಕೇಷನ್ ಮಾಡುವುದು ಉಚಿತವೆಂದು ನನ್ನ ಅಭಿಪ್ರಾಯ. ಸೆಕ್ಷನ್ 18 ಎ ಪ್ರಕಾರ ಕೌನ್ಸಿಲರ್‌ಗೆ ತಿಂಗಳಿಗೆ 500 ರೂಪಾಯಿ, ಟೌನ್ ಮುನಿಸಿಪಾಲಿಟಿ ಮತ್ತು ಉಳಿದ ಮುನಿಸಿಪಾಲಿಟಿ ಸದಸ್ಯರಿಗೆ ತಿಂಗಳಿಗೆ 100 ರೂಪಾಯಿ ಅಲೋವನ್ಸ್ ಕೊಡಬೇಕೆಂದು ತಮ್ಮ ಸಲಹೆ ಇದೆ. ಇದು ಸ್ವೀಕಾರ ಮಾಡಬೇಕಾದ ಸಲಹೆ. ಆ ರೀತಿ ಮಾಡದೇ ಹೋದರೆ ಮುನಿಸಿಪಾಲಿಟಿಗಳಲ್ಲಿ ಕರಪ್ಶನ್ ಇನ್ನೂ ಹೆಚ್ಚಾಗುತ್ತದೆ. ಮೇಲಾಗಿ ಕೌನ್ಸಿಲರ್ ಹುದ್ದೆ ಆನರರಿ ಹುದ್ದೆ. ಅಧ್ಯಕ್ಷರು ಮತ್ತು ಉಪಾಧ್ಯಕ್ಷರ ವಿಷಯ ಬೇರೆ. ಅವರು ಸ್ವಂತದ ಕೆಲಸವನ್ನು ಬಿಟ್ಟು ಮುನಿಸಿಪಾಲಿಟಿ ಕೆಲಸಕ್ಕೆ ಗಮನಕೊಡಬೇಕಾಗುತ್ತದೆ. ಆದುದರಿಂದ ಇವರಿಗೆ ಸಿಟಿಂಗ್ ಅಲೋವನ್ಸ್ ಕೊಡಬೇಕಾಗುತ್ತದೆ. ಇದು ಸ್ವೀಕಾರ ಮಾಡಬೇಕಾದ ವಿಚಾರ ಎಂದು ಈ ಸಂದರ್ಭದಲ್ಲಿ ಹೇಳಬಯಸುತ್ತೇನೆ. ಸೆಕ್ಷನ್ 42, ಕ್ಲಾಸ್ 11 ರಲ್ಲಿ ಹೀಗೆ ಇದೆ. "In the provison for the words 'one year' and 'every year', the words 'two years' and 'second year' shall respectively be substituted. ಇದರ ಬದಲು, two year ಮಾಡಿ, ಅಧ್ಯಕ್ಷರು ಮತ್ತು ಉಪಾಧ್ಯಕ್ಷರಾದವರು 2 ವರ್ಷ ಇರತಕ್ಕದ್ದು ಎಂದು ಮಾಡಿದರೆ ಯೋಗ್ಯ. ಇದರಿಂದ ಹೆಚ್ಚು ಜನರಿಗೆ ಅವಕಾಶ ಸಿಗುತ್ತದೆ.

ತಿದ್ದುಪಡಿಯಲ್ಲಿ ಕಲಂ 11 ರ ಸಬ್‌ಸೆಕ್ಷನ್ 2 ರಲ್ಲಿ ಇರುವಂಥ ಪ್ರೊವಿಶನ್ ಒಳ್ಳೆಯದು. ಇದನ್ನು ಕಡ್ಡಾಯವಾಗಿ ಹಾಕಬೇಕೆಂದು ಈ ಸಮಯದಲ್ಲಿ ಸೂಚಿಸಬಯಸುತ್ತೇನೆ. ಸೆಕ್ಷನ್ 54 ರಲ್ಲಿ ಜನರಿಂದ ಆರಿಸಿ ಬಂದಂಥ ಎಂ.ಎಲ್.ಎ. ಗಳನ್ನು ಎಕ್ಸ್ ಅಫಿಷಿಯೋ ಮೆಂಬರ್ಸ್ ಆಗಿ ಸೇರಿಸಬೇಕು. 66ನೇ ಕಲಮಿನಲ್ಲಿ ಸ್ಟ್ಯಾಂಡಿಂಗ್ ಕಮಿಟಿ ಚೇರ್ಮನ್‌ಗೆ ಜನರಲ್ ಬಾಡಿಗಿಂತ ಹೆಚ್ಚಿನ ಅಧಿಕಾರ ಕೊಟ್ಟಿದ್ದು ಸರಿಯಲ್ಲ. ಜನರಲ್ ಬಾಡಿಗೆ ಅಧಿಕಾರ ಏನು ಇತ್ತು ಅದನ್ನು ಹಾಗೆಯೇ ಇಡಬೇಕು. ಇನ್ನು ಕನ್ವರ್ಷನ್ ಆಫ್ ಮುನ್ಸಿಪಾಲಿಟೀಸ್ ಎಂದು ಒಂದು ಅಮೆಂಡ್‌ಮೆಂಟನ್ನು ತಂದಿದ್ದಾರೆ ಇದು ಸೂಕ್ತವಾದುದು. ಇದನ್ನು ನಾನು ಸ್ವಾಗತಿಸುತ್ತೇನೆ. ಇದರಲ್ಲಿ ಕೆಲಸ ಮಾಡುವವರೆಲ್ಲರೂ ಕಾಯ್ದೆ ಪ್ರಕಾರ ತಮ್ಮ ಅಸೆಟ್ಸ್ ಬಗ್ಗೆ ಡಿಕ್ಲರೇಷನ್ ಕೊಡುವುದನ್ನು ಕಡ್ಡಾಯ ಮಾಡಬೇಕು. ಇದಕ್ಕೆ ಕಾಯ್ದೆಯಲ್ಲಿ ತಿದ್ದುಪಡಿ ಮಾಡಬೇಕು ಎಂದು ನಾನು ಸಲಹೆ ಮಾಡುತ್ತೇನೆ.

ರಿವಿಷನ್ ಆಫ್ ಹೌಸ್ ಟ್ಯಾಕ್ಸ್ ಇದರ ಬಗ್ಗೆ ಮಾನ್ಯ ಸದಸ್ಯರು ಹೇಳಿದ ಹಾಗೆ ನಾಲ್ಕು ವರ್ಷದ ಒಳಗೆ ಅಸೆಸ್‌ಮೆಂಟ್ ಆಫೀಸರನ್ನು ನೇಮಿಸುತ್ತಾರೆ. ಈ ರೀತಿಯಾಗಿ ರಿವಿಷನ್ ಮಾಡುವುದರಿಂದ ಮುನ್ಸಿಪಾಲಿಟಿಗಳಿಗೆ ಹೆಚ್ಚು ಉತ್ಪನ್ನ ಬರಬಹುದು. ಆದರೆ ಇದು ಸರಿಯಲ್ಲ. ಈ ಬಗ್ಗೆ ನಿಯಮಗಳನ್ನು ತಿದ್ದುಪಡಿ ಮಾಡಿ, ಅಸೆಸ್‌ಮೆಂಟ್ ಅಥಾರಿಟೀಸ್‌ಗೆ ಸರಿಯಾದ ಡೈರೆಕ್ಷನ್ ಕೊಡಬೇಕು. ಈಗ ಎಲ್ಲಾ ಮುನ್ಸಿಪಾಲಿಟಿಗಳಲ್ಲಿ ಹೌಸ್ ರೆಂಟ್ ಕಂಟ್ರೋಲ್ ಆ್ಯಕ್ಟ್ ಬಂದಿದೆ. ಮುಂಬೈ ಹೈ ಕೋರ್ಟಿನಲ್ಲಿ ಇದರ ಬಗ್ಗೆ ಅನೇಕ ಡಿಸಿಷನ್ಸ್ ಆಗಿವೆ. ಮೊದಲಿದ್ದ ಮನೆಗಳು ಬಿದ್ದ ನಂತರ ಕಟ್ಟಿದಾಗ ಹೊಸ ಕಟ್ಟಡ ಏನು ಆಗಿವೆಯೋ ಅವುಗಳಿಗೆ ಹೊಸ ಟ್ಯಾಕ್ಸ್ ಹಾಕುವುದು ಸರಿಯಲ್ಲ. ಇರತಕ್ಕಂಥ ಎಲ್ಲಾ ಅಂಗಡಿಗಳ ಮೇಲೆ ಹೊಸದಾಗಿ ರಿವಿಷನ್ ಮಾಡಿ ಹೊಸ ಟ್ಯಾಕ್ಸ್ ಹಾಕುವ ಅಭಿಪ್ರಾಯ ಏನು ಇದೆ, ಅದು ಸರಿಯಲ್ಲ.

ಮುನ್ಸಿಪಾಲಿಟಿಯವರು ವೀವರ್ಸ ಕೋ ಆಪರೇಟೀವ್ ಸೆಕ್ಟರ್‌ನಿಂದ ತಯಾರಾದ ಬಟ್ಟೆಗೂ, ಕೈಮಗ್ಗದ ಬಟ್ಟೆಗೂ ಜಕಾತಿಯನ್ನು ವಸೂಲು ಮಾಡುತ್ತಿದ್ದಾರೆ, ಇದು ಸರಿಯಲ್ಲ. ಇದರ ಬಗ್ಗೆ ಹೈಕೋರ್ಟ ಡಿಸಿಷನ್ ಸಾಕಷ್ಟು

ಆಗಿವೆ. ಮುನ್ಸಿಪಾಲಿಟಿಯವರು ಜಕಾತಿಯನ್ನು ವಸೂಲು ಮಾಡುತ್ತಿರುವ ಬಗ್ಗೆ ರಿಟ್ ಹಾಕಿದಾಗ, ಕೋರ್ಟಿನವರು ಎಲ್ಲಾ ಮುನ್ಸಿಪಾಲಿಟಿಗಳಿಗೆ ಡೈರೆಕ್ಷನ್ ಕೊಟ್ಟಿದ್ದಾರೆ. ಆದ್ದರಿಂದ ಹ್ಯಾಂಡ್‌ಲೂಮ ಬಟ್ಟೆಯ ಮೇಲೆ ಜಕಾತಿ ಹಾಕುವುದನ್ನು ಕೂಡಲೇ ನಿಲ್ಲಿಸಬೇಕು. ನಾನು ಇನ್ನೊಂದು ಮಾತು ಹೇಳುವುದೇನೆಂದರೆ, ಕೈಮಗ್ಗದ ಅಭಿವೃದ್ಧಿಗೋಸ್ಕರ ಮುನ್ಸಿಪಾಲಿಟಿ ನೌಕರರು ಕೈಮಗ್ಗದ ಬಟ್ಟೆಯನ್ನೇ ಕೊಳ್ಳಬೇಕು ಎನ್ನುವ ಡೈರೆಕ್ಷನ್ ಅನ್ನು ತಾವು ಕೊಡಬೇಕು. ನೌಕರರಿಗೆ ಕೈಮಗ್ಗದ ಬಟ್ಟೆ ಕೊಳ್ಳಲು ಅಡ್ವಾನ್ಸ್ ಕೊಡಬೇಕು ಎಂದು ನಾನು ಈ ಸಮಯದಲ್ಲಿ ಸೂಚಿಸಬಯಸುತ್ತೇನೆ.

ಕೊನೆಯದಾಗಿ ಡ್ರೇನೇಜ್ ಬೋರ್ಡು ಸ್ಥಾಪಿತವಾಗಿದ್ದರೂ ಕಾಯ್ದೆ ಪ್ರಕಾರ ಅದು ಕೆಲಸ ಮಾಡುತ್ತಿಲ್ಲ. ಬಹಳ ಸಾವಕಾಶ ಕೆಲಸವಾಗುತ್ತಿದೆ. ಎಷ್ಟೋ ಮುನ್ಸಿಪಾಲಿಟಿಗಳು ಎಲ್.ಐ.ಸಿ. ಯಿಂದ ಹಣ ತೆಗೆದುಕೊಂಡು ಕೆಲಸ ಮಾಡದೆ ಬರಿ ಬಡ್ಡಿಯನ್ನು ತುಂಬುತ್ತಿವೆ. ಜಮಖಂಡಿ ಮುನ್ಸಿಪಾಲಿಟಿಯ ಬಗ್ಗೆ ಹೇಳುವುದಾದರೆ, ಏನೂ ಕೆಲಸ ಆಗಿಲ್ಲ. ಮುನ್ಸಿಪಾಲಿಟಿಯವರು 24 ಲಕ್ಷ ರೂಪಾಯಿಗಳನ್ನು ಸಾಲವಾಗಿ ತೆಗೆದುಕೊಂಡಿದ್ದರೂ ಏನೂ ಪ್ರಗತಿಯಾಗಿಲ್ಲ. ಎ ಮತ್ತು ಬಿ ಡಿವಿಷನ್‌ನಲ್ಲಿ ಅಂಡರ್‌ಗ್ರೌಂಡ್ ವರ್ಕ ಮಾತ್ರ ಆಗಿದೆ. ಸಿ ಮತ್ತು ಡಿ ಡಿವಿಷನ್‌ನಲ್ಲಿ ಏನೂ ಆಗಿಲ್ಲ. ಈ ದೃಷ್ಟಿಯಿಂದ ಮುನಿಸಿಪಾಲಿಟಿ ಮಂತ್ರಿಗಳು ಈ ಕಡೆ ಗಮನಕೊಟ್ಟು ಜಮಖಂಡಿಯ ಕೆಲಸ ಕೂಡಲೇ ಪೂರ್ತಿಯಾಗುವಂತೆ ಡೈರೆಕ್ಷನ್ ಕೊಡಬೇಕು ಎಂದು ನಾನು ಈ ಸಮಯದಲ್ಲಿ ಸಲಹೆ ಮಾಡುತ್ತೇನೆ.

ಕಂಬೈನ್ಡ್ ಬೆಡ್ ಹಾಸ್ಪಿಟಲ್ ಸಲುವಾಗಿ ಮ್ಯಾಚಿಂಗ್ ಕಾಂಟ್ರಿಬ್ಯೂಷನ್ ಎಂದು ಒಂದೂವರೆ ಲಕ್ಷ ರೂಪಾಯಿಗಳನ್ನು ತುಂಬಿ ಆರು ತಿಂಗಳಾದರೂ ಸರ್ಕಾರ ಯಾವ ಕೆಲಸವನ್ನೂ ತೆಗೆದುಕೊಂಡಿಲ್ಲ. ಸರ್ಕಾರದವರು ಈ ಕೂಡಲೆ ಕಂಬೈನ್ಡ್ ಬೆಡ್ ಹಾಸ್ಪಿಟಲ್‌ಅನ್ನು ಕಟ್ಟಿಸಿಕೊಡಬೇಕು. ಇದಕ್ಕೆ ಕೊಡಬೇಕಾದಂಥ ಕಾಂಟ್ರಿಬ್ಯೂಷನ್‌ನ್ನು ಮುನ್ಸಿಪಾಲಿಟಿಯವರು ಕೊಡುವುದು ಕಷ್ಟ. ಈ ದೃಷ್ಟಿಯಿಂದ ಸರ್ಕಾರದವರೇ ಇದನ್ನು ಕೊಡುವ ಪ್ರಯತ್ನ ಮಾಡಬೇಕೆಂದು ಹೇಳಿ ನನ್ನ ಭಾಷಣವನ್ನು ಮುಗಿಸುತ್ತೇನೆ.

## ಖಾಸಗಿ ಗೊತ್ತುವಳಿ ಮೇಲಿನ ಚರ್ಚೆ

### 22ನೇ ಮೇ 1976

**Sri P. M. Bangi (Jamkhandi)-** Sir, I beg to move:-

"This Assembly recommends to Government to constitute a separate Directorate for Handlooms in the State, as per the recommendations of the Shivaraman Committee with a view to implement the 20 point Economic Programme announced by the Prime Minister of India and the Director for Handlooms be vested with the powers of the Registrar under the Co-operative Societies Act".

**Mr. Deputy Speaker-** Resolution moved :-

"This Assembly recommends to Government to constitute a separate Directorate for Handlooms in the State, as per the recommendations of the Shivaraman Committee with a view to implement the 20-point Economic Programme announced by the Prime Minister of India and the Director for Handlooms be vested with the powers of the Registrar under the Co-operative Societies Act".

### ನೇಕಾರಿಕೆಯನ್ನು ಉದ್ಯಮವನ್ನಾಗಿ ಪರಿಗಣಿಸಬೇಕು:

ಶ್ರೀ ಪಿ. ಎಂ. ಬಾಂಗಿ– ಮಾನ್ಯ ಅಧ್ಯಕ್ಷರೇ, ನಾನು ಇವತ್ತಿನ ದಿವಸ ಈ ಗೊತ್ತುವಳಿಯನ್ನು ಸ್ವೀಕಾರ ಮಾಡುವುದಕ್ಕೋಸ್ಕರ ಈ ಸಭೆಯಲ್ಲಿ

ಮಂಡಿಸುತ್ತಿದ್ದೇನೆ. ಈ ರಾಜ್ಯದಲ್ಲಿ ಮೊದಲನಿಂದಲೂ ಕೇವಲ ಎರಡು ಉದ್ಯಮಗಳಿವೆ. ಅವು ಕೃಷಿ ಮತ್ತು ನೇಕಾರಿಕೆ. ನೇಯ್ಗೆ ಉದ್ಯೋಗ ನೆಚ್ಚಿನ ಪ್ರಧಾನ ಮಂತ್ರಿಗಳ 20 ಅಂಶಗಳ ಆರ್ಥಿಕ ಕಾರ್ಯಕ್ರಮದಲ್ಲಿ ಮುಖ್ಯವಾದ್ದು. ಕೇಂದ್ರ ಮತ್ತು ರಾಜ್ಯ ಸರ್ಕಾರದವರು 20 ಅಂಶಗಳ ಕಾರ್ಯಕ್ರಮವನ್ನು ಕಾರ್ಯಾಚರಣೆಯಲ್ಲಿ ತರುವುದಕ್ಕೆ ಬಹಳ ಪ್ರಯತ್ನ ಮಾಡುತ್ತಿದ್ದಾರೆ. ನೇಕಾರಿಕೆಯ ಬೆಳವಣಿಗೆ ಬಗ್ಗೆ ಸಂಪೂರ್ಣ ಅಭ್ಯಾಸ ಮಾಡಿ ವರದಿ ಕೊಡಲು ಕೇಂದ್ರ ಸರ್ಕಾರದವರು ಒಂದು ಹೈಪವರ ಸ್ಟಡಿ ಟೀಮ್‌ನ್ನು ಮಾಡಿ ಅದಕ್ಕೆ ಪ್ಲ್ಯಾನಿಂಗ್ ಕಮಿಷನ್ ಮೆಂಬರ್ ಬಿ. ಶಿವರಾಮನ್ ಅವರನ್ನು ನೇಮಕ ಮಾಡಿದ್ದರು. ಅವರು ತಮ್ಮ ರಿಪೋರ್ಟನ್ನು ದಿನಾಂಕ 2.7.1974 ರಂದು ಕೇಂದ್ರ ಸರ್ಕಾರಕ್ಕೆ ಕೊಟ್ಟಿದ್ದಾರೆ. ಅಖಂಡ ಹಿಂದೂಸ್ತಾನದಲ್ಲಿರತಕ್ಕ ನೇಕಾರಿಕೆ ಉದ್ದಿಮೆ ಅಭಿವೃದ್ಧಿಗೋಸ್ಕರ ಹ್ಯಾಂಡ್ಲೂಮ್ ಡೆವಲಪ್‌ಮೆಂಟ್ ಕಮೀಶನರ್ ನೇಮಕಮಾಡಿ ಅವರ ಕೆಳಗೆ ಒಂದು ಸೆಪರೇಟ್ ಡೈರೆಕ್ಟೊರೇಟ್ ಮಾಡಬೇಕೆಂದು ಶ್ರೀ ಬಿ. ಶಿವರಾಮನ್ ಅವರು ಶಿಫಾರಸು ಮಾಡಿದ್ದಾರೆ.

"There is at present no strong organization in the Ministry dealing with the problems of handlooms. The Textile Commissioner is also handling the problems of the organized sector and aided as he is by technical people who are experts in the organized textile sector, he is not able to pay that detailed attention which the handloom sector requires. The Team therefore recommends that a separate directorate may be created under a Development Commissioner for handlooms in the Ministry charged with the responsibility of dealing with handlooms alone. Unless this concentrated attention is paid in this sector, the Team feels that any large scale improvement in the handloom sector would not be possible. The Development Commissioner should be helped by technical personnel well versed in handloom technology".

## ನೇಕಾರಿಕೆಗಾಗಿ ಪ್ರತ್ಯೇಕ ನಿರ್ದೇಶನಾಲಯ ಮಾಡಬೇಕು :

ಅದೇ ಶಿವರಾಮನ್ ಸಮಿತಿಯವರು ಪ್ರತಿಯೊಂದು ರಾಜ್ಯದಲ್ಲಿ ಒಂದೊಂದು ಸ್ಟ್ರಕ್ಚರ್ ಇದೆಯೆಂದು ರಿಪೋರ್ಟಿನ 9ನೇ ಪುಟದಲ್ಲಿ ಹೇಳಿದ್ದಾರೆ.

"At the State level whereas, many State Governments have set up separate Directorates for Handloom Sector, some states continue to have Director of Industries or Registrar of Co-operative Societies being entrusted with the work connected with the Handloom sectors."

ಸಮಿತಿಯವರು ತಮ್ಮ ರಿಪೋರ್ಟ್‌ನಲ್ಲಿ ಯಾವ ಯಾವ ರಾಜ್ಯಗಳಲ್ಲಿ ಕೈಮಗ್ಗದ ಸಂಖ್ಯೆ ಹೆಚ್ಚಾಗಿದೆಯೋ ಅಂಥ ರಾಜ್ಯಗಳಲ್ಲಿ ಸೆಪರೇಟ್ ಡೈರೆಕ್ಟೊರೇಟ್ ರಚನೆ ಮಾಡಬೇಕೆಂದು ಸಲಹೆ ಮಾಡಿದ್ದಾರೆ. ನಮ್ಮ ರಾಜ್ಯದಲ್ಲಿ ಒಂದು ಲಕ್ಷ 37 ಸಾವಿರ ಮಗ್ಗಗಳಿವೆ. ಆಂಧ್ರ ಪ್ರದೇಶದಲ್ಲಿ 5 ಲಕ್ಷ 97 ಸಾವಿರ, ಕೇರಳದಲ್ಲಿ 71 ಸಾವಿರ, ತಮಿಳುನಾಡಿನಲ್ಲಿ 5 ಲಕ್ಷ ಮಗ್ಗಗಳು ಇವೆ. ತಮಿಳುನಾಡು, ಆಂಧ್ರ ಪ್ರದೇಶ, ಕೇರಳ ಈ ರಾಜ್ಯಗಳಲ್ಲಿ ಸ್ವತಂತ್ರ ಡೈರೆಕ್ಟೊರೇಟ್ ನೇಮಿಸಿ, ಅವರ ಮುಖಾಂತರ ಕೈಮಗ್ಗದ ಏಳಿಗೆಗೋಸ್ಕರ ಪ್ರಯತ್ನ ನಡೆದಿದೆ. ನಮ್ಮ ರಾಜ್ಯದಲ್ಲಿ ಸೆಪರೇಟ್ ಡೈರೆಕ್ಟೊರೇಟ್ ನೇಮಕ ಮಾಡುತ್ತೇವೆಂದು ನಮ್ಮ ಕೈಗಾರಿಕಾ ಮಂತ್ರಿಗಳು ಎರಡು ವರ್ಷದ ಹಿಂದೆ ಇದೇ ಶಾಸನ ಸಭೆಯಲ್ಲಿ ಆಶ್ವಾಸನೆ ಕೊಟ್ಟಿದ್ದರೂ ಇದುವರೆಗೆ ನೇಮಕವಾಗಲಿಲ್ಲ. 1974–75 ರ ನಮ್ಮ ಬಜೆಟ್ಟಿನಲ್ಲಿ 5 ಲಕ್ಷ ರೂಪಾಯಿಗಳನ್ನು ಸೆಪರೇಟ್ ಡೈರೆಕ್ಟೊರೇಟ್‌ಗಾಗಿ ಸೇರಿಸಿದ್ದರು ಕೂಡಾ ಅದನ್ನು ಉಪಯೋಗಿಸಲಿಲ್ಲ. ಆದುದರಿಂದ ಈ ಡೈರೆಕ್ಟೊರೇಟ್ ನೇಮಕ ಮಾಡಲು ಈ ಠರಾವಿನ ಮೂಲಕ ವಿನಂತಿಸಿಕೊಳ್ಳುತ್ತೇನೆ.

ಅಖಂಡ ಭಾರತದಲ್ಲಿ ಸುಮಾರು 35 ಲಕ್ಷ 63,308 ಕೈಮಗ್ಗಗಳು ಇವೆ. ಶಿವರಾಮನ್ ಸಮಿತಿಯ ಶಿಫಾರಸಿನ ಪ್ರಕಾರ ಇಡೀ ಭಾರತದಲ್ಲಿ

25 ಸಾವಿರ ಕೈಮಗ್ಗಗಳ ಬಗ್ಗೆ ಯೋಜನೆಗಳನ್ನು ತಯಾರಿಸಿದ್ದಾರೆ. ಯಾವ ರಾಜ್ಯದಲ್ಲಿ 10 ಸಾವಿರಕ್ಕಿಂತ ಹೆಚ್ಚು ಕೈಮಗ್ಗಗಳು ಇರುತ್ತವೆಯೋ ಆ ರಾಜ್ಯದಲ್ಲಿ ಒಂದೊಂದು ಯೂನಿಟ್ ಕೊಟ್ಟು ಅದರ ಖರ್ಚನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಸಮನಾಗಿ ಹಂಚಿಕೊಳ್ಳುವ ಯೋಜನೆಯಿದೆ. ಹಿಂದೂಸ್ತಾನದಲ್ಲಿ ಎಲ್ಲಕ್ಕೂ ಮೊಟ್ಟಮೊದಲು ಕರ್ನಾಟಕ ರಾಜ್ಯದ ಪರವಾಗಿ ಒಂದು ಯೋಜನೆಯನ್ನು ಕೇಂದ್ರ ಸರ್ಕಾರಕ್ಕೆ ಕಳಿಸಿಕೊಟ್ಟು, ರಬಕವಿ ಮತ್ತು ಬನಹಟ್ಟಿಯಲ್ಲಿ ಅದನ್ನು ತರಬೇಕೆಂದು ಪ್ರಯತ್ನ ಮಾಡಿದ್ದರಿಂದ ಕರ್ನಾಟಕ ಸರ್ಕಾರದ ಮನವಿ ಮೇರೆಗೆ ಕೇಂದ್ರ ಸರ್ಕಾರದವರು ಒಂದು ಲಕ್ಷ 85 ಸಾವಿರ ರೂಪಾಯಿಗಳನ್ನು 5 ವರ್ಷದಲ್ಲಿ ಕೊಡುತ್ತೇವೆಂದು ಆಶ್ವಾಸನೆ ಕೊಟ್ಟಿದ್ದು, ಆ ಪ್ರಕಾರ ಈಗಾಗಲೇ ಹಣವನ್ನು ರಿಲೀಸ್ ಮಾಡಿದ್ದಾರೆ. ರಬಕವಿ ಬನಹಟ್ಟಿಯಲ್ಲಿ ಹ್ಯಾಂಡ್ಲೂಮ್ ಡೆವೆಲಪ್‌ಮೆಂಟ್ ಕಾರ್ಪೋರೇಷನ್ ಪ್ರಾರಂಭವಾಗಿ ಒಂದು ಸಾವಿರ ಕೈಮಗ್ಗಗಳು ಚಾಲೂ ಆಗಿವೆ. 6 ಸಾವಿರ ಸೀರೆಗಳು ತಯಾರಾಗಿದ್ದು ಅವುಗಳ ವಿಕ್ರಿಯನ್ನು ಕಾರ್ಪೋರೇಷನ್ ಮುಖಾಂತರ ಸರ್ಕಾರ ನಡೆಸುತ್ತಿದೆ. ಇಳಕಲ್ಲ – ಗುಳೇದಗುಡ್ಡದಲ್ಲೂ ಈ ಕಾರ್ಪೋರೇಷನ್ ತನ್ನ ಸಿಬ್ಬಂದಿ ಕಳುಹಿಸಿ ಕೆಲವು ಮಗ್ಗಗಳನ್ನು ಮಾಸ್ಟರ್ ವೀವರ್‌ಗಳಿಂದ ಬೇರ್ಪಡಿಸಿ ನೇಕಾರರನ್ನು ಆ ಯೋಜನೆಯಲ್ಲಿ ತೆಗೆದುಕೊಂಡು ಅಲ್ಲಿ ಉತ್ಕೃಷ್ಟವಾದ ಪ್ರಸಿದ್ಧ ಸೀರೆಗಳನ್ನು ನೇಯಿಸುತ್ತಿದೆ.

ಕೈಮಗ್ಗ ಡೆವಲಪ್‌ಮೆಂಟ್ ಕಾರ್ಪೋರೇಷನ್ನಿಗೆ ರಾಜ್ಯ ಸರ್ಕಾರ ಒಂದು ಕೋಟಿ ರೂಪಾಯಿ ಷೇರು ಬಂಡವಾಳವನ್ನು ಕೊಟ್ಟಿದೆ. ಈ ಕಾರ್ಪೋರೇಷನ್ 03.10.1975 ರಂದು ನೋಂದ ಆಗಿದೆ. ಇದರಲ್ಲಿ ಡೈರೆಕ್ಟರುಗಳು ನೇಮಕವಾಗಿ ಇವತ್ತಿನ ದಿವಸ ರಾಜ್ಯದ ಬೇರೆ ಬೇರೆ ಕಡೆ ಕೆಲಸಗಳು ಪ್ರಾರಂಭವಾಗಿವೆ. ನಮ್ಮ ರಾಜ್ಯದಲ್ಲಿ ಕಾಟನ್ ಸೊಸೈಟಿಗಳು 532, ವೀವರ್ಸ್ ಸೊಸೈಟಿಗಳು 167 ಮತ್ತು ಸಿಲ್ಕ ವೀವರ್ಸ್ ಸೊಸೈಟಿಗಳು 88 ಇವೆ. ಪ್ರತ್ಯೇಕವಾಗಿ ಕೋಆಪರೇಟಿವ್ ಇಲಾಖೆ ಇದ್ದಾಗ್ಯೂ ಕೂಡ ಅವು ಸರಿಯಾಗಿ ಕೆಲಸ ಮಾಡುತ್ತಿಲ್ಲ. ಅದರಲ್ಲಿ ಎಷ್ಟೋ ಸೊಸೈಟಿಗಳು ಡಿಫಂಕ್ಟ್ ಆಗಿದ್ದರೂ ಲಿಕ್ವಿಡೇಶನ್ ಮಾಡಲಿಲ್ಲ. ಯಾವ ಸೊಸೈಟಿಗಳು ಉತ್ಕೃಷ್ಟವಾಗಿ ನಡೆಯುತ್ತವೆಯೋ ಅವುಗಳಿಗೆ ಹೆಚ್ಚಿನ ಫಂಡ್ಸ್ ಕೊಟ್ಟು ರಿವೈಟಲೈಸ್ ಮಾಡಬೇಕಾಗಿದೆ. ಈ ಸೊಸೈಟಿಗಳ ಮೇಲೆ

ಕೈಮಗ್ಗ ಡೆವಲಪ್‌ಮೆಂಟ್ ಕಾರ್ಪೋರೇಷನ್ನಿಗೆ ಯಾವ ಅಧಿಕಾರವೂ ಇಲ್ಲ. ಸೆಪರೇಟ್ ಡೈರೆಕ್ಟೊರೇಟ್ ಫಾರ್ ಹ್ಯಾಂಡ್ಲೂಮ್ ಮಾಡಿ, ಅದಕ್ಕೆ ಕೋಆಪರೇಟಿವ್ ಸೊಸೈಟಿಗಳ ರಿಜಿಸ್ಟ್ರಾರ್ ಅವರಿಗಿರುವ ಅಧಿಕಾರವನ್ನು ಕೊಟ್ಟರೆ ಮಾತ್ರ ಸಹಾಯ ಮಾಡಿದ್ದಕ್ಕೂ ಉಪಯೋಗವಾಗುವುದು. ನಾನು ತಮಿಳುನಾಡಿಗೆ ಹೋಗಿ, ಎಲ್ಲಾ ಮಾಹಿತಿ ತೆಗೆದುಕೊಂಡು ಬಂದಿದ್ದೇನೆ. ಅಲ್ಲಿ ನೇಯ್ಗೆ ಸೊಸೈಟಿಗಳು ಉತ್ಕೃಷ್ಟವಾಗಿ ನಡೆಯುವುದು ನಮ್ಮ ಗಮನಕ್ಕೆ ಬಂದಿದೆ. ಅದೇ ಪ್ರಕಾರ ಆಂಧ್ರ ಪ್ರದೇಶದಲ್ಲೂ ನೇಯ್ಗೆ ಸೊಸೈಟಿಗಳು ಚೆನ್ನಾಗಿ ಕೆಲಸ ಮಾಡುವುದು ನಮ್ಮ ಗಮನಕ್ಕೆ ಬಂದಿದೆ. ಅಲ್ಲಿನ ಸರ್ಕಾರದವರು ಡೈರೆಕ್ಟರ್ ಫಾರ್ ಹ್ಯಾಂಡ್ಲೂಮ್ಸ್ ಎಂದು ನೇಮಿಸಿ ಅವರಿಗೆ ಕೋಆಪರೇಟಿವ್ ಸೊಸೈಟಿಗಳ ರಜಿಸ್ಟ್ರಾರ್ ಅವರಿಗಿರುವ ಅಧಿಕಾರ ಕೊಟ್ಟಿದ್ದಾರೆ.

ಮಾನ್ಯ ಅಧ್ಯಕ್ಷರೇ, ನಮ್ಮ ರಾಜ್ಯದಲ್ಲಿ ಸೆಪರೇಟ್ ಡೈರೆಕ್ಟೊರೇಟ್ ನೇಮಿಸಬಾರದೆಂದು ಕೈಗಾರಿಕಾ ಇಲಾಖೆ ಅಧಿಕಾರಿಗಳು ವಾದ ಮಾಡುತ್ತಿದ್ದಾರೆ. ಅವರ ವಾದ ಸರಿಯಿಲ್ಲ. ಉದಾಹರಣೆಗೆ ಹೇಳಬೇಕು ಅಂದರೆ ಕೇರಳದಲ್ಲಿ ಕೇವಲ 70 ಸಾವಿರ ಕೈಮಗ್ಗಗಳಿದ್ದರೂ ಸ್ವತಂತ್ರ ಡೈರೆಕ್ಟರ್ ನೇಮಿಸಿ ಕೈಮಗ್ಗದ ಅಭಿವೃದ್ಧಿಗೋಸ್ಕರ ಸಾಕಷ್ಟು ಪ್ರಯತ್ನ ನಡೆಸಿದ್ದಾರೆ. ನಮ್ಮ ರಾಜ್ಯದಲ್ಲಿ ಒಟ್ಟು ಒಂದು ಲಕ್ಷದ ಮುವತ್ತೇಳು ಸಾವಿರ ಕೈಮಗ್ಗಗಳು ಇವೆ. ಈ ಕೈಮಗ್ಗಗಳು ಬೇರೆ ಬೇರೆ ರೀತಿಯಿಂದ ಸಹಾಯ ಪಡೆದು ನಡೆಯುತ್ತಿವೆ. ಕೆಲವು ಮಗ್ಗಗಳು ಕೋಆಪರೇಟಿವ್ ಸೆಕ್ಟರದಲ್ಲಿವೆ. ಇನ್ನು ಕೆಲವು ಮಗ್ಗಗಳು ಮಾಸ್ಟರ್ ವೀವರ್ಸ್ ಕೈಯಲ್ಲಿವೆ. ಕೆಲವು ಮಗ್ಗಗಳು ಡೀಲರ್ಸ್ ಮುಖಾಂತರ ನಡೆಯುತ್ತವೆ. ಇವೆಲ್ಲಾ ಮಗ್ಗಗಳಲ್ಲಿ ದುಡಿಯುವ ನೇಕಾರರನ್ನು ಬಾಂಡೆಡ್ ಲೇಬರ್ ಎನ್ನುವ ಪಾಶದಿಂದ ಮುಕ್ತಗೊಳಿಸಬೇಕು. ಅದಕ್ಕೆ ಸರ್ಕಾರದವರು ರಾಮಟೀರಿಯಲ್ಸ್ ಬ್ಯಾಂಕ್ ತೆಗೆದು ಅದರ ಮುಖಾಂತರ ನೇಕಾರರಿಗೆ ಹೆಚ್ಚು ಮಾಲು ಪೂರೈಸಲು ಏರ್ಪಾಡು ಮಾಡಬೇಕು. ಬೇರೆ ಬೇರೆ ಭಾಗದಲ್ಲಿ ಕೆಲಸ ಮಾಡತಕ್ಕ ನೇಕಾರರಿಗೆ ಬ್ಯಾಂಕಿನ ಮುಖಾಂತರ ಕಡಿಮೆ ಬಡ್ಡಿ ದರದಲ್ಲಿ ಸಾಲ ಕೊಡಿಸಿ ಸಹಾಯ ಮಾಡಬೇಕು ಮತ್ತು ಅವರು ಸಿದ್ಧಮಾಡಿದ ಅರಿವೆಗಳನ್ನು ಸರ್ಕಾರದವರು ತಮ್ಮ ಇಲಾಖೆ ಮುಖಾಂತರ ಮತ್ತು ಕಾರ್ಪೋರೇಷನ್ ಮುಖಾಂತರ ಕೊಂಡುಕೊಳ್ಳುವುದಕ್ಕೆ ಏರ್ಪಾಡು ಮಾಡಬೇಕು.

ನೇಕಾರರ ಅಭಿವೃದ್ಧಿಗೆ ಐದು ಹಂತಗಳಿವೆ. ಉತ್ಕೃಷ್ಟವಾಗಿ ಕೆಲಸ ಮಾಡುವವರು, ಪ್ರಾಮಾಣಿಕ ಮ್ಯಾನೇಜ್‌ಮೆಂಟ್, ಕಡಿಮೆ ದರದಲ್ಲಿ ಕಚ್ಚಾ ಮಾಲು ಪೂರೈಕೆ, ಬ್ಯಾಂಕ್ ಮುಖಾಂತರ ಧನ ಸಹಾಯ, ಸಿದ್ಧಪಡಿಸಿದ್ದನ್ನು ಮಾರಾಟ ಮಾಡುವುದು ಹೀಗೆ 5 ಹಂತಗಳಿವೆ. ಹ್ಯಾಂಡ್ಲೂಮ್ ಡೆವಲಪ್‌ಮೆಂಟ್ ಕಾರ್ಪೋರೇಷನ್‌ದವರು ಏನು ಒಂದು ಸಾವಿರ ಕೈಮಗ್ಗದ ಅಭಿವೃದ್ಧಿ ಯೋಜನೆ ಪ್ರಾರಂಭ ಮಾಡಿದ್ದಾರೆ ಅದರಲ್ಲಿ ಆ 5 ಹಂತಗಳನ್ನು ಕಾಣಬಹುದು. ಸರ್ಕಾರದವರ ಮ್ಯಾನೇಜ್‌ಮೆಂಟ್ ಸರಿಯಾಗಿದೆ. ನೇಕಾರರಿಗೆ ಕಚ್ಚಾ ಮಾಲು ಕೊಡುವ ವ್ಯವಸ್ಥೆಯಿದೆ. ಧನಸಹಾಯದ ಸಲುವಾಗಿ ಜಮಖಂಡಿಯ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಮುಖಾಂತರ ಪ್ರತಿ ನೇಕಾರನಿಗೆ ಪಾಸ್ ಪುಸ್ತಕ ಕೊಡಿಸಿದ್ದಾರೆ. ನೇಕಾರರು ನೇಯ್ದ ಸೀರೆಗಳನ್ನು ತೆಗೆದುಕೊಂಡು ವಿಕ್ರಿ ಮಾಡುವ ಹೊಣೆಗಾರಿಕೆ ಕಾರ್ಪೋರೇಷನ್ ಮೇಲಿದೆ. ಇದನ್ನು ನೋಡಿ ನೇಕಾರರು ಹೆಚ್ಚಿನ ಪ್ರಮಾಣದಲ್ಲಿ ನಮ್ಮ ಹ್ಯಾಂಡ್ಲೂಮ್ ಡೆವಲಪ್‌ಮೆಂಟ್ ಕಾರ್ಪೋರೇಷನ್‌ಗೆ ಬರಲಿಕ್ಕೆ ಸಿದ್ಧವಾಗಿದ್ದಾರೆ. ಅದೇ ಪ್ರಕಾರ ಎಕ್ಸ್‌ಪೋರ್ಟ ಓರಿಯೆಂಟೆಡ್ ಸಿಲ್ಕ್‌ಗೆ ಪ್ರೋತ್ಸಾಹ ಕೊಡಲು ಬೆಂಗಳೂರಲ್ಲಿ ಒಂದು ಕೇಂದ್ರವನ್ನು ತೆಗೆದು ರೇಷ್ಮೆ ಉತ್ಪಾದನೆ ಮಾಡುವ ಕೂಲಿಕಾರರಿಗೆ ಸಾಕಷ್ಟು ಸಹಾಯ ಮಾಡಿ, ಅವರಿಂದ ಬಟ್ಟೆ ತೆಗೆದುಕೊಂಡು, ಸೇಲ್ ಡಿಪೋ ಮುಖಾಂತರ ಹೊರ ದೇಶಕ್ಕೆ ರಫ್ತು ಮಾಡಲು ಪ್ರಯತ್ನ ನಡೆದಿದೆ.

ಹ್ಯಾಂಡ್ಲೂಮ್ ಡೆವಲಪ್‌ಮೆಂಟ್ ಕಾರ್ಪೋರೇಷನ್ ಎಷ್ಟೇ ಮಾಡಿದರು ಅದರ ಬಂಡವಾಳ ಕೇವಲ ಒಂದು ಕೋಟಿ ರೂಪಾಯಿ. ಈ ದೃಷ್ಟಿಯಿಂದ ಸೆಪರೇಟ್ ಡೈರೆಕ್ಟೊರೇಟ್ ಫಾರ್ ಹ್ಯಾಂಡ್ಲೂಮ್ ಅತ್ಯವಶ್ಯ ಇದೆ. ಈಗ ಶ್ರೀಮತಿ ಇಂದಿರಾ ಗಾಂಧಿ ಅವರು ಘೋಷಿಸಿದ ಇಪ್ಪತ್ತು ಅಂಶಗಳ ಕಾರ್ಯಕ್ರಮದಲ್ಲಿ ಇದು ಮಹತ್ವದ ಅಂಶ. ಈ ಅಂಶ ಲೇಬರ್ ಓರಿಯೆಂಟೆಡ್ ಇದ್ದ ಮೂಲಕ, ಹಳ್ಳಿಗಳಲ್ಲಿ ಸಣ್ಣ ಮಕ್ಕಳಿಗೂ, ಹೆಣ್ಣು ಮಕ್ಕಳಿಗೂ, ಪ್ರತಿಯೊಂದು ನೇಕಾರರ ಕುಟುಂಬಕ್ಕೂ ಇದರಿಂದ ಸಹಾಯವಾಗುತ್ತದೆ. ಇದರ ಮೇಲೆ ಸೂಪರವೈಸ್ ಮಾಡಲು ಸ್ವತಂತ್ರವಾದ ಸೆಪರೇಟ್ ಡೈರೊಕ್ಟೆರೇಟ್ ಅವಶ್ಯ ಇದೆ. ಸರ್ಕಾರ ಇದನ್ನು ಮಾಡಬೇಕು ಎಂದು ಒತ್ತಾಯ ಮಾಡಿ ಹೇಳುತ್ತೇನೆ.

ಶಿವರಾಮನ್ ಸಮಿತಿ ರಿಪೋರ್ಟದಲ್ಲಿ ಸ್ವತಂತ್ರವಾದ ಡೈರೆಕ್ಟೊರೇಟ್ ಫಾರ್ ಹ್ಯಾಂಡ್ಲೂಮ್ ಮಾಡಬೇಕೆಂದು ರಾಜ್ಯಸರ್ಕಾರಕ್ಕೆ ಸಲಹೆಯನ್ನು ಕೂಡಾ ಕೊಟ್ಟಿದ್ದಾರೆ. ಇದರಲ್ಲಿ ಪವರ್‌ಲೂಮ್ಸ್ ಸೇರಿಸಿಕೊಳ್ಳಬಾರದು ಎಂದು ಕೂಡಾ ಹೇಳಿದ್ದಾರೆ. ಶಿವರಾಮನ್ ಸಮಿತಿಯವರು ಏನು ಹೇಳಿದ್ದಾರೆ ಎಂದರೆ ಪವರ್‌ಲೂಮ್ಸ್‌ಗಳ ಮೇಲೆ ಕಂಟ್ರೋಲ್ ಇರಬೇಕು ಮತ್ತು ಪವರ್ ಲೂಮ್ಸ್‌ನವರು ವಿಶಿಷ್ಟವಾದಂಥ ಅರಿವೆಗಳನ್ನು ನೇಯಬಾರದು. ಅದನ್ನು ಕೇಂದ್ರ ಸರ್ಕಾರದವರು ಒಪ್ಪಿಕೊಂಡಿದ್ದಾರೆ. ಕರ್ನಾಟಕ ಹೈಕೋರ್ಟಿನವರು ಕೆಲವು ಪವರ್ ಲೂಮ್ಸ್‌ದವರ ರಿಟ್‌ಪಿಟೀಷನ್‌ದಲ್ಲಿ ತಡೆ ಆಜ್ಞೆ ಕೊಟ್ಟಿದ್ದಾರೆ. ಹೈಕೋರ್ಟಿನಲ್ಲಿ ಬನಹಟ್ಟಿ ನೇಕಾರರ ಸೊಸೈಟಿ ಬಗ್ಗೆ ಒಂದು ರಿಟ್ ಪೆಟಿಷನ್ ರಿಜೆಕ್ಟ್ ಆದ ಮೇಲೆ ಅವರು ಪುನಃ ಅಪೀಲು ಹಾಕಿದ ಮೇಲೆ ಅದನ್ನು ಬೇರೆ ಬೆಂಚ್‌ಗೆ ಹಾಕಿ ಸ್ಟೇ ಕೊಟ್ಟಿದ್ದಾರೆ. ಆ ರಿಟ್ ಪಿಟಿಷನ್ ದಾಖಲಾಗಿ ಒಂದು ವರ್ಷವಾದರು ಕೂಡಾ ಇನ್ನೂ ಹೀಯರಿಂಗಿಗೆ ಬಂದಿಲ್ಲ. ಮಾನ್ಯ ಮಂತ್ರಿಗಳು ಅದರ ಬಗ್ಗೆ ಕೂಡಲೇ ಗಮನ ಹರಿಸಿ ಕೂಡಲೇ ಹೀಯರಿಂಗ್ ನಡೆಸಿ, ತಡೆ ಆಜ್ಞೆ ಏನು ಕೊಟ್ಟಿದ್ದಾರೋ ಅದನ್ನು ರದ್ದು ಮಾಡಬೇಕೆಂದು ನಾನು ಈ ಸಂದರ್ಭದಲ್ಲಿ ಸೂಚಿಸಬಯಸುತ್ತೇನೆ. ಇದನ್ನು ಯಾವ ರೀತಿಯಿಂದ ವಿಚಾರ ಮಾಡಿದರೂ ಇದು ಫಂಡಾಮೆಂಟಲ್ ರೈಟ್ ವಿರುದ್ಧವಾಗಿದೆ. ಇದು ಸಂವಿಧಾನ ಪ್ರಕಾರ ಇರುವುದಿಲ್ಲ. ಒಂದು ವರ್ಷವಾದರೂ ಇದರ ಬಗ್ಗೆ ಇನ್ನೂ ಹೀಯರಿಂಗ್ ಬಂದಿಲ್ಲ. ಆದುದರಿಂದ ಸರ್ಕಾರದವರು ಸ್ಪೆಷಲ್ ಆಗಿ ಗಮನಹರಿಸಿ ತಮ್ಮ ಅಡ್ವೋಕೇಟ್ ಜನರಲ್ ಮುಖಾಂತರ ಈ ರಿಟ್ ಪಿಟಿಷನ್‌ಗಳು ಕೂಡಲೇ ಹೀಯರಿಂಗ್‌ಗೆ ಬರುವಂತೆ ಮಾಡಬೇಕು ಎಂದು ನಾನು ಸೂಚಿಸಬಯಸುತ್ತೇನೆ.

ಇನ್ನು ಈ ಕೈಮಗ್ಗದ ನೇಕಾರರ ಶಾಪವನ್ನು ವಿಮೋಚನೆ ಮಾಡಿ ಕೈಮಗ್ಗ ಕೈಗಾರಿಕೆ ಮತ್ತು ಬಡ ನೇಕಾರರನ್ನು ಉದ್ಧಾರ ಮಾಡಲು, ಶಿವರಾಮನ್ ಸಮಿತಿಯವರು ಏನು ಶಿಫಾರಸು ಮಾಡಿದ್ದಾರೆ ಆಪ್ರಕಾರ ಸ್ವತಂತ್ರವಾದ ಡೈರೊಕ್ಟರೇಟ್ ಮಾಡಿ ಕೋಆಪರೇಟಿವ್ ಸೊಸೈಟಿಗಗಳ ರಜಿಸ್ಟ್ರಾರ್‌ಗೆ ಇರುವ ಅಧಿಕಾರ ಕೊಡಬೇಕು. ಕೈಮಗ್ಗ ಕೈಗಾರಿಕೆ ಇಂಡಸ್ಟ್ರೀಸ್ ಡಿಪಾರ್ಟ್‌ಮೆಂಟಿನಲ್ಲೇ ಉಳಿದರೆ ಮುಳುಗಿ ಹೋಗುತ್ತದೆ. ಡಬ್ಬಲ್ ಕಂಟ್ರೋಲ್ ಆದರೆ ಇದರ

ನಿಯಂತ್ರಣ ಸರಿಯಾಗಿ ಮಾಡುವುದಕ್ಕಾಗುವುದಿಲ್ಲ. ನಮ್ಮ ರಾಜ್ಯದಲ್ಲಿ ಎಷ್ಟೋ ಸೊಸೈಟಿಗಳಲ್ಲಿ ಮಿಸ್ ಮ್ಯಾನೇಜ್‌ಮೆಂಟ್, ಮಿಸ್ ಅಪ್ರೋಪ್ರಿಯೇಷನ್ ನಡೆದಿವೆ. ಅಲ್ಲದೆ ಎಷ್ಟೋ ಸೊಸೈಟಿಗಳಲ್ಲಿ ಇನ್ನೂ ಆಡಿಟ್ ಆಗಿಲ್ಲ. 21 ಸಾವಿರ ಸೊಸೈಟಿಗಳು ನಮ್ಮ ರಾಜ್ಯದಲಿದ್ದು ಎಲ್ಲಾ ಸೊಸೈಟಿಗಳ ಆಡಿಟ್ ಮಾಡುವುದು ಕೋಆಪರೇಟೀವ್ ಡಿಪಾರ್ಟ್‌ಮೆಂಟಿಗೆ ಶಕ್ಯವಾಗುವುದಿಲ್ಲ. ಆದುದರಿಂದ ನಮ್ಮ ನೇಕಾರರಿಗೆ ಸಹಾಯ ಮಾಡುವ ದೃಷ್ಟಿಯಿಂದ ಸೆಪರೇಟ್ ಡೈರಕ್ಟರೇಟ್ ಮಾಡಬೇಕು. ಇದರ ಮೇಲ್ವಿಚಾರಣೆಗೆ ಸರ್ಕಾರದವರು ಕೋಆಪರೇಟೀವ್ ಸೊಸೈಟಿಗಳ ರಜಿಸ್ಟ್ರಾರ್ ಅವರಿಗೆ ಇರುವ ಅಧಿಕಾರವನ್ನು ಈ ಡೈರೆಕ್ಟರ್ ಆಫ್ ಹ್ಯಾಂಡ್‌ಲೂಮ್ಸ್ ಅವರಿಗೆ ಕೊಟ್ಟರೆ ಆಡಿಟಿಂಗ್ ಕೂಡ ಚೆನ್ನಾಗಿ ನಡೆಯುತ್ತದೆ ಎಂದು ನಾನು ಈ ಸಂದರ್ಭದಲ್ಲಿ ಸೂಚಿಸಬಯಸುತ್ತೇನೆ.

ಇನ್ನು ತಮಿಳುನಾಡು, ಆಂಧ್ರ ಪ್ರದೇಶ, ಕೇರಳ ಈ ರಾಜ್ಯಗಳಲ್ಲಿ ಈ ಬಗ್ಗೆ ಒಂದು ಸೆಪರೇಟ್ ಡೈರೆಕ್ಟೋರೇಟ್ ಮಾಡಿದ್ದಾರೆ. ಹೀಗೆ ಮಾಡಿರುವುದರಿಂದ ಅಲ್ಲಿರತಕ್ಕಂಥಾ ಕೋ ಆಪರೇಟೀವ್ ಸೊಸೈಟಿಗಳು ನಮಗಿಂತಲೂ ಉತ್ತಮವಾಗಿ ಕೆಲಸ ಮಾಡುತ್ತಿವೆ. ಇದನ್ನು ನಾನು ಮತ್ತು ಸ್ಮಾಲ್-ಸ್ಕೇಲ್ ಇಂಡಸ್ಟ್ರೀಸ್ ಮಂತ್ರಿಗಳಾದ ಶ್ರೀ ವೀರಪ್ಪ ಮೊಯಿಲಿ ಅವರು ಪ್ರತ್ಯಕ್ಷವಾಗಿ ಹೋಗಿ ನೋಡಿದ್ದೇವೆ. ತಮಿಳುನಾಡು ಸರ್ಕಾರದವರು ಇದಕ್ಕೇನೆ ಒಬ್ಬರು ಮಂತ್ರಿಗಳನ್ನು ನೇಮಿಸಿದ್ದಾರೆ. ಮಿನಿಸ್ಟರ್ ಫಾರ್ ಹ್ಯಾಂಡ್ಲೂಮ್ಸ್, ಟೆಕ್ಸ್‌ಟೈಲ್ಸ್ ಅಂಡ್ ಪವರ್‌ಲೂಮ್ಸ್ ಅಂತ ಒಬ್ಬರು ಮಂತ್ರಿಗಳನ್ನು ನೇಮಿಸಿ, ಅವರಿಗೇನೆ ಸ್ವತಂತ್ರವಾದ ಪೋರ್ಟ್‌ಫೋಲಿಓ ಕೊಟ್ಟಿದ್ದಾರೆ. ಈ ಪ್ರಕಾರ ಡೈರೆಕ್ಟರ್‌ಗೆ ಮತ್ತು ಮಂತ್ರಿಗಳಿಗೆ ಸ್ವತಂತ್ರವಾದ ಜವಾಬ್ದಾರಿ ಇರುವುದರಿಂದ ಅವರು ಪ್ರತಿ ಜಿಲ್ಲೆಗೂ ಹೋಗಿ ಕೈಮಗ್ಗವನ್ನು ಯಾವ ರೀತಿ ಸುಧಾರಣೆ ಮಾಡಬೇಕು, ನೇಕಾರರಿಗೆ ಹೇಗೆ ಸಹಾಯ ಮಾಡಬೇಕು, ಅವರಿಗೆ ಯಾವ ಪ್ರೋತ್ಸಾಹ ಕೊಡಬೇಕು ಇದನ್ನೆಲ್ಲಾ ನೋಡುತ್ತಿದ್ದಾರೆ. ಇಷ್ಟೇ ಅಲ್ಲದೆ ತಮಿಳುನಾಡು ಸರ್ಕಾರ ನೌಕರರಿಗೆ ಕೈಮಗ್ಗದ ಬಟ್ಟೆಗಳನ್ನು ತರಿಸಿಕೊಟ್ಟು ಆ ಮುಖಾಂತರ ದುಡಿಯುವ ನೇಕಾರರಿಗೆ ಅನುಕೂಲ ಮಾಡಿದ್ದಾರೆ. ಇವೆಲ್ಲಾ ಪ್ರೋತ್ಸಾಹಗಳಿಂದ ಅಲ್ಲಿರತಕ್ಕಂಥ ನೇಕಾರರ ಪ್ರೈಮರಿ ಸೊಸೈಟಿಗಳು ಚೆನ್ನಾಗಿವೆ. ಅಲ್ಲಿ ಪರಿಣಿತರು ಕೂಡಾ ಇರುವುದರಿಂದ ಬಟ್ಟೆಗಳ ಕ್ವಾಲಿಟಿಯನ್ನೂ ಕಂಟ್ರೋಲ್ ಮಾಡುತ್ತಾರೆ.

ಅದೇ ರೀತಿ ಆಂಧ್ರ ಪ್ರದೇಶದಲ್ಲೂ ಮಿನಿಸ್ಟರ್ ಫಾರ್ ಹ್ಯಾಂಡ್ಲೂಮ್ಸ್ ಅಂತ ನೇಮಕ ಮಾಡಿ ಅವರ ಮುಖಾಂತರ ಕೈಮಗ್ಗದ ಅಭಿವೃದ್ಧಿಗೆ ಗಮನಕೊಟ್ಟಿದ್ದಾರೆ. ಅಲ್ಲಿ 6 ಲಕ್ಷ ಕೈಮಗ್ಗಗಳು ಇವೆ. ಅಲ್ಲಿನ ಡೈರೆಕ್ಟೋರೇಟ್ ಉತ್ತಮ ಕೆಲಸ ಮಾಡುತ್ತಿದೆ. ಕ್ವಾಲಿಟಿ ಕಂಟ್ರೋಲ್ ಮಾಡಿ ಉತ್ಕೃಷ್ಟ ಕೈಮಗ್ಗ ಬಟ್ಟೆ ತಯಾರಿಸಿ ಹೊರ ರಾಷ್ಟ್ರಕ್ಕು ಕೂಡಾ ರಫ್ತು ಮಾಡುತ್ತಾ ಇರುವುದು ಕಂಡುಬಂದಿದೆ. ಅವರು ತಯಾರಿಸಿದ ಕೈಮಗ್ಗ ಬಟ್ಟೆ ನಮ್ಮ ರಾಷ್ಟ್ರಕ್ಕೆ ಸಪ್ಲೈ ಆಗುವುದಲ್ಲದೆ ಬೇರೆ ದೇಶಕ್ಕೂ ರಫ್ತು ಆಗುತ್ತಿದೆ.

ಇನ್ನು ಎಮ್ಮಿಗನೂರ್ ಸೊಸೈಟಿ ಬಗ್ಗೆ ಹೇಳುವುದಾದರೆ ಇದು ಅಖಂಡ ಭಾರತಕ್ಕೇ ಒಂದು ಮಾದರಿ ಸೊಸೈಟಿಯಾಗಿದೆ. ಈ ಸೊಸೈಟಿಯನ್ನು ಕಟ್ಟಿರುವವರು ಸೋಮಪ್ಪ ಅನ್ನುವವರು. ಅವರು ನೇಕಾರರಿಗೆ ತಮ್ಮ ಪ್ರೈಮರಿ ಸೊಸೈಟಿ ಮುಖಾಂತರ ವಸತಿ ಸೌಕರ್ಯ ಮಾಡಿಕೊಟ್ಟಿದ್ದಾರೆ. ಶಾಲೆಗಳನ್ನು ಕಟ್ಟಿಸಿದ್ದಾರೆ. ಇನ್ನೂ ಅನೇಕ ಸೌಕರ್ಯಗಳನ್ನು ಮಾಡಿಸಿಕೊಟ್ಟಿದ್ದಾರೆ. ಆ ಸೊಸೈಟಿಯಲ್ಲಿ ಡೈಯಿಂಗ್, ಪ್ರಿಂಟಿಂಗ್, ವೀವಿಂಗ್ ಹೀಗೆ ಬೇರೆ ಬೇರೆ ಸೆಕ್ಟರ್‌ಗಳಿವೆ. ಅವರು ಕೈಮಗ್ಗ ಬಟ್ಟೆ, ಗಿರಣಿ ಬಟ್ಟೆ ಮತ್ತು ಇನ್ನೂ ಬೆಲೆ ಬಾಳುವ ಬಟ್ಟೆಗಳನ್ನು ಉತ್ಪಾದನೆ ಮಾಡಿ ಪರರಾಷ್ಟ್ರಗಳಿಗೂ ರಫ್ತುಮಾಡಲು ಹೊರಟಿದ್ದಾರೆ. ಇದಕ್ಕೆ ಹೋಲಿಸಿದರೆ, ನಮ್ಮ ರಾಷ್ಟ್ರದಲ್ಲಿರುವ ಅಪೆಕ್ಸ್ ಕಾಟನ್ ಸೊಸೈಟಿ, ಅಪೆಕ್ಸ್ ಉಲನ್ ಸೊಸೈಟಿ, ಅಪೆಕ್ಸ್ ಸಿಲ್ಕ್ ಸೊಸೈಟಿ ಈ ಮೂರೂ ಸೊಸೈಟಿಗಳ ಕೆಲಸ ಅಷ್ಟು ಚೆನ್ನಾಗಿ ನಡೆಯುತ್ತಾ ಇಲ್ಲ. ಈ ಬನಹಟ್ಟಿ ಸೊಸೈಟಿಯಲ್ಲಿ ಒಬ್ಬರೂ ಸರಿಯಾಗಿ ಕೆಲಸ ಮಾಡುವುದು ಕಂಡುಬರುತ್ತಾ ಇಲ್ಲ. ಅಲ್ಲಿ ಪ್ರತಿ ತಿಂಗಳೂ 2ನೇ ತಾರೀಖು ಸಂಬಳ ಕೊಡುತ್ತಾರೆ ವಿನಹಾ ಆ ಸೊಸೈಟಿಯಲ್ಲಿ ಯಾವ ಚಟುವಟಿಕೆಗಳೂ ಇದ್ದ ಹಾಗೆ ಕಾಣುವುದಿಲ್ಲ. ಆದುದರಿಂದ ಸರ್ಕಾರದವರು ಇದರ ಬಗ್ಗೆ ಸಪರೇಟ್ ಡೈರೆಕ್ಟೋರೇಟ್ ಫಾರ್ ಹ್ಯಾಂಡ್ಲೂಮ್ಸ್ ಅಂತ ಮಾಡಿ ಅದರ ಡೈರೆಕ್ಟರ್‌ಗೆ ಕೋಆಪರೇಟಿವ್ ಸೊಸೈಟಿಗಳ ರಿಜಿಸ್ಟ್ರಾರ್‌ಗೆ ಏನು ಅಧಿಕಾರ ಇದೆಯೋ ಆ ಅಧಿಕಾರವನ್ನು ಕೊಟ್ಟರೆ ಈ ಸೊಸೈಟಿಗಳಲ್ಲಿನ ಅಕ್ರಮಗಳು ಏನು ಇವೆ ಅವನ್ನು ಕಂಡು ಹಿಡಿದು ಹತೋಟಿಯಲ್ಲಿ ಇಟ್ಟುಕೊಳ್ಳುವುದಕ್ಕೆ ಅನುಕೂಲವಾಗುತ್ತದೆ. ಈ ಸೊಸೈಟಿಗಳು ಈಗ ಇಂಡಸ್ಟ್ರೀಸ್ ಡಿಪಾರ್ಟ್‌ಮೆಂಟಿಗೆ ಸೇರಿವೆ. ಈ ಡಿಪಾರ್ಟ್‌ಮೆಂಟಿನವರು

ಈ ಸೊಸೈಟಿಗಳಿಗೆ ಸಹಾಯ ಮಾಡಲು ಅಪ್ಲಿಕೇಷನ್ ಕರೆದು ಲೋನ್ಸ್ ಕೊಡುತ್ತಿದ್ದಾರೆ. ಅಷ್ಟೇ ಅಲ್ಲದೆ ಬಟ್ಟೆಗೆ ರಿಬೇಟ್, ಅಕ್ಟ್ರಾಯಿ ವಿನಾಯಿತಿ ಎಂದು ಇನ್ನೂ ಬೇರೆ ಬೇರೆ ಸಹಾಯ ಮಾಡುತ್ತಿದ್ದಾರೆ. ಇಷ್ಟೆಲ್ಲಾ ಉತ್ತೇಜನವನ್ನು ರಾಜ್ಯ ಸರ್ಕಾರದವರು ನೇಕಾರರಿಗೆ ಸಹಾಯ ಮಾಡುವ ದೃಷ್ಟಿಯಿಂದ ಕೊಡುತ್ತಿದ್ದಾರೆ. ಆದರೆ ಈ ಸೊಸೈಟಿಗಳನ್ನು ಸರಿಯಾಗಿ ಕಂಟ್ರೋಲ್‌ನಲ್ಲಿ ಇಟ್ಟುಕೊಂಡಿಲ್ಲ. ಇವುಗಳ ಚಟುವಟಿಕೆ ಸರಿಯಾಗಿ ನಡೆಯದೇ ಇರುವುದರಿಂದ ನೇಕಾರರಿಗೆ ಏನೂ ಅನುಕೂಲವಾಗುವುದಿಲ್ಲ. ಆದುದರಿಂದ ಸಪರೇಟ್ ಡೈರೆಕ್ಟೋರೇಟ್ ಜೊತೆಗೆ ಯೋಗ್ಯ ಅಧಿಕಾರ ಕೊಟ್ಟರೆ ಸರಿಹೋಗುತ್ತದೆ ಎಂದು ನಾನು ಈ ಸಂದರ್ಭದಲ್ಲಿ ಸೂಚಿಸುತ್ತೇನೆ. ಮಾನ್ಯ ಮಂತ್ರಿಗಳು ಇದರ ಬಗ್ಗೆ ಪ್ರತಿಯೊಂದು ಜಿಲ್ಲೆಯಿಂದ ಅಂಕಿಸಂಖ್ಯೆಗಳನ್ನು ತರಿಸಿ ನೋಡಬೇಕು. ರಾಜ್ಯದಲ್ಲಿರುವ 21 ಸಾವಿರ ಸೊಸೈಟಿಗಳ ಮೇಲ್ವಿಚಾರಣೆ ಮಾಡುವುದು ರಿಜಿಸ್ಟ್ರಾರ್ ಆಫ್ ಕೋಆಪರೇಟಿವ್ ಸೊಸೈಟೀಸ್ ಇವರೊಬ್ಬರಿಂದ ಶಕ್ಯ ಇರುವುದಿಲ್ಲ. ಆದುದರಿಂದ ಹ್ಯಾಂಡ್ಲೂಮ್ಸ್‌ಗಾಗಿ ಸೆಪರೇಟ್ ಡೈರೆಕ್ಟೋರೇಟ್ ಮಾಡಿ ಅದರ ಜೊತೆಗೆ ಪರಿಣಿತರ ಸಿಬ್ಬಂದಿಯನ್ನು ಕೊಟ್ಟರೆ ಮಾತ್ರ ಅಕ್ರಮಗಳನ್ನು ಹತೋಟಿಗೆ ತರಲು ಮತ್ತು ಕ್ವಾಲಿಟಿ ಕಂಟ್ರೋಲ್ ಮಾಡಲು ಶಕ್ಯವಾಗುತ್ತದೆ. ಇಲ್ಲದೇ ಹೋದರೆ ಕೈಮಗ್ಗ ಬಟ್ಟೆಗಳ ಬಗ್ಗೆ ಜನರಲ್ಲಿ ಅನಾದರ ಹುಟ್ಟುತ್ತದೆ ಮತ್ತು ಯಾರೂ ಈ ಬಟ್ಟೆಗಳನ್ನು ಕೊಳ್ಳುವುದಕ್ಕೆ ಬರುವುದಿಲ್ಲ. ಆದಕಾರಣ ಒಳ್ಳೆಯ ಪರಿಣಿತರಾದವರನ್ನು ಡೈರಕ್ಟರನ್ನಾಗಿ ನೇಮಕ ಮಾಡಬೇಕಾಗುತ್ತದೆ. ಈ ಬಟ್ಟೆಗಳನ್ನು ಚೆನ್ನಾಗಿ ನೇಯುವ ಬಗ್ಗೆ ಆಸಕ್ತಿ ಇರುವವರಿಗೆ ಮತ್ತು ನೇಕಾರರ ಮಕ್ಕಳಿಗೆ ಟ್ರೇನಿಂಗ್ ಕೊಡುವುದಕ್ಕೂ ವ್ಯವಸ್ಥೆ ಮಾಡಬೇಕಾಗುತ್ತದೆ. ಈಗ ಎಮ್ಮಿಗನೂರು ಸೊಸೈಟಿಯವರು ಎಷ್ಟು ಜನರಿಗೆ ಬೇಕಾದರೂ ವಿವಿಧ ಬಟ್ಟೆಗಳನ್ನು ನೇಯುವ ಟ್ರೇನಿಂಗ್ ಕೊಡುವುದಕ್ಕೆ ತಯಾರಿದ್ದಾರೆ ಮತ್ತು ಕೇವಲ 3 ತಿಂಗಳಿನಲ್ಲಿ ಕಲಿಸಿಕೊಟ್ಟು ಇದರಲ್ಲಿ ಒಳ್ಳೆಯ ಪರಿಣಿತರನ್ನಾಗಿ ಮಾಡಿ ಕಳುಹಿಸುತ್ತೇವೆಂದು ಅವರು ಹೇಳಿರುವುದರಿಂದ, ನಮ್ಮ ಕಾರ್ಪೋರೇಷನ್‌ದವರು ಬನಹಟ್ಟಿಯಿಂದ ಹತ್ತು ಜನ ವಿದ್ಯಾರ್ಥಿಗಳನ್ನು ಮತ್ತು ಇಳಕಲ್ಲಿನಿಂದ ಹತ್ತು ಜನ ವಿದ್ಯಾರ್ಥಿಗಳನ್ನು ಅಲ್ಲಿಗೆ ಕಳುಹಿಸಿಕೊಡಲು ನಿರ್ಣಯ ಮಾಡಿದ್ದಾರೆ. ಅದೇ ರೀತಿ ರಾಜ್ಯದ ಎಲ್ಲಾ ಭಾಗಗಳಿಂದ ನೇಕಾರರ ಮಕ್ಕಳನ್ನು ಅಲ್ಲಿಗೆ ಕಳುಹಿಸಿ ಟ್ರೇನಿಂಗ್ ಕೊಡಿಸಿ ಪರಿಣಿತರನ್ನಾಗಿ ಮಾಡಿದರೆ ಮಾತ್ರ ಕೈಮಗ್ಗದ ಈ ಕೈಗಾರಿಕೆಯನ್ನು ಅಭಿವೃದ್ಧಿಪಡಿಸಲು ಮತ್ತು ನಮ್ಮಲ್ಲಿ

ತಯಾರಾದಂಥ ಕೈಮಗ್ಗ ಬಟ್ಟೆಗಳನ್ನು ಪರರಾಷ್ಟ್ರಕ್ಕೆ ಕಳುಹಿಸಿಕೊಡುವುದಕ್ಕೆ ಶಕ್ಯವಾಗುತ್ತದೆ. ಈ ರೀತಿ ಸರ್ಕಾರದವರು ಈ ಕ್ಷೇತ್ರಕ್ಕೆ ಪ್ರೋತ್ಸಾಹ ಕೊಟ್ಟಿದ್ದೇ ಆದರೆ ಹಳ್ಳಿಗಳಲ್ಲಿರುವ ಬಡ ನೇಕಾರರು ಬದುಕುತ್ತಾರೆ. ಆದಕಾರಣ ಮಾನ್ಯ ಮಂತ್ರಿಗಳು ಈ ನನ್ನ ನಿರ್ಣಯವನ್ನು ಒಪ್ಪಿಕೊಂಡು ಈ ನಿರ್ಣಯದಲ್ಲಿ ಹೇಳಿರುವ ಪ್ರಕಾರ ಇದಕ್ಕೆ ಒಂದು ಪ್ರತ್ಯೇಕವಾದ ಡೈರೊಕ್ಟರೇಟನ್ನು ರಚನೆ ಮಾಡಬೇಕಲ್ಲದೆ, ಸಹಕಾರೀ ಸಂಘಗಳ ಶಾಸನದ ಮೇರೆಗೆ ರಿಜಿಸ್ಟ್ರಾರರಿಗಿರುವ ಅಧಿಕಾರವನ್ನು ಇವರಿಗೆ ಕೊಡಬೇಕೆಂದು ಕೇಳಿಕೊಳ್ಳುತ್ತೇನೆ. ಈ ಪ್ರಕಾರವಾಗಿ ಇದನ್ನು ಅತಿ ಜಾಗ್ರತೆಯಾಗಿ ಕಾರ್ಯಾಚರಣೆಯಲ್ಲಿ ತರಬೇಕೆಂದು ಮಾನ್ಯ ಮಂತ್ರಿಗಳಲ್ಲಿ ನಮ್ರವಾಗಿ ಕೇಳಿಕೊಳ್ಳುತ್ತೇನೆ ಮತ್ತು ಸ್ವಲ್ಪ ಹೆಚ್ಚು ಕಾಲ ಮಾತನಾಡಲು ಅವಕಾಶಕೊಟ್ಟ ಅಧ್ಯಕ್ಷರಿಗೆ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

## ಸಹಕಾರ ಕಾಯ್ದೆ ತಿದ್ದುಪಡಿ ಮಸೂದೆ ಮೇಲಿನ ಚರ್ಚೆ

### 4ನೇ ನವೆಂಬರ್ 1976

**ಶ್ರೀ ಪಿ. ಎಂ. ಬಾಂಗಿ (ಜಮಖಂಡಿ)**– ಮಾನ್ಯ ಅಧ್ಯಕ್ಷರೇ, ಸಹಕಾರ ಮಂತ್ರಿಗಳು ಇವತ್ತು ತಂದಿರತಕ್ಕ ತಿದ್ದುಪಡಿಗೆ ನಾನು ಸಂಪೂರ್ಣ ಬೆಂಬಲ ಕೊಡುತ್ತೇನೆ. ಈ ತಿದ್ದುಪಡಿಯಿಂದ ಸಣ್ಣಪುಟ್ಟ ಸೇವಾ ಸಹಕಾರ ಸಂಘಗಳ ರಿಆರ್ಗನೈಜ್ ಆಗಲಿದೆ. ಅವುಗಳ ಮುಖಾಂತರ ಹಳ್ಳಿಗಳ ಎಲ್ಲ ಜನರಿಗೆ ಸೌಕರ್ಯ ಸಿಗಲಿದೆ. ನಮ್ಮ ರಾಜ್ಯದಲ್ಲಿ ಈಗಾಗಲೇ ಡೆಟ್ ರಿಲೀಫ್ ಆ್ಯಕ್ಟ್ ಪಾಸ್ ಆಗಿದೆ. ಆದ್ದರಿಂದ ದುರ್ಬಲ ವರ್ಗದ ಸಾಲಗಾರರು ಸಾಲದ ಹಣವನ್ನು ಮರಳಿ ಕೊಡಬೇಕಾಗಿಲ್ಲ. ಇದರ ಪರಿಣಾಮ ಏನಾಗಿದೆಯೆಂದರೆ, ವೀಕರ್ ಸೆಕ್ಷನ್ಸ್‌ದವರಿಗೆ ಅದರಲ್ಲಿಯೂ ಕಡುಬಡವರಿಗೆ ಯಾರೂ ಸಾಲ ಕೊಡಲಾರದ ಪರಿಸ್ಥಿತಿ ಇದೆ. ಸೇವಾ ಸಹಕಾರ ಸಂಘಗಳ ಮೂಲಕ ಈ ಬಡ ಜನರಿಗೆ ಸಾಲ ಸಿಗುವ ವ್ಯವಸ್ಥೆ ಮಾಡಬೇಕೆಂದು ನಾನು ಮನಃಪೂರ್ವಕವಾಗಿ ಅರಿಕೆಮಾಡುತ್ತೇನೆ.

ಇನ್ನು ಎರಡನೆಯ ವಿಷಯ. ನಮ್ಮ ರಾಜ್ಯದಲ್ಲಿ ನೇಕಾರರ ಸಹಕಾರ ಸಂಘಗಳು 749 ಇವೆ. ಕೆಲವು ಡಿಫಂಕ್ಟ್ ಇದ್ದರೆ, ಇನ್ನೂ

ಇಡೀ ರಾತ್ರಿ ಸರತಿ ಪ್ರಕಾರ ಸೋರುವ ನೀರನ್ನು ಪಾತ್ರೆಯಲ್ಲಿ ಹಿಡಿದು ಹೊರಗೆ ಹಾಕುತ್ತಿದ್ದ ಘಟನೆ ನನಗಿನ್ನೂ ನೆನಪಿದೆ.

ನಮ್ಮ ತಂದೆಯವರು ಸಂಸ್ಥಾನದ ಮುಖ್ಯಮಂತ್ರಿಯಾಗಿದ್ದಾಗ ನಾಗರಿಕರಿಗೆ ರೇಶನ್ ಅಂಗಡಿಗಳ ಮೂಲಕ ಕಾಳುಕಡಿ ಹಂಚುತ್ತಿದ್ದರು. ಈ ರೇಶನ್ ತರಲು ತಮ್ಮ ಕೈಯಲ್ಲಿ ಕೆಲಸ ಮಾಡುವ ಸಂಸ್ಥಾನದ ನೌಕರನಿಂದ ಎಂದೂ ತರಿಸಿಕೊಳ್ಳಲಿಲ್ಲ. ನನ್ನ ಅಣ್ಣ (ದಾದಾ) ಪಾಳಿ ಹಚ್ಚಿ ರೇಶನ್ ತರುತ್ತಿದ್ದ. ನಮ್ಮ ಮನೆಯ ಎದುರಿನ ಲಿಂಗಪ್ಪ ಫತ್ತರಕಿ ಇವರ ಮುಖಾಂತರ ತಿಳಿದುಕೊಂಡ ಸದರಿ ಘಟನೆಯನ್ನು ಸ್ಥಳೀಯ ಓಲೆಮಠದ ಸ್ವಾಮಿಗಳು ಹಲವಾರು ಸಲ ತಮ್ಮ ಪ್ರವಚನದ ಸಂದರ್ಭದಲ್ಲಿ ಹೇಳುತ್ತಿದ್ದುದನ್ನು ನಾನು ಕೇಳಿಕೊಂಡಿದ್ದೇನೆ.

ನಮ್ಮ ತಂದೆಯವರ ಬಗ್ಗೆ ಬರೆಯುವುದು ಬಹಳ ಕಠಿಣ. ಯಾಕೆಂದರೆ ಅವರು ತಮ್ಮ ಜೀವನದಲ್ಲಿ ಅನ್ಯಾಯದ ವಿರುದ್ಧ ನಿರಂತರ ಹೋರಾಡಿದವರು. ಕೈಮಗ್ಗಗಳ ಉಳಿವಿಗಾಗಿ ಪಾವರಲೂಮಗಳ ಮೇಲೆ ಬಣ್ಣದ ಬಟ್ಟೆ ನೇಯುವದಕ್ಕೆ ನಿರ್ಬಂಧ ವಿಧಿಸಿದ ಕಾನೂನನ್ನು ಆಚರಣೆಗೆ ತರಲು ನಡೆಸಿದ ಹೋರಾಟದಲ್ಲಿ ಜೀವದ ಬೆದರಿಕೆ ಬಂದರೂ ಸಹ ಬಡ ಕೈಮಗ್ಗ ನೇಕಾರರ ಪರವಾಗಿ ನಿಂತರೇ ಹೊರತು, ಎಂದೂ ಸಾಹುಕಾರರಾದ ಪಾವರಲೂಮ ಮಾಲಿಕರೊಂದಿಗೆ ರಾಜೀ ಮಾಡಿಕೊಳ್ಳಲಿಲ್ಲ.

ನಮ್ಮ ತಂದೆಯ ಜೀವನ ತೆರೆದ ಪುಸ್ತಕದಂತಿದ್ದಿತು. ಅವರೊಬ್ಬ ಪ್ರಾಮಾಣಿಕ ಹಾಗೂ ದಿಟ್ಟ ಮನೋಭಾವದ ವ್ಯಕ್ತಿತ್ವದವರು. ಸ್ವಾತಂತ್ರ್ಯಪೂರ್ವದಲ್ಲಿಯ ಜಮಖಂಡಿ ಸಂಸ್ಥಾನದ ಮುಖ್ಯಮಂತ್ರಿಗಳಾಗಿ, ಸ್ವಾತಂತ್ರ್ಯ ನಂತರದ ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ಆಡಳಿತ ಪಕ್ಷದ ಶಾಸಕರಾಗಿ ಹಾಗೂ ಹಲವಾರು ಸಂಘಸಂಸ್ಥೆಗಳಲ್ಲಿ ವಿವಿಧ ಹುದ್ದೆಗಳಲ್ಲಿ ಗುರುತಿಸಿಕೊಂಡರೂ ಸಹ ಅವರ ರಾಜಕೀಯ ಹಾಗೂ ಸಾಮಾಜಿಕ ಬದುಕಿನಲ್ಲಿ ಪಾರದರ್ಶಕ ನಡತೆಯೊಂದಿಗೆ ಹಲವಾರು ತ್ಯಾಗಮಯ ಘಟನೆಗಳಿಗೆ ನಾನು ಸಾಕ್ಷಿಯಾಗಿದ್ದುದರಿಂದ ಈ ಲೇಖನದೊಂದಿಗೆ ಕೆಲ ಘಟನೆಗಳನ್ನು ನೆನಪಿಸಿಕೊಳ್ಳುತ್ತಿದ್ದೇನೆ.

ರಾಜಕೀಯ ಜೀವನದ ಸೋಲಿನಲ್ಲಿ, ಗೆಲುವನ್ನು ಕಂಡವರಾಗಿದ್ದರು. ಹಲವಾರು ಸಲ ಚುನಾವಣೆಗಳಲ್ಲಿ ಸೋಲುವುದಾಗಿ ಖಚಿತವಿದ್ದರೂ ಸಹ, ಪ್ರಜಾಪ್ರಭುತ್ವ ಯಶಸ್ವಿಯಾಗಬೇಕಾದರೆ ಚುನಾವಣೆ ಎದುರಿಸಲೇಬೇಕೆಂದು ಹೇಳುತ್ತಿದ್ದರು.

1972ರಲ್ಲಿ ಅವರ ವಕೀಲಿ ಕಾಯಕದಿಂದ ವಿಪುಲ ಆದಾಯವಿದ್ದರೂ ಸಹ ಇಂದಿರಾ ಕಾಂಗ್ರೆಸ್ಸಿನ ಉಮೇದುವಾರರಾಗಿ ನಿಂತು ತಾರೀಕು 11.03.1972 ರಂದು ಜಮಖಂಡಿ ಮತಕ್ಷೇತ್ರದಿಂದ ರಾಜ್ಯ ವಿಧಾನಸಭೆ ಪ್ರವೇಶಿಸಿದರು. ಆಗ ಅವರಿಗೆ ಪ್ರತಿ ತಿಂಗಳಿಗೆ ಪಗಾರ ಕೇವಲ ರೂ. 250/– ಹಾಗೂ ಭತ್ತಾ ರೂ.150/– ಹೀಗೆ ಒಟ್ಟು ರೂ. 400/– ಪಡೆದುಕೊಳ್ಳುತ್ತಿದ್ದರು. ಅಧಿವೇಶನವಿದ್ದಾಗ ಮಾತ್ರ ಸ್ವಲ್ಪ ಹೆಚ್ಚಿಗೆ ಭತ್ತಾ ಸಿಗುತ್ತಿತ್ತು. ಶಾಸಕರಾಗಿದ್ದುಕೊಂಡು ವಕೀಲಿ ವೃತ್ತಿ ಮುಂದುವರಿಸಿ ಮನೆತನದ ಆದಾಯ ಹೆಚ್ಚಿಸಿಕೊಳ್ಳಬಹುದಾಗಿದ್ದಿತು. ಈ ರೀತಿ ರಾಜ್ಯದ ಹಲವಾರು ಶಾಸಕರು ವಕೀಲಿ ವೃತ್ತಿಯನ್ನು ನಡೆಸಿದ ಉದಾಹರಣೆಗಳೂ ಸಹ ಇದ್ದವು. ಒಂದು ವೇಳೆ ವಕೀಲಿ ವೃತ್ತಿಯಲ್ಲಿ ತೊಡಗಿದ್ದಲ್ಲಿ ತಾಲೂಕಿನ ಜನರ ಸೇವೆ ಮಾಡಲು ಸಾಧ್ಯವಿಲ್ಲ. ಹೀಗಾಗಿ ತಾಲೂಕಿನ ಜನತೆಗೆ ಅನ್ಯಾಯ ಮಾಡಿದಂತಾಗುತ್ತದೆಯೆಂದು ಅವರು ಶಾಸಕ ಅವಧಿಯಲ್ಲಿ ವಕೀಲಿ ವೃತ್ತಿ ಕಡೆಗೆ ಹೊರಳಿ ನೋಡಲಿಲ್ಲ.

ತಾಲೂಕಿನ ಸಮಸ್ಯೆಗಳ ಒಗ್ಗೆ ಸರಕಾರದ ಗಮನ ಸೆಳೆಯಲು ವಿಧಾನಸಭೆಯಲ್ಲಿ ಪ್ರಶ್ನೆ ಕೇಳಲು ಹಾಗೂ ಪ್ರಶ್ನೆಗಳಿಗೆ ಉಪ–ಪ್ರಶ್ನೆಗಳನ್ನು ಕೇಳಲು ಹಾಗೂ ಕಾನೂನುಗಳಿಗೆ ತಿದ್ದುಪಡಿ ತರಲು ಸರಕಾರಕ್ಕೆ ಸೂಚಿಸಲು ಹಾಗೂ ಬಜೆಟ್ ಮೇಲೆ ಚರ್ಚೆಯ ಭಾಷಣ ಸಿದ್ಧತೆ ಮಾಡಲು ನಿರಂತರ ಅಭ್ಯಾಸ ಮಡುತ್ತಿದ್ದರು. ಆಗ ಶಾಸಕರ ಭವನದಲ್ಲಿ ಇಬ್ಬರು ಶಾಸಕರಿಗೆ ಕೂಡಿ ಒಂದು ಖೋಲಿ ಕೊಡುತ್ತಿದ್ದರು. ಹಿರೇಕೆರೂರ ಶಾಸಕರಾದ ಬಿ.ಜಿ. ಬಣಕಾರ (ನಂತರ ಮಂತ್ರಿ ಹಾಗೂ ವಿಧಾನಸಭೆಯ ಸಭಾಧ್ಯಕ್ಷರಾಗಿದ್ದರು) ಅವರು ಇವರೊಂದಿಗೆ ಖೋಲಿಯಲ್ಲಿ ಇರುತ್ತಿದ್ದರು. ನಮ್ಮ ತಂದೆಯವರನ್ನು ಭೇಟಿಯಾಗಲು ಜಮಖಂಡಿ ಕ್ಷೇತ್ರದ ಜನರು ಖೋಲಿಗೆ ಬಂದು ವಿಚಾರಿಸಿದರೆ, ಅವರೊಬ್ಬ ಶಾಸಕನ ರೂಪದಲ್ಲಿ, ಒಬ್ಬ ಶಿಸ್ತಿನ ವಿದ್ಯಾರ್ಥಿಯಂತೆ ಕಾಯ್ದೆ

ಕಾನೂನುಗಳ ಬಗ್ಗೆ ಅಭ್ಯಾಸ ಮಾಡಲು ವಿಧಾನ ಸಭೆಯ ಲೈಬ್ರರಿಯಲ್ಲಿಯೇ ಸಿಗುತ್ತಾರೆ, ಅಲ್ಲಿಗೇ ಹೋಗಿ ಅಂತಾ ಹೇಳಿ ಕಳುಹಿಸುತ್ತಿದ್ದರು.

ನಮ್ಮ ತಂದೆಯವರಿಗೆ ಬಡ ಕೈಮಗ್ಗ ನೇಕಾರರ ಬಗ್ಗೆ ಹೆಚ್ಚಿನ ಆಸಕ್ತಿ ಇದ್ದದ್ದನ್ನು ಗಮನಿಸಿ ಆಗಿನ ಮುಖ್ಯಮಂತ್ರಿ ದೇವರಾಜ ಅರಸು ಅವರು ನಮ್ಮ ತಂದೆಯವರನ್ನು ರಾಜ್ಯ ಕೈಮಗ್ಗ ಸಲಹಾ ಸಮಿತಿಗೆ ಅಧ್ಯಕ್ಷರನ್ನಾಗಿ ನೇಮಿಸಿದರು ಹಾಗೂ ಅಖಿಲ ಭಾರತ ಕೈಮಗ್ಗ ಬೋರ್ಡಿಗೆ ಸದಸ್ಯರಂತಾ ರಾಜ್ಯದ ಪ್ರತಿನಿಧಿ ಅಂತಾ ನಾಮಕರಣ ಮಾಡಿ ಕಳುಹಿಸಿದರು. ಅಧಿಕಾರ ಶಾಶ್ವತ ಅಲ್ಲ. ಅಧಿಕಾರ ಇದ್ದಾಗ ಮಾಡುವ ಕೆಲಸ ಶಾಶ್ವತವಾಗಿರಬೇಕು ಎಂಬುದನ್ನು ಅವರು ಮೇಲಿಂದ ಮೇಲೆ ಅಧಿಕಾರಿಗಳಿಗೆ ಹಾಗೂ ಜನಪ್ರತಿನಿಧಿಗಳಿಗೆ ಹೇಳುತ್ತಿದ್ದರು.

ಸ್ವಾತಂತ್ರ್ಯ ನಂತರ ಭಾರತ ಸರಕಾರವು ದೇಶದ ಜವಳಿ ಉದ್ಯಮವನ್ನು ಸುಧಾರಿಸುವುದಕ್ಕೆ 1948ರ ಸ್ಟ್ಯಾಂಡಿಗ್ ಕಮಿಟಿ ಆಫ್ ಕಾಟೇಜ್ ಬೋರ್ಡ್‌ನ 1973ರ ಶಿವರಾಮನ್ ಹೈಪಾವರ್ ಕಮಿಟಿವರೆಗಿನ ಐದು ವರದಿಗಳನ್ನು ಕೇಂದ್ರದಿಂದ ತರಿಸಿಕೊಂಡು ವಿವರವಾಗಿ ಅಭ್ಯಸಿಸಿದರು. ತಮಗೆ ಬಂದ ಅವಕಾಶದ ಸದುಪಯೋಗಪಡಿಸಿಕೊಂಡು ಕೇಂದ್ರ ಹಾಗೂ ರಾಜ್ಯ ಸರಕಾರದ ಮೇಲೆ ತಮ್ಮ ಪ್ರಭಾವ ಬೀರಿ ತೀವ್ರ ಕೈಮಗ್ಗ ಯೋಜನೆಯ ಕೇಂದ್ರವನ್ನು, ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ (ಕೆ.ಎಚ್.ಡಿ.ಸಿ) ಮುಖಾಂತರ ಜಮಖಂಡಿ ತಾಲೂಕಿನ ಬನಹಟ್ಟಿಯಲ್ಲಿ ಸ್ಥಾಪಿಸಿದ್ದರಿಂದ ಈ ಕೇಂದ್ರವು ರಾಷ್ಟ್ರದಲ್ಲಿಯೇ ಪ್ರಪ್ರಥಮ ಕೇಂದ್ರವೆಂದು ಹೆಗ್ಗಳಿಕೆಗೆ ಪಾತ್ರವಾಯಿತು.

ರಾಜ್ಯಾದ್ಯಂತ ನೇಕಾರ ಜನವಸತಿ ಇದ್ದಲ್ಲಿ ಹಲವಾರು ಕೇಂದ್ರಗಳು ಹಾಗೂ ಉಪಕೇಂದ್ರಗಳು ಸ್ಥಾಪನೆಗೊಂಡವು. ಹೀಗಾಗಿ ಜೀತದಾಳಿಯಂತೆ ಬಡತನ ರೇಖೆಗಿಂತಲೂ ಕೆಳಗೆ ಜೀವಿಸುತ್ತಿದ್ದ ನಾಡಿನ ಸಹಸ್ರಾರು ಬಡ ಕೈಮಗ್ಗ ನೇಕಾರ ಕುಟುಂಬಗಳಿಗೆ ಆಸರೆಯಾಗಿ ಕರ್ನಾಟಕದಲ್ಲಿ ನಶಿಸುತ್ತಿದ್ದ ಕೈಮಗ್ಗ ನೇಕಾರಿಕೆ ಕಲೆಗೆ ಜೀವ ದೊರಕಿದಂತಾಯಿತು. ಅಲ್ಪ ಬಂಡವಾಳದಲ್ಲಿ

ಇಡೀ ಬಡ ಕುಟುಂಬಕ್ಕೆ ಕೆಲಸಕೊಟ್ಟಂತಾಗಿ ರಾಜ್ಯಕ್ಕೆ ಲಕ್ಷಾವಧಿ ರೂಪಾಯಿಯ ಆದಾಯ ಬರುವಂತಾಯಿತು.

ಈಗಿನ ಶಾಸಕರಿಗಿದ್ದ ಸವಲತ್ತುಗಳು ಆಗ ಇರಲಿಲ್ಲ. ಆಗ ಇಷ್ಟು ಕಡಿಮೆ ಆದಾಯದಲ್ಲಿ ಮನೆ ನಡೆಸುವುದು ಕಠಿಣವಾಗಿದ್ದಿತು. ಶಾಸಕ ಹುದ್ದೆಯಿಂದ ಬಂದ ಅಲ್ಪ ಆದಾಯದಲ್ಲಿಯೇ ಮನೆಯನ್ನು ನಡೆಸಿಕೊಂಡು ಹೋಗುವ ಕಠಿಣ ಪರಿಸ್ಥಿತಿಯನ್ನು ಅವರು ನಮ್ಮ ಅವ್ವನೊಂದಿಗೆ ಎದುರಿಸಬೇಕಾಯಿತು. ಅಧಿಕಾರ ದುರುಪಯೋಗಪಡಿಸಿಕೊಂಡು ಹಣ ಸಂಪಾದನೆ ಮಾಡಿಕೊಳ್ಳಬಹುದಿತ್ತು.

ದಿಲ್ಲಿಯಲ್ಲಿಯ ರಾಷ್ಟ್ರಮಟ್ಟದ ಪಟ್ಟಣ ಸಹಕಾರಿ ಬ್ಯಾಂಕುಗಳ ಮಹಾಮಂಡಳ ರಚಿಸುವ ಹಿನ್ನಲೆಯಲ್ಲಿ ಕೂಡಿದ ಸಂಸ್ಥಾಪಕ ಸದಸ್ಯರ ಸಭೆಗೆ ನಮ್ಮ ಜಮಖಂಡಿ ಅರ್ಬನ್ ಬ್ಯಾಂಕಿನ ಅಧ್ಯಕ್ಷನಾಗಿ ನಾನು ಭಾಗವಹಿಸಲು ಹೋಗಿ ಬಂದಾಗ ಕರ್ನಾಟಕ ಸಹಕಾರಿ ಸಂಘಗಳ ಕಾನೂನಿನ ನಿಯಮಾವಳಿ ಪ್ರಕಾರ ಪಡೆದುಕೊಳ್ಳಲು ಅರ್ಹವಾದ ಪ್ರವಾಸ ಭತ್ಯೆಯನ್ನು ಪಡೆದುಕೊಂಡಿದ್ದು ಹಾಗೂ ಅದು ಬ್ಯಾಂಕಿನ ಬೋರ್ಡನಲ್ಲಿ ಮಂಜೂರಾಗಿದ್ದರೂ ಸಹ ಇದನ್ನೇ ಪ್ರಮುಖವಾಗಿ ಮುಂದುಮಾಡಿ ನನ್ನ ಮೇಲೆ ಅವಿಶ್ವಾಸ ಗೊತ್ತುವಳಿ ಮಂಡಿಸಿದರು. ಆಗ ನನ್ನ ಪರಿಸ್ಥಿತಿ ಚಕ್ರವ್ಯೂಹದಲ್ಲಿ ಸಿಲುಕಿಕೊಂಡಂತಾಗಿದ್ದಿತು. ನನ್ನ ಮಗ ನಿಜವಾಗಿಯೂ ತಪ್ಪು ಮಾಡಿದ್ದಲ್ಲಿ ಅವನನ್ನು ಗಲ್ಲಿಗೇರಿಸಿ ಎಂದು ನಮ್ಮ ತಂದೆಯವರು ತಮ್ಮ ಪವಿತ್ರವಾದ ಶಾಸಕ ಹುದ್ದೆಗೆ ಕಳಂಕ ಬರಬಾರದೆಂದು ಈ ಪ್ರಕರಣದಲ್ಲಿ ಭಾಗಿಯಾಗಲಿಲ್ಲ. ನಿಷ್ಪಕ್ಷಪಾತ ತನಿಖೆ ನಡೆದು ನಿಜ ಸಂಗತಿ ಹೊರಬೀಳಬೇಕಾದರೆ ನಾನು ನನ್ನ ಅಧಿಕಾರ ಸ್ಥಾನದಲ್ಲಿ ಉಳಿಯುವುದು ಸರಿಯಲ್ಲ ಎಂಬುದು ನಮ್ಮ ತಂದೆಯವರ ಅಭಿಪ್ರಾಯವಾಗಿದ್ದಿತು. ನಾನು ಪ್ರಾಮಾಣಿಕನೆಂದು ನನ್ನ ಅಂತರಾತ್ಮ ಹೇಳುತ್ತಿದ್ದರೂ ಸಹ ನಾನು ನಿರಪರಾಧಿಯಾಗಿ ಸಿದ್ಧಪಡಿಸಲು ಅಧಿಕಾರದಲ್ಲಿ ಉಳಿಯಬಾರದೆಂದು ರಾಜಿನಾಮೆ ಕೊಟ್ಟು ಪ್ರತಿವಾದಿಗಳಿಗೆ ಆರೋಪ ಸಿದ್ಧಮಾಡಲು ನೋಟೀಸು ಕೊಟ್ಟೆನು. ತನಿಖೆಯಿಂದ ನಾನು ನಿರಪರಾಧಿ ಎಂಬುದು ಸಾಬೀತಾಯಿತು. ಈ ವಿಷಯಕ್ಕೆ ಸಂಬಂಧಿಸಿದ ಬೆಳವಣಿಗೆ ಇಲ್ಲಿ ಅಪ್ರಸ್ತುತ.

ರಾಜಕೀಯ ಕ್ಷೇತ್ರ ವಂಶಪಾರಂಪರಿಕವಾಗಬಾರದೆಂದು ನಮ್ಮ ತಂದೆಯವರ ಅಭಿಪ್ರಾಯ. ಹೀಗಾಗಿ ನನ್ನನ್ನಾಗಲೀ ಅಥವಾ ನಮ್ಮ ಸಂಬಂಧಿಕರನ್ನಾಗಲೀ ತಮ್ಮ ಶಾಸಕರ ಅವಧಿಯಲ್ಲಿ ರಾಜಕೀಯವಾಗಿ ಬಿಂಬಿಸಲು ಅವರು ಒಪ್ಪಿಕೊಳ್ಳಲಿಲ್ಲ. ರಾಜಕೀಯ ಇದು ವ್ಯಾಪಾರಿ ಕ್ಷೇತ್ರವಲ್ಲ, ಇದು ಜನರ ಸೇವೆ ಮಾಡುವ ಕ್ಷೇತ್ರ, ಸಾರ್ವಜನಿಕ ಕ್ಷೇತ್ರದಲ್ಲಿ ಪ್ರಾಮಾಣಿಕ ಸೇವೆ ಮಾಡಿ ವ್ಯಕ್ತಿಗೆ ಸಾರ್ವಜನಿಕರೇ ರಾಜಕೀಯ ಅಧಿಕಾರ ನೀಡುತ್ತಾರೆ ಎಂಬುದು ಅವರ ನಿಲುವು.

ಧಾರ್ಮಿಕ ಕ್ಷೇತ್ರದಲ್ಲಿಯೂ ಸಹ ಅವರ ನುಡಿ ಸಮಾಜ ಮುಖಿಯಾಗಿರುತ್ತಿದ್ದವು. ಕಾವಿ ಹಾಕಿದ ಯಾವುದೇ ವ್ಯಕ್ತಿಯು ತಪ್ಪು ಮಾಡಿದಾಗ– ಸ್ವಾಮೀ ನೀ ತಪ್ಪು ಮಾಡೀ– ಅಂತಾ ನಿಖರವಾಗಿ ಹೇಳುವ ಗಣಾಚಾರಿ ಎದೆಗಾರಿಕೆ ಹೊಂದಿದವರಾಗಿದ್ದರು.

ಅವರು ಸಂಸ್ಕೃತ ಭಾಷೆಯ ಮೇಲೆ ಸಹ ಪಾಂಡಿತ್ಯ ಹೊಂದಿದ್ದರು. ಜಮಖಂಡಿ ಸಮೀಪದ ಹುಲ್ಯಾಳ ಗುಡ್ಡದಲ್ಲಿಯ ಯೋಗಾಶ್ರಮದ ಶ್ರೀ ಶಂಭುಲಿಂಗ ಸ್ವಾಮಿಗಳೊಂದಿಗೆ ಸಂಸ್ಕೃತ ಭಾಷೆಯಲ್ಲಿಯೇ ಸಂಭಾಷಣೆ ಮಾಡುತ್ತಿದ್ದರು. ಕೋರ್ಟನ ಆರ್ಗ್ಯುಮೆಂಟಗಳಲ್ಲಿ ಹಾಗೂ ಸಾರ್ವಜನಿಕ ವೇದಿಕೆಯ ಮೇಲೆ ಸಂದರ್ಭ ಬಂದಾಗಲೆಲ್ಲ ಸಂಸ್ಕೃತ ಸುಭಾಷಿತಗಳ ಉದಾಹರಣೆಗಳನ್ನು ನಿರ್ಗಳವಾಗಿ ನೀಡುತ್ತಿದ್ದರು. ಸಂಸ್ಕೃತ ಕಲಿತರೂ ಸಹ ವೈದಿಕ ಪರಂಪರೆಗೆ ಮಾರು ಹೋಗದೆ, ಶರಣ ತತ್ವದಲ್ಲಿ ಅಪಾರ ನಂಬಿಕೆ ಹೊಂದಿದವರಾಗಿದ್ದರು.

ಶ್ರಾವಣ ತಿಂಗಳಲ್ಲಿ, ಬಸವ ಜಯಂತಿ ಸಂದರ್ಭಗಳಲ್ಲಿ ನಾಡಿನ ವಿದ್ವಾಂಸರನ್ನು, ಸ್ವಾಮಿಗಳನ್ನು ಕರೆಯಿಸಿ ಜನತೆಗೆ ಆಧ್ಯಾತ್ಮದ ರಸದೌತಣ ನೀಡಿಸುತ್ತಿದ್ದರು. 1934ರಲ್ಲಿ ಬಸವೇಶ್ವರ ಕ್ಲಬ್ ಸ್ಥಾಪನೆ ಹಾಗು ಬಸವೇಶ್ವರ ಅಷ್ಟಶತಮಾನೋತ್ಸವ ಸಂದರ್ಭದಲ್ಲಿ ಬಸವ ಸಮಿತಿ ಸ್ಥಾಪಿಸಿದ್ದಲ್ಲದೇ ಜಮಖಂಡಿಯಲ್ಲಿ ನಿರಂತರ ಬಸವ ತತ್ತ್ವ ಚಿಂತನೆ ನಡೆಯಬೇಕೆಂದು ಬಸವ ಭವನವನ್ನು ಕಟ್ಟಿದರು.

ಶಾಸಕ ಅವಧಿ ಮುಗಿದ ನಂತರ ಮತ್ತೆ ತಮ್ಮ ವಕೀಲಿ ವೃತ್ತಿ ಪ್ರಾರಂಭಿಸಿದರು. ತಮ್ಮ ಕೈಯಲ್ಲಿ ಕಲಿತ ಎಷ್ಟೋ ಕಿರಿಯ ವಕೀಲರು ನಂತರ ಕರ್ನಾಟಕ ಹಾಗೂ ಮಹಾರಾಷ್ಟ್ರ ರಾಜ್ಯದಲ್ಲಿ ನ್ಯಾಯಾಂಗ ಇಲಾಖೆಯಲ್ಲಿ, ಸಾಮಾಜಿಕ ಕ್ಷೇತ್ರದಲ್ಲಿ, ರಾಜಕೀಯ ಕ್ಷೇತ್ರದಲ್ಲಿ ಉನ್ನತ ಹುದ್ದೆಯಲ್ಲಿದ್ದರೂ ಸಹ ಎಂದೂ ಇಂಥವರ ಗುರು ನಾನು ಅಂತಾ ಹೇಳಿಕೊಳ್ಳುತ್ತಿರಲಿಲ್ಲ.

ದಿನಾಲೂ ಸಂಜೆ ತಮ್ಮ ಆಫೀಸಿನ ಕಸ ತಾವೇ ಗೂಡಿಸುತ್ತಿದ್ದರು. ಯಾವುದೇ ಕೆಲಸವು ಕಡಿಮೆಯಿಲ್ಲವೆಂದು ಹೇಳುತ್ತಿದ್ದರು. ವಾರಕ್ಕೆ ಒಮ್ಮೆಯಾದರೂ ತೋಟಕ್ಕೆ ಹೋದಾಗ ಸಮಯದ ಅನುಕೂಲತೆ ನೋಡಿ ಕಸ ತೆಗೆಯುವುದು, ದನದ ಕಾಲಲ್ಲಿಯ ಹೆಂಡಿಯನ್ನು ತೆಗೆಯುವುದೂ ಸಹ ಮಾಡುತ್ತಿದ್ದರು. ತೋಟಕ್ಕೆ ಹೋಗಲು ಬಾಡಿಗೆ ಸೈಕಲ್ ತೆಗೆದುಕೊಂಡು ಹೋಗುತ್ತಿದ್ದರು. ಒಮ್ಮೆ ಮಳೆಗಾಲವಿದ್ದಿತು ನಮ್ಮ ಅವ್ವ ಮಳೆ ಬರುತ್ತದೆ ಹೋಗಬೇಡಿ ಅಂತಾ ಹೇಳಿದರೂ ಸಹ ಒಂದು ತಾಸಿನಲ್ಲಿಯೇ ಬರುತ್ತೇನೆ ಅಂತ ನಡೆದುಬಿಟ್ಟರು. ಬರುವಾಗ ಒಮ್ಮೆಲೇ ಮಳೆ ಜೋರಾಗಿ ಸುರವಾಯಿತು. ರಸ್ತೆಯ ಬದಿಯ ಮರದ ಕೆಳಗೆ ಆಶ್ರಯ ಪಡೆದರೂ ಅರಿವೆಗಳೆಲ್ಲವೂ ನೆನೆದವು. ಅವರ ಟೋಪಿ (ಒಳಗಡೆ ರಟ್ಟನ್ನಿಟ್ಟು ಹೊಲೆದಿರುವ ಟೊಪ್ಪಿಗೆ) ಯೂ ಸಹ ನೆನೆದು ಹಾಳಾಗಿದ್ದಿತು. ಮನೆಗೆ ಹೋಗುವಾಗ ಹೊಸ ಟೊಪ್ಪಿಗೆ ಖರೀದಿಸಿಕೊಂಡೆ ಮನೆ ತಲುಪಿದರು. ಮಳೆಗಾಲವಿದ್ದರೂ ಸಹ ತೋಟಕ್ಕೆ ಹೋಗುವುದನ್ನು ಬಿಡುತ್ತಿರಲಿಲ್ಲ.

ಅನ್ಯಾಯ, ಸುಳ್ಳು, ಕಪಟತನ ಕಂಡಾಗ ಕೂಡಲೆ ಸಿಟ್ಟಿಗೇಳುತ್ತಿದ್ದರು. ಹೀಗಾಗಿ ಇತರರು ನಮ್ಮ ತಂದೆಯು ಸಿಟ್ಟಿನ ಸ್ವಾಬಾವದ ವ್ಯಕ್ತಿಯೆಂದೆ ಗುರುತಿಸುತ್ತಿದ್ದರು. ಬಡ ಪಕ್ಷಿಗಾರರ ನೋವನ್ನು ಅರಿತು ಅವರ ಖಟ್ಲೆಯನ್ನು ಪುಕ್ಕಟೆಯಾಗಿ ನಡೆಸಿ, ಗೆದ್ದು, ಅವರಿಗೆ ತಮ್ಮ ಕಿಸೆಯಿಂದ ರೊಕ್ಕಾ ಕೊಟ್ಟು ದೇವರಿಗೆ ಪ್ರಸಾದ ಹಂಚು ಅಂತಾ ಹೇಳಿ ಕಳುಹಿಸುತ್ತಿದ್ದರು. ಅಂಥ ಬಡವರ ನೋವನ್ನು ಕಂಡು ಕೈಲಾದ ಮಟ್ಟಿಗೆ ಸಹಾಯವನ್ನೂ ಸಹ ಮಾಡುತ್ತಿದ್ದರು. ಅಂತಹ ಪಕ್ಷಗಾರರು ನಿಗದಿತ ತಾರೀಕಿನ ದಿವಸ ಬಂದಾಗ ನಮ್ಮ ಮನೆಯಲ್ಲಿ ಅವರನ್ನು ಊಟ ಮಾಡಿಸಲು ನಮ್ಮ ಅವ್ವನೂ ಸಹ ಮರೆಯುತ್ತಿದ್ದಿಲ್ಲ. ನಮ್ಮ

ತಂದೆಯವರ ಹೂವಿನಂತಹ ಸ್ವಭಾವ ಅರಿತಿದ್ದ ಜನರು ಇವರನ್ನು ದೇವರಂತೆ ಕಾಣುತ್ತಿದ್ದರು. ಈ ಭಾಗದ ಕೈಮಗ್ಗ ನೇಕಾರರು ನಮ್ಮ ತಂದೆಯವರನ್ನು ತಮ್ಮನ್ನು ಉದ್ಧಾರಮಾಡಲು ಬಂದ ದೇವರೆಂದು ಭಾವಿಸಿ ಈಗಲೂ ಅವರ ಫೋಟೊ ಪೂಜಿಸುತ್ತಿದ್ದಾರೆ. ಬಡತನ ರೇಖೆಗಿಂತಲೂ ಕೆಳಗೆ ಜೀವಿಸುತ್ತಿರುವ ಕೈಮಗ್ಗ ನೇಕಾರರೆಲ್ಲರೂ ಕೂಡಿ ಸರಕಾರದ ನೆರವಿಲ್ಲದೇ ನಮ್ಮ ತಂದೆಯವರ ಮೂರ್ತಿಯನ್ನು ಬನಹಟ್ಟಿಯ ನೇಕಾರ ಕಾಲನಿಯ ಮುಂದೆ ಸ್ಥಾಪಿಸಿದ್ದಲ್ಲದೆ ನೇಕಾರ ವಸತಿ ಪ್ರದೇಶಕ್ಕೆ ಪಿ.ಎಂ. ಬಾಂಗಿ ನಗರವೆಂದು ನಾಮಕರಣ ಮಾಡಿ ಅವರ ಜನ್ಮ ಶತಮಾನೋತ್ಸವವನ್ನು 2003ರಲ್ಲಿ ಬಿಜಾಪೂರ ಜ್ಞಾನ ಯೋಗಾಶ್ರಮದ ಶ್ರೀ ಸಿದ್ದೇಶ್ವರ ಸ್ವಾಮಿಗಳ ಸಮ್ಮುಖದಲ್ಲಿ ಅದ್ದೂರಿಯಾಗಿ ಆಚರಿಸಿ ನೇಕಾರರು ತಮ್ಮ ಗೌರವವನ್ನು ಅರ್ಪಿಸಿದರು.

ಸಂಜೆ ಎಂಟರ ಸುಮಾರಿಗೆ ತಮ್ಮ ಆಫೀಸ್ ಕೆಲಸ ಮುಗಿದಿದ್ದರೆ, ಸುಮಾರು ಅರ್ಧ ತಾಸು ತಿರುಗಾಡಲು ಒಂದು ಕಿಲೋಮೀಟರ ಅಂತರದ ಮುಧೋಳ ದಿನ್ನಿವರೆಗೆ ಹೋಗುತ್ತಿದ್ದರು. ಹಾದಿಯಲ್ಲಿ ಬರುವ ಬಸಪ್ಪ ಅರಕೇರಿ ಅವರ ಅಂಗಡಿ ಅಥವಾ ಉದ್ದೇಶ ಮಠ ಅಥವಾ ಶಿದಗಿರೆಪ್ಪ ಅಥಣಿ ಅವರ ಅಂಗಡಿಯಲ್ಲಿ ಸಲ್ಪ ವಿಶ್ರಮಿಸಿ ಲೋಕಾಭಿರಾಮವಾಗಿ ಮಾತನಾಡಿ ಮನೆಗೆ ಬರುತ್ತಿದ್ದರು. ನಮ್ಮ ತಂದೆಯವರ ಆಗಮನದ ನಿರೀಕ್ಷೆಯಲ್ಲಿಯೆ ಸದರಿಯವರು ಜಾತಕಪಕ್ಷಿಯಂತೆ ಹಾದಿಕಾಯುತ್ತಿದ್ದರು.

ಎತ್ತರ ಶರೀರ, ಖಾದಿ ಧೋತರ, ಖಾದಿ ಕೋಟ, ರಟ್ಟಿನ ಒಳ ಹೊದಿಕೆಯಿದ್ದ ಖಾದಿ ಟೊಪ್ಪಿಗೆ ಇವು ಅವರ ಸಾದಾ ಉಡುಪು. ಹಣದ ಬೆಂಬತ್ತಿ ಶ್ರೀಮಂತನಾಗಬೇಕೆಂಬ ಇಚ್ಛೆ ಅವರಲ್ಲಿ ಯಾವಾಗಲೂ ಇದ್ದಿರಲಿಲ್ಲ. ದೃಢ ಮನಸ್ಸಿನಿಂದ ಬಡ ರೈತ–ನೇಕಾರರ ಏಳ್ಗೆಗಾಗಿ ಸದಾ ಹೋರಾಡುತ್ತಿದ್ದ ಅವರ ಆದರ್ಶಪ್ರಾಯವಾದ ಜೀವನದಲ್ಲಿ ಅನ್ಯಾಯದೊಂದಿಗೆ ಅವರೆಂದೂ ರಾಜೀ ಮಾಡಿಕೊಳ್ಳಲಿಲ್ಲ. ಸಾರ್ವಜನಿಕರಿಗೆ ಆದರ್ಶಪ್ರಾಯವಾಗಿ ಕಂಡರೆ ಕಪಟ ರಾಜಕಾರಣಿಗಳಿಗೆ ಅಪಥ್ಯವಾಗಿ ಕಾಣುತ್ತಿದ್ದರು. ತಾಲೂಕಿನಲ್ಲಿ ಬಂದ ಭ್ರಷ್ಠ ಅಧಿಕಾರಿಗಳಿಗೆ ಸಿಂಹ ಸ್ವಪ್ನದಂತೆ ಕಾಣಿಸುತ್ತಿದ್ದರು.

ಶರೀರ ಕಬ್ಬಿಣ ಇದ್ದ ಹಾಗೆ. ಅದಕ್ಕೆ ಕೆಲಸಕೊಡದಿದ್ದರೆ ಅದು ಜಂಗು ತಿಂದು ನಾಶವಾಗುವ ರೀತಿಯಲ್ಲಿಯೆ ನಮ್ಮ ಶರೀರಕ್ಕೆ ಮುಪ್ಪು ಕೂಡಲೇ ಬರುವದೆಂದು ಹೇಳುತ್ತಿದ್ದರು. ಇದ್ದಷ್ಟು ದಿನ ತನ್ನನ್ನು ನಂಬಿದ ಪಕ್ಷಗಾರರ ಹಾಗೂ ಸಮಾಜದ ಸೇವೆ ಮಾಡಲೇಬೇಕು ಎಂದು ಹೇಳುತ್ತಿದ್ದರು. ಬೆಳಗಾಂವ ಜಿಲ್ಲೆಯ ಘಟಪ್ರಭಾದಲ್ಲಿಯ ಕೆ.ಎಚ್.ಐ. ದವಾಖಾನೆಯಲ್ಲಿ ಕೊನೆ ಉಸಿರುಬಿಟ್ಟಾಗ ಅವರ ಕೈಯಲ್ಲಿ ಚಿನಗುಂಡಿಯ ಭೂಸರಡ್ಡಿಯವರ ಹೊಸದಾವೆಯ ಅರ್ಧ ಬರೆದ ಕಾಗದವಿದ್ದಿತು.

ನಮ್ಮ ತಂದೆಯವರು ಆಹಾರದ ಬಗ್ಗೆ ಅಷ್ಟೇ ಕಾಳಜಿವಹಿಸುತ್ತಿದ್ದರು. ಬಹಳ ವರ್ಷಗಳಿಂದ ಅವರು ದಿನಾಲು ಮುಂಜಾನೆ ಒಂದು ಲೋಟ ನೀರಿನೊಂದಿಗೆ ಒಂದು ಚಮಚೆ ಜೇನುತುಪ್ಪ, ಅರ್ಧ ಲಿಂಬೆಹಣ್ಣಿನ ರಸ ಸೇವಿಸುವ ರೂಢಿ ಇಟ್ಟುಕೊಂಡಿದ್ದರು. ಶಾಸಕರಾಗುವದಕ್ಕಿಂತಲೂ ಮೊದಲು ಒಂದು ರೊಟ್ಟಿ, ತೊಪ್ಪಲು ಪಲ್ಲೆ, ಗಜ್ಜರಿ ಅಥವಾ ಸವತೆಕಾಯಿ ಅಥವಾ ಮೂಲಂಗಿ, ಉಪ್ಪಿನಕಾಯಿ, ಮೊಸರು ಸ್ವಲ್ಪ ಅನ್ನ ಹಾಗೂ ಒಂದು ವಾಟೆ ಮಜ್ಜಿಗೆ ಇವು ಅವರ ಆಹಾರವಾಗಿದ್ದಿತು. ಕಲ್ಲುಸಕ್ಕರೆ ಅವರಿಗೆ ಪ್ರೀಯ ಪದಾರ್ಥ.

ಶಾಸಕರ ಅವಧಿಯ ನಂತರ, ವಕೀಲಿ ವೃತ್ತಿ ಮತ್ತೆ ಪ್ರಾರಂಭ ಮಾಡಿದಾಗ ಅವರನ್ನು ಕಾಣಲು ಬೆಳಗಾಂವ ಆಯುರ್ವೇದ ಕಾಲೇಜಿನ ವಿಶ್ರಾಂತ ಪ್ರಾಂಶುಪಾಲರಾದ ಡಾ. ಗದಗ ಅವರು ಒಂದು ಖಟ್ಲೆ ಸಲುವಾಗಿ ಮನೆಗೆ ಬಂದಿದ್ದರು. ಅವರ ಸಲಹೆ ಮೇರೆಗೆ ಬೆಳಗಾಂವದ ಗಾಂಧಿ ಭವನದ ಆವರಣದಲ್ಲಿಯ ನಿಸರ್ಗೋಪಚಾರ ಕೇಂದ್ರದಲ್ಲಿ ಮೂರು ವಾರಗಳ ಚಿಕಿತ್ಸೆ ಪಡೆದುಕೊಂಡು ಬಂದ ನಂತರ ತಮ್ಮ ಆಹಾರ ಕ್ರಮದಲ್ಲಿ ಅಲ್ಪ ಬದಲಾವಣೆ ಮಾಡಿಕೊಂಡರು.

ಪೌಷ್ಠಿಕ ಆಹಾರದ ಬಗ್ಗೆ ಹೆಚ್ಚಿನ ಗಮನ ಹರಿಸಿದರು. ಆಯಾ ಋತುಮಾನಕ್ಕನುಸಾರವಾಗಿ ಬರುವ ಹಣ್ಣುಗಳನ್ನು ಹಾಗೂ ಒಣಗಿದ ಹಣ್ಣುಗಳಾದ ಮಣುಕ, ಗೋಡಂಬಿ ಇತ್ಯಾದಿ ಹಣ್ಣುಗಳನ್ನು ನೆನೆಸಿಕೊಂಡು ಸೇವಿಸುವುದನ್ನು ರೂಢಿ ಮಾಡಿಕೊಂಡಿದ್ದರು. ಊಟದಲ್ಲಿ ಅರ್ಧ ರೊಟ್ಟಿಯು

ಒಂದು ಪದರು ಹಾಗೂ ಒಂದು ಚಮಚೆ ಅನ್ನದೊಂದಿಗೆ ವಿಪುಲ ತೊಪ್ಪಲು ಪಲ್ಲೆ ಹಾಗೂ ಕಾಯಿಪಲ್ಲೆ ಸೇವಿಸುವುದನ್ನು ರೂಢಿಮಾಡಿಕೊಂಡಿದ್ದರು.

ಅವರು ತಮ್ಮ ಜೀವನದಲ್ಲಿ ಎಂಬತ್ತು ಸಂವತ್ಸರಗಳ ಹೋರಾಟದ ಬದುಕನ್ನು ನಡೆಸಿ ತಾರೀಕು 21.7.1983 ರಂದು ಮರಳಿ ಬಾರದ ದಾರಿಯಲಿ ಹೋದಾಗ ಗದಗಿನ ಜಗದ್ಗುರು ಡಾ. ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು ಹಾಗೂ ಇಲಕಲ್ ಪೀಠದ ಡಾ. ಮಹಾಂತ ಅಪ್ಪಗಳು ಹೇಳಿದ ಬಸವಣ್ಣನ ವಚನವನ್ನು ಇಲ್ಲಿ ಮತ್ತೊಮ್ಮೆ ನೆನಪಿಸಿಕೊಂಡು ಈ ಲೇಖನ ಮುಗಿಸುತ್ತೇನೆ.

ಭಕ್ತಿಯೆಂಬ ಪೃಥ್ವಿಯ ಮೇಲೆ
ಗುರುವೆಂಬ ಬೀಜ ವಂಕುಸಿ
ಲಿಂಗವೆಂಬ ಎಲೆಯಾಯಿತ್ತು; ಲಿಂಗವೆಂಬ
ಎಲೆಯ ಮೇಲೆ ವಿಚಾರವೆಮಬ ಹೂವಾಯಿತ್ತು;
ಆಚಾರವೆಂಬ ಕಾಯಾಯಿತ್ತು; ನಿಷ್ಪತ್ತಿಯೆಂಬ ಹಣ್ಣಾಯಿತ್ತು;
ನಿಷ್ಪತ್ತಿಯೆಂಬ ಹಣ್ಣು ತೊಟ್ಟು ಬಿಟ್ಟು ಕಳಚಿ ಬೀಳುವಲ್ಲಿ
ಕೂಡಲ ಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ.

# ನಮ್ಮ ಮನೆತನದ ಚರಿತ್ರೆ

– ಚಾಮರಾಜ

'ಅಂತರಂಗ ಬಹಿರಂಗ ಶುದ್ಧಿ' ಈ ತತ್ವವನ್ನು ಪಿ. ಎಂ. ಬಾಂಗಿ ಅವರು ನೀತಿ ಪಾಠ – ಪುಸ್ತಕ ಓದಿ ಕಲಿತಿರಲಿಲ್ಲ. ಯಾವುದೆ ವಚನ-ಪ್ರವಚನದ ಪ್ರಭಾವದಿಂದ ಅದನ್ನು ಮೈಗೂಡಿಸಿಕೊಂಡಿರಲಿಲ್ಲ. ಅವರು ಹುಟ್ಟಿ ಬೆಳೆದ ಕಾಲದಲ್ಲಿ ಬಸವಣ್ಣ-ಕಲ್ಯಾಣ ಕ್ರಾಂತಿ-ಶರಣರು-ಸಾಹಿತ್ಯ ಇದೆಲ್ಲಾ ಅಪರಿಚಿತ. ಒಳಗೊಂದು – ಹೊರಗಿನ್ನೊಂದು ಬೇಡ ಎನ್ನುವುದೇ ಅವರ ಬದುಕಿನ ಮೂಲ ಮಂತ್ರ, ಅದನ್ನು ಕೊನೆತನಕ ಹಟದಿಂದ ಪಾಲಿಸಿಕೊಂಡು ಬಂದರು. ಪಾರದರ್ಶಿಕತೆ ಹುಟ್ಟಿದಾಗಿನಿಂದ ಅವರ ಸ್ವಭಾವದಲ್ಲೇ ಬಂದ ಗುಣ. ಎಳೆಯ ವಯಸ್ಸಿನಲ್ಲಿ ಅವರನ್ನು ಸಮೀಪದಿಂದ ನೋಡಿದ ವಾರಿಗೆಯುವರು ಹೇಳುತ್ತಿದ್ದರು "ಬಹಳ ಖಡಕ್ ಮನುಷ್ಯ. ಯಾವತ್ತೂ ಗಂಭೀರ. ಅಶಿಸ್ತು-ಆಳಸಿತನ-ಸುಳ್ಳು-ಖೊಟ್ಟಿ-ಕಪಟ ಅಂದರೆ ಆಗುತ್ತಿರಲಿಲ್ಲ."

ವ್ಯಾಪಾರ ಮತ್ತು ಒಕ್ಕಲುತನ ಇವು ನಮ್ಮ ಮನೆತನದ ಮೂಲಉದ್ಯೋಗಗಳು. ಮನೆಯಲ್ಲಿ ನಿರಕ್ಷರಿಗಳಿರಲಿಲ್ಲ ಆದರೆ ಹೆಚ್ಚು ಓದಿದವರೂ ಇರಲಿಲ್ಲ. ವಿದ್ಯಾದೇವತೆ ಸರಸ್ವತಿಗಿಂತ ಧನದೇವತೆ ಲಕ್ಷ್ಮಿ ಮೇಲಂತಸ್ತು ಪಡೆದಂತಹ ಪರಿಸರದಲ್ಲೂ ಬಾಲಕ ಪಾವಾಡೆಪ್ಪನಿಗೆ (ಪೀ. ಎಂ. ಬಾಂಗಿ) ಪುಸ್ತಕ ಓದುವ ಗೀಳು. ಮರಾಠಿಯಲ್ಲಿ ಮೂಲ- ಶಿಕ್ಷಣ ಪಡೆದಿದ್ದ ಅವರ ತಂದೆ ಮಲ್ಲಪ್ಪ ಶೆಟ್ಟರು ತಮ್ಮ ವ್ಯವಹಾರಕ್ಕೆ ಬೇಕಾಗುವಷ್ಟು ಓದುಬರಹ ಬಲ್ಲವರು. ಮುಂದಾಲೋಚನೆಯ ಮುತ್ಸದ್ದಿ ವ್ಯವಹಾರಸ್ಥರು. ಅಲ್ಲದೆ, ಸಮಾಜದಲ್ಲೂ ಪ್ರಮುಖರು. ಮಗನ ಜ್ಞಾನದ ಗೀಳನ್ನು ಕಂಡು ಓದಲು ಉತ್ತೇಜನ ಕೊಟ್ಟರು. ಮಗನ ಅಭ್ಯಾಸದ ಸಲುವಾಗಿ ಪ್ರತ್ಯೇಕ ಸೌಕರ್ಯ ಮಾಡಿಕೊಟ್ಟರು. ಮುಂದೆ ಪಾವಾಡೆಪ್ಪಾ ಮನೆತನದಲ್ಲಷ್ಟೇ ಅಲ್ಲ ಜಮಖಂಡಿ ಭಾಗದಲ್ಲೇ ಲಿಂಗಾಯತ ಸಮಾಜದ ಮೊಟ್ಟಮೊದಲ ಎಲ್‌ಎಲ್, ಬಿ. ಪದವೀಧರರು ಮತ್ತು ವಕೀಲರಾದರು.

ಅವರ ಬೀ.ಎ. (ಆನರ್ಸ) ಪದವಿಯಲ್ಲಿ ಒಂದು ವಿಶೇಷವಿತ್ತು. ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಸಂಸ್ಕೃತ ಪೇಪರನಲ್ಲಿ 93% ಅಂಕ ಗಳಿಸಿದ್ದ ಅವರು ಆನರ್ಸ ಪದವೀಧರರಾಗಲು ಭಾರೀ ಕಠಿಣ ವಿಷಯವಾದರೂ ಸಂಸ್ಕೃತವನ್ನೇ ತೆಗೆದುಕೊಂಡು ಅತ್ಯುನ್ನತ ಶ್ರೇಣಿಯಲ್ಲಿ ಪಾಸ್ ಆಗಿ ಎಲ್ಲರೂ ಹುಬ್ಬೇರಿಸುವಂಥಾ ಸಾಧನೆ ಮಾಡಿದರು. ಪುಣೆಯ ಫರ್ಗ್ಯುಸನ್ ಕಾಲೇಜಿನ ಸಂಸ್ಕೃತ ಕ್ಲಬ್ (1925–27) ಇದರ ಸಕ್ರಿಯ ಸದಸ್ಯರಾಗಿದ್ದ ಅವರು ಪಂಡಿತ ಪಾರಂಗತರಿಂದ ತುಂಬಿದ್ದ ಸಂಸ್ಕೃತಮಯ ಪರಿಸರದಲ್ಲಿ ಉನ್ನತ ಶಿಕ್ಷಣ ಮುಗಿಸಿ ತವರೂರು ಜಮಖಂಡಿಗೆ ಮರಳಿದರು. ಪಾವಾಡೆಪ್ಪನ ನಡೆ–ನುಡಿಯಲ್ಲಿನ ಸೂಕ್ಷ್ಮತೆ ಅರಿತಿದ್ದ ತಂದೆ ಮಲ್ಲಪ್ಪನವರು ಮಗನು ಸ್ವಂತ ಬುದ್ಧಿವಂತಿಕೆಯಿಂದ ಬಹಳ ಎತ್ತರಕ್ಕೆ ಬೆಳೆಯುವನೆಂದು ಕನಸು ಕಂಡಿದ್ದರು.

ಮನೆಮಾತು ಕನ್ನಡ. ಹೊರಗೆ ಮರಾಠಿ ಅನಿವಾರ್ಯ. ಮರಾಠಿ ಲಿಪಿ ಈಗಿನಂತೆ ನಾಗರಿ ಆಗಿರಲಿಲ್ಲ. ಪುರಾತನ ಕಾಲದ ಮೋಡಿ ಲಿಪಿಯಲ್ಲಿ ಮರಾಠಿ ಬರೆಯುವುದು ಬಹಳ ಕಷ್ಟದ ಸಾಹಸ. ಆಗಿನ ಕಾಗದ ಪತ್ರಗಳೆಲ್ಲ ಮೋಡಿ ಲಿಪಿಯಲ್ಲಿದ್ದವು. ತಾಡಪತ್ರಿಯಂಥ ಬದಾಮಿ ಬಣ್ಣದ ದಪ್ಪ ಹಾಳೆಗಳ ಮೇಲೆ ಟಾಕ–ಮಸೀದೌತಿಗಳನ್ನು (Pen & inkpot) ಬಳಸಿ ಮೋಡಿ ಲಿಪಿ ಮೂಡಿಸುವ ಕಾಲವದು. ಮಲ್ಲಪ್ಪನವರು ವ್ಯಪಾರದ ಜೊತೆಗೆ ಒಕ್ಕಲುತನವನ್ನೂ ಸಮರ್ಥವಾಗಿ ನಡೆಸಿಕೊಂಡು ಬಂದ ಚಾಣಾಕ್ಷ ರೈತರು. ಅವರ ಅಂಗಡಿಯ ಜಮಾ–ಖರ್ಚು–ಖಾತೆ–ಕಿರ್ದಿ ಏನಿದ್ದರೂ ಎಲ್ಲಾ ಮೋಡಿ ಲಿಪಿಯ ಮರಾಠಿಯಲ್ಲಿ. ಅವರು ಬದುಕಿದ್ದು ಕೇವಲ 59 ವರ್ಷ ಆದರೆ 100 ವರ್ಷದ ಸಾಧನೆಮಾಡಿದ್ದರು. ಇಸ್ವಿ 1895 ರ ಸುಮಾರಿಗೆ ಕೇವಲ 25 ಎಕರೆ ಒಣ ಜಮೀನು ಮತ್ತು ಒಂದು ಸಣ್ಣ ವ್ಯಾಪಾರದೊಂದಿಗೆ ಮನೆತನದ ಜವಾಬ್ದಾರಿ ವಹಿಸಿಕೊಂಡ ಮಲ್ಲಪ್ಪನವರು 1932 ರಲ್ಲಿ ತೀರಿಕೊಳ್ಳುವ ವೇಳೆಗೆ ಮನೆತನದ ಆಸ್ತಿ ಹತ್ತಿಪ್ಪತ್ತು ಪಟ್ಟು ಬೆಳೆದಿತ್ತು. ವಾರಸುದಾರರಿಗೆ ಅವರು ಬಿಟ್ಟು ಹೋಗಿದ್ದು 200 ಎಕರೆಗೂ ಹೆಚ್ಚು ಜಮೀನು ಜೊತೆಗೆ ಅನೇಕ ಮನೆ, ವಠಾರ ಮತ್ತು ಮನೆಜಾಗಗಳು ಅಲ್ಲದೆ ಬಂಗಾರ–ಬೆಳ್ಳಿ–ದಾಗೀನುಗಳ ದೊಡ್ಡ ಭಂಡಾರ.

1918 ರಲ್ಲಿ ಮಲ್ಲಪ್ಪನವರು ಮನೆತನದ ಮೂಲ ಹೊಲದಲ್ಲಿ ತೋಡಿಸಿದ ಭಾವಿ ಇವತ್ತಿಗೂ ಬತ್ತಲಿಲ್ಲ. ನಾನು ಸ್ವತಃ ಕಂಡಿರುವ ಎರ್ಡು –1972 ಮತ್ತು 2002– ಭೀಕರ ಬರಗಾಲಗಳಲ್ಲೂ ನಮ್ಮ ಭಾವಿಯಲ್ಲಿ ನೀರಿನ ಸೆಲೆ ಸೊರಗಲಿಲ್ಲ. ಭಾವಿಯ ಸುತ್ತ ಕಟ್ಟಿಸಿದ ಹೊಡೆದ ಕೆಂಪು ಕಲ್ಲಿನ ನಾಲ್ಕೂ ಗೋಡೆಗಳು 90 ವರ್ಷ ದಾಟಿದರೂ ಗಟ್ಟಿಯಾಗಿವೆ. ಗಾಣದಲ್ಲಿ ಅರೆದ ಆಗಿನ ಗಚ್ಚು ಈವತ್ತಿನ ಸಿಮೆಂಟಿಗಿಂತ ಹೆಚ್ಚು ಜಿಗುಟು. ಹೀಗಾಗಿ ನಮ್ಮ ಭಾವಿತ ಗೋಡೆಗಳಿಗೆ ದುರಸ್ತಿ ಬೇಕಾಗಿಲ್ಲ. ಜಮಖಂಡಿಯಿಂದ ವಿಜಾಪುರಕ್ಕೆ ಹೋಗುವ ಹಾದಿಯಲ್ಲಿ ಎರ್ಡನೆ ಮೈಲು ಗಲ್ಲಿಗೆ ಇರುವ ನಮ್ಮ ತೋಟದ ಭಾವಿ ಆ ಭಾಗದಲ್ಲೇ ಮೊದಲ್ನೆಯದು. ಚಕ್ಕಡಿ–ಜೋಡೆತ್ತಿನ ಯುಗದಲ್ಲಿ ಎತ್ತಿನ ಚಕ್ಕಡಿ ಬಿಟ್ಟರೆ ಬೇರೆ ವಾಹನವಿಲ್ಲ. ಚಕ್ಕಡಿ ಪ್ರಯಾಣಿಕರು ಜಳಕ ಮಾಡಿ–ಬುತ್ತಿ ಬಿಚ್ಚಿ ಊಟ ಮುಗಿಸಿ ದಣಿವಾರಿಸಿಕೊಂಡು ಹೋಗಲು ಭಾವಿಯ ಕಟ್ಟಡದಲ್ಲೇ ಸೌಕರ್ಯ (ಪವಳಿ) ಮಾಡಿದ್ದರು. ದನಗಳ ಕುಡಿಯುವ ನೀರಿಗಾಗಿ ರಸ್ತೆ ಬದಿಯಲ್ಲೇ ಟಾಕಿ (ಹ್ಯಾಳ) ಕಟ್ಟಿಸಿದ್ದರು. ಎತ್ತಿನ ಮಟ್ಟಿಯಿಂದ ನೀರೆತ್ತಿ ಅದನ್ನು ಯಾವತ್ತೂ ತುಂಬಿಸಿಡುತ್ತಿದ್ದರು. ನೂರು ವರ್ಷಗಳ ಹಿಂದೆಯೇ ನೀರಾವರಿಯ ಸಫಲ ಪ್ರಯೋಗ ಮಾಡಿದ್ದ ಮಲ್ಲಪ್ಪಾ ಅವರು ಕಬ್ಬು ಬೆಳೆದು ಗಾಣ ಹೂಡಿ ಬೆಲ್ಲ ತಯಾರಿಸಿದ ಪ್ರಗತಿಪರ ರೈತರಾಗಿದ್ದರು.

ಪಾವಾಡೆಪ್ಪನವರ ತಂದೆ ಮಲ್ಲಪ್ಪನವರು ದೊಡ್ಡಮನಸ್ಸಿನವರು–ಧೀಮಂತರು. ಉದಾರಗುಣದ ಅವರು ಮೂರು ತಲೆಮಾರುಗಳಿಂದ ಏಕತ್ರವಿದ್ದ ಒಂದು ದೊಡ್ಡ ಪರಿವಾರಕ್ಕೇ ಹಿರಿಯ ಯಜಮಾನರು. ಕೆಲವು ಅಸಹಾಯಕರಿಗೂ ಆಸರೆ ನೀಡಿ ಶಾಲೆ ಕಲಿಯಲು ಉತ್ತೇಜನ ಕೊಟ್ಟ ವಿದ್ಯಾದಾನಿಗಳು. ಅವರು ತೀರಿ ಹೋದ ತರುವಾಯ ಅವರ ಒಬ್ಬನೇ ಒಬ್ಬ ತಮ್ಮ ಕಲ್ಯಾಣಪ್ಪ ಪರಿವಾರಕ್ಕೆ ಯಜಮಾನರಾದರು. ಆದರೆ ಕಲ್ಯಾಣಪ್ಪನವರು ಇಡೀ ಕಾರಬಾರನ್ನು ಆಗಲೆ ವಕೀಲನಾಗಿ ಸಮಾಜದಲ್ಲಿ ಹೆಸರು ಗಳಿಸಿದ್ದ ಅಣ್ಣನ ಹಿರಿಯ ಮಗ ಪಾವಾಡೆಪ್ಪನಿಗೆ ಒಪ್ಪಿಸಿ ಹೆಸರಿಗಷ್ಟೇ ಯಜಮಾನಿಕೆ ಉಳಿಸಿಕೊಂಡರು.

ಪಾವಾಡೆಪ್ಪಾ ನಿಷ್ಠುರ –ನಿರ್ಭಿಡೆಯವನು ಆದರೆ ದರ್ಪ–ದಬ್ಬಾಳಿಕೆ–ಸೊಕ್ಕು–ಘಮಿಂಡಿಯ ಸೋಂಕಿನಿಂದ ಬಲುದೂರ. ಮನೆಯಲ್ಲಿ ಹಿರಿಯರು–ಕಿರಿಯರು ಸಣ್ಣವರು–ದೊಡ್ಡವರು ಯಾರೆ ಇರಲಿ ಅವರೊಡನೆ ಸಲಿಗೆಯ ಒಡನಾಟ. ಪಾವಾಡೆಪ್ಪನನ್ನು ಕಂಡರೆ ತಾಯಿ ಸಿದ್ದವ್ವಳೂ ಸೇರಿ ಎಲ್ಲರಿಗೂ ನಡುಕ ಪರಂತು ಅಪಾರ ಗೌರವ–ಮಮತೆ–ಅಭಿಮಾನ. ವಯಸ್ಸಾಗಿದ್ದ ನನ್ನ ಆಯಿ ಸಿದ್ದವ್ವಾ ನಮ್ಮ ಬಿದಿರು ಜಂತಿಯ ಹಳೆಯ ಮನೆಯಲ್ಲಿ ತೀರಿಕೊಂಡಿದ್ದನ್ನು ಸಣ್ಣ ಹುಡುಗನಾಗಿದ್ದ ನಾನು ನೋಡಿದ್ದೇನೆ. ಆ ದಿವಸ ನನಗೆ ನೆನೆಪಿದೆ. ಇಸ್ವಿ ಅಷ್ಟು ಸ್ಪಷ್ಟವಾಗಿ ನೆನಪಿಲ್ಲ. ಆದರೆ ಅದು ಶ್ರಾವಣ ಸೋಮವಾರ ಆಗಿತ್ತು.

ಮಲ್ಲಪ್ಪನವರು ಸಮಾಜದ ಉನ್ನತಿಗಾಗಿ ಸಮಚಿಂತಕರೊಡನೆ ಸೇರಿ 1918 ರಲ್ಲಿ ಲಿಂಗಾಯತ ಟ್ರಸ್ಟ್ ಫಂಡ್ ಸ್ಥಾಪಿಸಿದ್ದರು. ಸಂಸ್ಥೆಗೆ ಶಾಶ್ವತ ಉತ್ಪನ್ನ ಮೂಲ ನಿರ್ಮಿಸಲು ಜಮಖಂಡಿ ಪಕ್ಕದ ಹುನ್ನೂರಲ್ಲಿ 20 ಎಕರೆ ಜಮೀನು ಗಳಿಸಿ ಕೊಟ್ಟಿದ್ದರು. ಅವರು ತೀರಿಹೋದ ತರುವಾಯ ಅದು ಸಂಚಾಲಕನಿಲ್ಲದ ಅನಾಥ ಸಂಸ್ಥೆಯಾಯಿತು. ಜಮೀನು ಟೆನೆಂಟಗಳ (ಕೂಳಗಳು ಅಂದರೆ ಗೇಣಿದಾರರು) ಕೈವಶವಾಯಿತು. ಮುಂಬೈ ಕೂಳ ಕಾಯ್ದೆ 1948ರಲ್ಲಿ ಅಮಲ್ ಬಜಾವಣೆಗೆ ಬಂದ ನಂತರ ಆ ಜಮೀನು ರೈತರವಶವಾಯಿತು. ಮುಂದೆ, 1950 ರ ಸುಮಾರಿಗೆ ಪೀ.ಎಂ.ಬಾಂಗಿ ಯವರು ಟ್ರಸ್ಟ ಫಂಡನ್ನು ಚಾರಿಟಿ ಕಮೀಶನರ್ ಬಳಿ ನೋಂದ ಮಾಡಿಸಿ ಅದಕ್ಕೆ ಚಾಲನೆ ಕೊಡಲು ಪ್ರಯತ್ನಿಸಿದ ದಾಖಲೆಯಿದೆ ಆದರೆ ಪ್ರಯತ್ನವನ್ನು ಮುಂದುವರಿಸದೆ ಕೈಬಿಟ್ಟರು. ಕೆಲಸದ ಭಾರದಿಂದಾಗಿ ಅದನ್ನು ಅಲ್ಲಿಗೆ ಮರೆತಿರಬಹುದು.

ಇಸ್ವಿ 1932–33 ರಲ್ಲಿ ಪಾವಾಡೆಪ್ಪನವರಿಗೆ ದೊಡ್ಡ ಆಘಾತ ಕಾದಿತ್ತು. ಇಡೀ ಮನೆತನದ ಮಹಾಚೇತನ ತಂದೆ ಮಲ್ಲಪ್ಪ 1932 ರ ಏಪ್ರಿಲ್ ತಿಂಗಳಲ್ಲಿ ಕಣ್ಮುಚ್ಚಿದರು. ಮುಂದೆ ಒಂದು ವರ್ಷದಲ್ಲಿ ಮೊದಲ್ನೇ ಮಡದಿ ತೀರಿಕೊಂಡಳು. ಸಂಕಟ–ಸವಾಲುಗಳನ್ನು ಎದುರಿಸಿ ಮುಂದೆಸಾಗುವುದು ಪಾವಾಡೆಪ್ಪನವರ ಮನೋಗುಣ. ಜೀವನದುದ್ದಕ್ಕೂ ಅವರಿಗೆ ಎದುರಾದ ಕಂಟಕಗಳು ನೂರೆಂಟು. ಲೆಕ್ಕಿಲ್ಲದಷ್ಟು ಪೇಚಿನ ಪ್ರಸಂಗಗಳು. ಅವೆಲ್ಲದರಿಂದ ಪಾರಾಗಲು ಅವರೆಂದೂ ಅಡ್ಡ ಹಾದಿ ಹಿಡಿಯಲಿಲ್ಲ. ನಡೆ–ನುಡಿ ಎರ್ಡರಲ್ಲೂ

ದಿಟ್ಟ–ಧೀರ. ಸ್ವಂತ ಮಗ ತಪ್ಪು ಮಾಡಿದ ಸಂದರ್ಭದಲ್ಲೂ ಅವರ ಮನಸ್ಸು ಅಷ್ಟೇ ರುದ್ರ ಕಠೋರವಾಗಿತ್ತು. ಅವರಿಗಿದ್ದ ಅಂತಸ್ತು ಗೌರವ ವರ್ಚಸ್ಸಿನಿಂದ ಮಗನ ತಪ್ಪು ತಾನಾಗೇ ಮುಚ್ಚಿ ಹೋಗಬಹುದಿತ್ತು. ಅದಕ್ಕವರೊಪ್ಪಲಿಲ್ಲ. ತಪ್ಪು ಮಾಡಿದವ ಯಾರೇ ಇರಲಿ ಶಿಕ್ಷೆಗೆ ಗುರಿಯಾಗಬೇಕೆಂಬ ಅಚಲ ನಿಲುವಿನಿಂದ ಒಂದಿಂಚೂ ಸರಿಯಲಿಲ್ಲ. ತಪ್ಪು ಮಾಡಿದವನಿಗೆ ರಕ್ಷಣೆ ಕೊಡಲಿಲ್ಲ.

ಮಲ್ಲಪ್ಪನವರು ತೀರಿಕೊಳ್ಳುವ ವೇಳೆಗೆ ದೇಶದ ಅರ್ಥವ್ಯವಸ್ಥೆ ರಿಸೆಶನ್‌ದಿಂದ ನೆರಳುತ್ತಿತ್ತು. ವ್ಯಾಪಾರ–ವ್ಯವಹಾರಗಳು ದಿವಾಳಿಎದ್ದವು. ವ್ಯಾಪಾರಸ್ಥರು–ಕಾರ್ಖಾನೆ ಮಾಲಕರು ನೆಲ ಹಿಡಿದರು. ರಿಸೆಶನ್ ಒಂದು ಭೀಕರ ಆರ್ಥಿಕ ಶಾಪ ಎನ್ನುವುದನ್ನು ಈಗಿನ ತಲೆಮಾರಿನ ನಾವು ಈ 15 ವರ್ಷಗಳಲ್ಲಿ ಸಾಕಷ್ಟು ಅನುಭವಿಸಿದ್ದೇವೆ. 1930 ರ ವೇಳೆಗೆ ಕರಾಳಗೊಂಡ ಜಾಗತಿಕ ಹಿಂಜರಿತದ ಕರಿನೆರಳಿನಿಂದ ಪಾರಾಗುವುದು ಅಸಾಧ್ಯವಾಗಿತ್ತು. ಹೀಗಾಗಿ ಮನೆತನದ ಅಂಗಡಿ–ವ್ಯಾಪಾರವನ್ನು ಮುಚ್ಚಬೇಕಾಯಿತು. ಕಾಕಾ ಕಲ್ಯಾಣಪ್ಪನ ಅಪ್ಪಣೆಯಂತೆ ಪಾವಾಡೆಪ್ಪಾ ಎಲ್ಲಾ ಜವಾಬ್ದಾರಿ ವಹಿಸಿಕೊಂಡರೂ ವಕೀಲಿ ಮತ್ತು ಸಾರ್ವಜನಿಕ ಚಟುವಟಿಕೆ ಜೊತೆಗೆ ಮನೆತನದ ಹೊಣೆಯನ್ನೂ ತೂಗಿಸಿಕೊಂಡು ಬರುವುದು ಅವರಿಗೆ ಅಸಾಧ್ಯವಾಯಿತು. ಬದಲಾದ ಸನ್ನಿವೇಶದ ಹಿನ್ನೆಲೆಯಲ್ಲಿ ಪಾಲು ಮಾಡಿಕೊಂಡು ಬೇರೆಯಾಗುವುದೇ ಯೋಗ್ಯ ಎಂದು ಮನೆಯಲ್ಲಿ ಎಲ್ಲರೂ ಮನಗಂಡು ಆ ಪ್ರಕಾರ ತೀರ್ಮಾನಿಸಿದಾಗ ಕಾಕಾ ಕಲ್ಯಾಣಪ್ಪನವರ ಹಿರಿತನದಲ್ಲಿ ಎಲ್ಲರೂ ಪರಸ್ಪರ ಸಹಮತದಿಂದ ಆಸ್ತಿ–ಋಣ–ಉತ್ಪನ್ನಗಳ ಪಾಲು ಮಾಡಿಕೊಂಡರು. ಕಾಯ್ದೆ–ನಿಯಮ–ಧರ್ಮ–ನೀತಿ ಪ್ರಕಾರ ಅವರವರ ಪಾಲಿಗೆ ಕೊಡಬೇಕಾದ ಹೊಲ–ಮನೆ–ವಸ್ತು–ಒಡವೆ–ಭಾಂಡೆ ಮುಂತಾದವನ್ನು ಹಂಚಿ ಆ ಪ್ರಕಾರ ವಾಟ್ಣಿ ಪತ್ರ ಬರೆಸಿ ನೋಂದ ಮಾಡಿಸಿದ ಪಾವಾಡೆಪ್ಪನವರು ಆಸ್ತಿ ಹಂಚುವ ವಿಚಾರದಲ್ಲಿ ಬಹಳ ತೂಕದಿಂದ ನ್ಯಾಯಸಮ್ಮತವಾಗಿ ಮತ್ತು ಜಗಳದ ಕಿಡಿ ಹೊತ್ತಿಸಬಲ್ಲ ಸಂಶಯಕ್ಕೆ ಎಳ್ಳಷ್ಟೂ ಆಸ್ಪದ ಸಿಗದಂತೆ ನಡೆದುಕೊಂಡರೆಂಬುದು ನಿರ್ವಿವಾದ. ಒಂದು ಹೊತ್ತಿಗೆಯಂತಿರುವ (ಎ–4 ಆಕಾರದಲ್ಲಿ 50 ಪುಟ ಆಗಬಹುದು) ಮೋಡಿ ಲಿಪಿಯಲ್ಲಿನ 1934 ರ ಜೂನ್ ತಿಂಗಳ ಆ ವಾಟ್ಣೀಪತ್ರ ಅವರ ನಿಚ್ಚಳ–ನಿರ್ಮಲ ಮನಸ್ಸಿಗೆ ಶಾಶ್ವತ ಸಾಕ್ಷಿಯಾಗಿ ಉಳಿದಿದೆ. ವಾಟ್ಣಿ ಪತ್ರದ ಸವಿಸ್ತಾರ

ಒಕ್ಕಣಿಕೆ ನೋಡಿದರೆ ಅದರಲ್ಲಿ ಅವರ ಛಾಪು ಎದ್ದು ಕಾಣುತ್ತದೆ. ಮೂರು ತಲೆ ಮಾರುಗಳು ಅಂದರೆ ಅಜಮಾಸು 100 ವರ್ಷದಿಂದ ಏಕತ್ರವಾಗಿದ್ದ ಮನೆತನದ ಎಲ್ಲಾ ಬಂಧು-ಬಾಂಧವರಿಗೆ ಅವರ ಅಪೇಕ್ಷೆಯಂತೆ ಅವರವರ ಕುಟುಂಬದ ಜವಾಬ್ದಾರಿ ಒಪ್ಪಿಸಿ ಕೊನೆಗೆ ತಮ್ಮ ಪಾಲಿಗೆ ಉಳಿದ ಹಿರಿಯರ ಆಸ್ತಿ-ಪಾಸ್ತಿಯನ್ನು ತೆಗೆದುಕೊಂಡು ಸ್ವಂತದ ಸ್ವತಂತ್ರ ಸಂಸಾರಕ್ಕೆ ಮುಂದಾದರು - ಪಾವಾಡೆಪ್ಪಾ.

ನಾನು ಕಂಡಂತೆ, ವಕೀಲರಾಗಿ ಅವರು ನಡೆದುಕೊಂಡ ರೀತಿ, ವಕೀಲಿ ವ್ಯವಸಾಯಕ್ಕೆ ದೊಡ್ಡ ಘನತೆ ತಂದಿದೆ. ಕೋರ್ಟಿನೊಳಗೆ ಖಟ್ಲೆಗಳ ಪರ-ವಿರುದ್ಧ ವಾದ-ವಿವಾದ, ಸೋಲು-ಗೆಲುವು, ನಿರೀಕ್ಷೆ-ನಿರಾಶೆ ಏನೇ ಇದ್ದರೂ, ಕೋರ್ಟಿನ ಹೊರಗೆ ಸಹೋದ್ಯೋಗಿ ವಕೀಲರು, ಪಿ.ಎಂ.ಬಿ. ಅವರನ್ನು ಅಪಾರ ಗೌರವದಿಂದ ಕಾಣುತ್ತಿದ್ದರು. ವಾರಿಗೆಯ ವಕೀಲರು ಅವರನ್ನು ಪವಾಡೆಪ್ಪಾ ಅಂತ ಕರೆಯುತ್ತಿದ್ದರು. ಅವರ ಕಠೋರತೆಯನ್ನು ಮೆಚ್ಚದವರೂ ಕೂಡಾ ಅವರ ನ್ಯಾಯಪರತೆ ಮತ್ತು ಕುಶಲತೆಯನ್ನು ಪ್ರಶ್ನಿಸುತ್ತಿರಲಿಲ್ಲ.

ಕೋರ್ಟಿನಲ್ಲಿ ಕೆಲಸ ಮಾಡುತ್ತಿದ್ದ ಒಬ್ಬ ಹಿರಿಯ ಕಾರಕೂನರು ಪಿ.ಎಂ.ಬಿ.ಯವರ ನಿಷ್ಠುರತೆಯಿಂದ ಶಿಕ್ಷೆ ಅನುಭವಿಸಿದ್ದರೂ, ಅವರನ್ನು ಯಾವಾಗಲೂ ಗೌರವದಿಂದ ಕಾಣುತ್ತಿದ್ದರು. ಆ ಕಾರಕೂನರು ತಮ್ಮ ಶಿಕ್ಷೆಗೆ ಕಾರಣವಾದ 1942 ರ ಆ ಸಂಗತಿಯನ್ನು 'ನಾಲ್ಕಾಣೆ ಲಂಚದ ಪ್ರಸಂಗ' ಅಂತ ನೆನಪಿಸಿಕೊಳ್ಳುತ್ತಿದ್ದರು. ಕೇವಲ ನಾಲ್ಕಾಣೆ (ಪಾವಲಿ) ಲಂಚ ಕೇಳಿದ್ದಾನೆ ಅಂತ ದೂರು ಬಂದದ್ದೆ ತಡ, ಸಂಸ್ಥಾನದ ಸೋಪೀವ ಖಾತೆ ಮಂತ್ರಿಯಾಗಿದ್ದ ಪಿ.ಎಂ.ಬಿ. ಅವರು, ಆ ಕಾರಕೂನರನ್ನು ದೂರದ ಊರು ಕುಂದಗೋಳಿಗೆ (ಈಗ ಧಾರವಾಡ ಜಿಲ್ಹೆಯಲ್ಲಿದೆ) ವರ್ಗ ಮಾಡಿದ್ದರು.

ಪೀ. ಎಂ. ಬಾಂಗಿಯವರಲ್ಲಿದ್ದಂಥ ಪ್ರತಿಭೆ, ಏಕಾಗ್ರತೆ ಮತ್ತು ನಿಷ್ಠುರತೆಯನ್ನು ಅವರ ಹಿರಿಯ ಮಗ ಬಾಳಾಸಾಹೇಬನಲ್ಲಿ (ಜನ್ಮ 1938) ಮಾತ್ರ ಕಾಣಬಹುದು. 1955 ರ ಎಸ್.ಎಸ್.ಸಿ. ಅಂದರೆ 11ನೆ ಇಯತ್ತೆಯ ಬೋರ್ಡ ಪರೀಕ್ಷೆಯಲ್ಲಿ ನೂರಕ್ಕೆ 60 ಕ್ಕಿಂತ ಹೆಚ್ಚು ಅಂಕ ಗಳಿಸಿ ಮೊದಲ್ನೆ

ದರ್ಜೆಯಲ್ಲಿ ಪಾಸಾದ ಜಮಖಂಡಿಯ ಪಿ.ಬಿ.ಹೈಸ್ಕೂಲಿನ ಬೆರಳೆಣಿಕೆಯಷ್ಟು ಹುಶಾರ ಹುಡುಗರಲ್ಲಿ ಬಾಳಾಸಾಹೇಬ ಒಬ್ಬನು. 1959ರಲ್ಲಿ ಇಂಜನಿಯರಿಂಗ್ ಕಲಿಯುವ ವೇಳೆ ಪ್ರಶ್ನೆ ಪತ್ರಿಕೆ ಹಗರಣವನ್ನು ಬಯಲಿಗೆಳೆದ ಕಾರಣಕ್ಕೆ ಅವನು ಪ್ರಿನ್ಸಿಪಾಲರು, ಶಿಕ್ಷಕರು ಮತ್ತು ಸಹ–ಪಾಠಿಗಳ ಕೆಂಗಣ್ಣಿಗೆ ಗುರಿಯಾದನು. ನಂತರ ನಾಡಿನ ಪ್ರತಿಷ್ಠಿತ ಕೈಗಾರಿಕೆಯಾದ ಎನ್. ಜೀ. ಈ. ಎಫ್. ಕಾರ್ಖಾನೆಯಲ್ಲಿ ಮಹತ್ವದ ಹಿರಿಯ ಇಂಜನಿಯರ್ ಹುದ್ದೆಗೇರಿದ ಅವನು ದಕ್ಷ ಮತ್ತು ಶುದ್ಧ–ಹಸ್ತನೆಂಬ ಹೆಸರು ಗಳಿಸಿ ಎಲ್ಲರ ಗೌರವಕ್ಕೆ ಪಾತ್ರನಾದನು. ತಂದೆಯ ಬಸವ ನಿಷ್ಠೆಯಿಂದ ಪ್ರಭಾವಿತನಾದ ಹಿರಿಯ ಮಗ ಕಂಪನಿಯಲ್ಲಿ ಬಸವ ಬಳಗ ಸಂಘಟಿಸಿದನು. ಹಲವಾರು ಸಾಂಸ್ಕೃತಿಕ ಚಟುವಟಿಕೆಗಳ ಸೂತ್ರಧಾರನಾಗಿ ಅಲ್ಲಿನ ನೌಕರವರ್ಗದಲ್ಲಿ ಚಿರಪರಿಚಿತನಾಗಿದ್ದನು.

ಕರ್ನಾಟಕ ವಿಶ್ವವಿದ್ಯಾಲಯ ಕುಲಪತಿ ರ್‍ಯಾಂಗ್ಲರ್ ಡಾ|| ಡಿ. ಸಿ. ಪಾವಟೆಯವರು ಒಂದು ಸಂದರ್ಭದಲ್ಲಿ ಪ್ರತಿಭಾವಂತ ವಿದ್ಯಾರ್ಥಿ ಬಾಳಾಸಾಹೇಬನನ್ನು ಕರೆದು, 'ಕಾಯ್ದೆ ಅಭ್ಯಾಸ ಮಾಡು. ನಿಮ್ಮ ತಂದೆ ಜನಪ್ರೀಯ ದಕ್ಷ ವಕೀಲರು. ತಂದೆಯ ವಕೀಲಿ ವ್ಯವಸಾಯಕ್ಕೆ ವಾರಸುದಾರನಾಗು' ಅಂತ ಬುದ್ಧಿ ಹೇಳಿದ್ದರು. ಪಾವಟೆಯವರ ಬುದ್ಧಿ–ಮಾತಿಗೆ ಓಗೊಟ್ಟಿದ್ದರೆ, ಹಿರಿಯ ಮಗ ಸಮರ್ಥ ವಕೀಲ ಅಥವಾ ಜಸ್ಟಿಸ್ ಆಗಬಹುದಿತ್ತು. ಆಗಲೆ ಬಿ.ಎಸ್ಸಿ. ಕೊನೆಯ ವರ್ಷಕ್ಕೆ ಬಂದಿದ್ದ ಬಾಳಾಸಾಹೇಬ ಇಂಜನಿಯರಿಂಗ್ ಕಡೆಗೆ ಒಲಿದನು. ಬಿ.ಈ. (ಮೆಕ್ಯಾನಿಕಲ್) ಮತ್ತು ಬಿ.ಈ. (ಎಲೆಕ್ಟ್ರಿಕಲ್) ಹೀಗೆ ಆ ಕಾಲದ ಅವಳಿ ಇಂಜನಿಯರಿಂಗ್ ಪದವಿಗಳನ್ನು ಗಳಿಸಿದ ಕೆಲವೇ ಕೆಲವರಲ್ಲಿ ಒಬ್ಬನಾದ ಇವನು, ಎನ್. ಜೀ. ಈ. ಎಫ್. ನಿಂದ ವಿಶ್ರಾಂತನಾದ ಬಳಿಕ ಈಗ ಬೆಂಗಳೂರು ನಿವಾಸಿ.

1934 ರಲ್ಲಿ ಚಿನ್ನವ್ವ ಪಾವಾಡೆಪ್ಪನವರ ಮಡದಿಯಾದರು. ಬೆಳಗಾವಿಯ ಪಿ. ಡಬ್ಲ್ಯೂ. ಡಿ. ಹೆಡ್–ಕ್ಲರ್ಕ ಬಸವಣ್ಣೆಪ್ಪಾ ನೇಸರಗಿ (ಗೆಜ್ಜಿ) ಮತ್ತು ಭಾಗೀರಥಿ ದಂಪತಿಗಳ ಹಿರಿಯ ಮಗಳು ಚಿನ್ನವ್ವ ನನಗೆ ಜನ್ಮಕೊಟ್ಟ ಅವ್ವ. 1948–51ರಲ್ಲಿ ಬೆಳಗಾವಿಯ ಕೆ.ಎಲ್.ಇ. ಸೊಸೈಟಿ ಚೇರಮನ್ನರಾಗಿದ್ದ ಬಿ.ವಿ. ಜಕಾತಿ ವಕೀಲರ ದೊಡ್ಡಪ್ಪನ ಮಗಳು ಭಾಗೀರಥಿ. ಜಕಾತಿಯವರ

ಮೂಲ ಊರು ನೇಸರಗಿ ಸಮೀಪದ ಹಣಬರಹಟ್ಟಿ. ಹಿರಿಯ ವಕೀಲರಾಗಿದ್ದ ಜಕಾತಿಯವರು ಪುಣೆಯ ಫರ್ಗ್ಯೂಸನ್ ಕಾಲೇಜಿನಲ್ಲಿ ಓದುವಾಗ ಪಿ.ಎಂ. ಬಾಂಗಿಯವರ ಪರಿಚಯವಾಗಿತ್ತು ಅಂತ ಅನಿಸುತ್ತದೆ. ಆ ಪರಿಚಯದಿಂದ ಮುಂದೆ ಇವರೊಡನೆ ಬೀಗತನವಾಗಿರಬಹುದು.

1979 ರಲ್ಲಿ ಕೊನೆಯುಸಿರೆಳೆಯುವ ತನಕ ಅಂದರೆ 45 ವರ್ಷ ಚೆನ್ನವ್ವ, ಪತಿಯ ಬಾಳ- ಸಂಗಾತಿ. ಮಕ್ಕಳು ಮೊಮ್ಮಕ್ಕಳಿಂದ ತುಂಬಿದ್ದ ವಿಶಾಲ ಸಂಸಾರವನ್ನು ತೂಗಿಸಿಕೊಂಡು ಬರುವುದರ ಜೊತೆಗೆ ರಾಜ್ಯ ಸಮಾಜ ಕಲ್ಯಾಣ ಮಂಡಳಿ, ಅಕ್ಕನ ಬಳಗ ಸೇರಿದಂತೆ ಅನೇಕ ಸಂಘ-ಸಂಸ್ಥೆಗಳಲ್ಲಿ ತಮ್ಮ ಕ್ರಿಯಾಶೀಲತೆಯಿಂದ ಜನಮನ್ನಣೆ ಗಳಿಸಿದ್ದರು. ಆ ದಿನಗಳಲ್ಲೇ ಸ್ತ್ರೀಸಬಲೀಕರಣಕ್ಕೆ ದುಡಿದಿದ್ದ ಚೆನ್ನವ್ವ ತಾಲೂಕಿನಲ್ಲಿ ಪ್ರಮುಖ ಮಹಿಳಾ ಮುಂದಾಳು. ಪಾವಾಡೆಪ್ಪನವರಿಗೆ ಚೆನ್ನವ್ವ ಸರಿಜೋಡಿ. ಆದರೆ ನನ್ನ ಅಪ್ಪನ ಕೀರ್ತಿಯಲ್ಲಿ ಹೆಚ್ಚಿನ ಪಾಲು ನನ್ನ ಅವ್ವನಿಗೇ ಸಲ್ಲುತ್ತದೆ.

ಮಡದಿ ಚೆನ್ನವ್ವ ತೀರಿಹೋದ ಮೇಲೆ ಪಾವಾಡೆಪ್ಪನವರು ಖಿನ್ನರಾದರು-ಕ್ಷೀಣಿಸಿದರು. ಇಳಿವಯಸ್ಸಿನಲ್ಲಿ ಸಂಗಾತಿಯ ಅಗಲಿಕೆಯಿಂದ ಅವರು ಅನುಭವಿಸಿದ ಏಕಾಂಗಿತನದ ನೋವು ವಿಪರೀತ. ಮುಂದೆ ನಾಲ್ಕೇ ವರ್ಷಗಳಲ್ಲಿ ಅವರೂ ಅಸ್ತಮಾನರಾದರು. "ನನ್ನ ಮಣ್ಣು ಸಾರ್ವಜನಿಕ ರುದ್ರಭೂಮಿಯಲ್ಲೇ ಆಗಬೇಕು. ನಮ್ಮ ಸ್ವಂತದ ತೋಟ-ಹೊಲದಲ್ಲಿ ಮಣ್ಣು ಮಾಡಬಾರದು." ಇದು ಅವರ ಕೊನೆಯ ಮಾತು. ಅದರಂತೆ ಜಮಖಂಡಿಯ ರುದ್ರಭೂಮಿಯಲ್ಲಿ ನನ್ನ ಅವ್ವ ಚೆನ್ನವ್ವಳ ಸಮಾಧಿಯ ಪಕ್ಕದಲ್ಲೆ ನನ್ನ ಅಪ್ಪ ಪಾವಾಡೆಪ್ಪ ಮಣ್ಣಾದರು.



**– ಚಾಮರಾಜ**

1976ರಲ್ಲಿ ಆಕಾಶವಾಣಿ ನೌಕರಿಗೆ ಸೇರುವ ಮೊದಲು
ಒಕ್ಕಲುತನ ಮತ್ತು ಮನೆಯ ವ್ಯವಹಾರ.
32 ವರ್ಷ ನ್ಯೂಸ್ ರೀಡರ್ ಅಂತ ನೌಕರಿ ಮಾಡಿ ನಿವೃತ್ತಿ.
ನಂತರ ಈಗ ಧಾರವಾಡದಲ್ಲಿ ವಕೀಲಿ.

## ಹಣ ಮಾಡಬೇಕಾದರೆ, ಗಾಳಿ ಬಿಟ್ಟಾಗ ತೂರಿಕೊಳ್ಳುವಂಥ ನೂತನ ಮಾದರಿ ಇಲ್ಲಿದೆ.

ಭಾರತದಲ್ಲಿ ಭ್ರಷ್ಟಾಚಾರ ಇಲ್ಲದಿರುವ ಸ್ಥಳವೇ ಇಲ್ಲ. ಅದು ಸರ್ವಾಂತರ್ಯಾಮಿ ಎಂದು ಮುಂಬಯಿ ರಾಜ್ಯದ ಲೋಕಾಯುಕ್ತರಾದ ಎಸ್. ಪಿ. ಕೊತವಾಲರು ಹೇಳಿದ್ದರು. ಕೊತವಾಲರು ಇದಕ್ಕೂ ಮುಂಚೆ ಮಹಾರಾಷ್ಟ್ರ ಹೈಕೋರ್ಟಿನ ಮುಖ್ಯ ನ್ಯಾಯಾಧೀಶರಾಗಿದ್ದರು. ಅಲಿಪ್ತರಾಗಿ ನಿಂತು ಅಭಿಪ್ರಾಯ ಹೇಳುವವರು ಎಂಬ ಕಾರಣದಿಂದ ಅವರ ಮಾತಿಗೆ ಬೆಲೆ ಇದೆ.

ಗಾಳಿ ಹೋಗಲಿಲ್ಲದ ಸ್ಥಳ ಇದ್ದರೂ ಇರಬಹುದು. ಭ್ರಷ್ಟಾಚಾರ ಹೋಗಲಿಲ್ಲದ ಸ್ಥಳ ಯಾವುದೂ ಭಾರತದಲ್ಲಿ ಇಲ್ಲ. ಅದು, ಎಲ್ಲಿ ಹೇಗೆ ಯಾವ ಸ್ವರೂಪದಲ್ಲಿ ಕಾಣಿಸಿಕೊಳ್ಳುತ್ತದೆ ಎಂಬುದನ್ನು ಊಹಿಸುವುದಕ್ಕೂ ಆಗಲಾರದು.

ಕರ್ನಾಟಕ ರಾಜ್ಯ ಸರಕಾರದವರು, ರಾಜ್ಯದ ಖಾಸಗೀ ಮೆಡಿಕಲ್ ಕಾಲೇಜಿಗೋಸುಗ ಆಡಳಿತ ಮಂಡಳಿಗಳನ್ನು ರಚಿಸಿ, ತನಗೆ ಬೇಕಾದ ಎಂ.ಎಲ್.ಎ. ಗಳನ್ನು ಅದರಲ್ಲಿ ಸದಸ್ಯರೆಂದು ನಾಮಕರಣ ಮಾಡಿದೆ. ಮೆಡಿಕಲ್ ಕಾಲೇಜುಗಳ ಸೀಟು ವಿಲೇವಾರಿಯಲ್ಲಿ ಬಹಳಷ್ಟು ಹಣ ಇದೆ ಎಂದು ಸರಕಾರದ ಭಾವನೆ. ಆ ಹಣವನ್ನು ನೋಡಿ ಎಷ್ಟೋ ಜನ ಅಸೆಂಬ್ಲಿ ಸದಸ್ಯರ ಬಾಯಲ್ಲಿ ನೀರೂರಿಕೊಂಡಿದ್ದಿತು. ಅನೇಕ ವಾಸನೆಗಳಲ್ಲಿ ಮುಳುಗಿರುವ ಅವರಿಗೆ ಹಣದ ವಾಸನೆ ಬೇಗನೇ ಸಿಕ್ಕುಬಿಡುತ್ತದೆ.

ಸೀಟುಗಳ ವಿಲೇವಾರಿ ಮಾಡುವುದು ಆಡಳಿತ ಮಂಡಳಿಯ ಕೆಲಸ. ಯಾವ ಆಧಾರದ ಮೇಲೆ ಸೀಟುಗಳನ್ನು ವಿಲೇವಾರಿ ಮಾಡಬೇಕೆಂದು ಗೊತ್ತು ಮಾಡಿಬಿಟ್ಟರೆ, ಅದಕ್ಕೋಸುಗ ಕಮೀಟಿ ಬೇಕಾಗಿಲ್ಲ, ಯಾವುದೂ ಬೇಕಾಗಿಲ್ಲ. ಯಾರೂ ಕೈ ಹಾಕದಂತೆ ವ್ಯವಸ್ಥೆ ಮಾಡಿಬಿಟ್ಟರೆ ಯಾರಿಗೆ ಏನು ಪ್ರಯೋಜನ? ಎಂ.ಎಲ್.ಎ. ಗಳ ಒತ್ತಾಯವು, ಸರಕಾರವನ್ನು ಆಡಳಿತ ಮಂಡಳಿ ನೇಮಿಸುವಂತೆ ಮಾಡಿತು.

ಸೀಟುಗಳನ್ನು ವಿಲೇವಾರಿ ಮಾಡುವ ಸೀಜನ್ ಈಗ ಆರಂಭವಾಗಿದೆ. ಆಡಳಿತ ಮಂಡಳಿಯಲ್ಲಿ ಎಂ.ಎಲ್.ಎ. ಗಳು ಇದ್ದರೂ, ಅವರು ಸ್ಥಳದ ಎಂ.ಪಿ. ಯ ಸಲಹೆ ಪಡೆದುಕೊಂಡು ಒಪ್ಪಿತವಾದ ಒಂದು ಯಾದಿಯನ್ನು ಸಿದ್ಧಪಡಿಸಬೇಕೆಂದು ಸರಕಾರದ ಅಲಿಖಿತ ಆದೇಶ ಇದೆಯಂತೆ. ಅದು ಇದೆಯೋ, ಇಲ್ಲವೋ ಕೆಲ ಎಂ.ಪಿ.ಗಳು ಮಾಡುವುದನ್ನು ನೋಡಿದರೆ, ಅದು ಇದ್ದಿರಬೇಕೆನ್ನುವಂತೆ ಅರ್ಥವಾಗುತ್ತದೆ.

ಇಲ್ಲಿ ಉಲ್ಲೇಖಿತವಾದ ಸಂಗತಿ ಬೆಳಗಾವಿಯ ಜವಾಹರಲಾಲ ನೆಹರೂ ಮೆಡಿಕಲ್ ಕಾಲೇಜಿಗೆ ಸಂಬಂಧಿಸಿದುದು. ಆ ಕಾಲೇಜಿನ ಆಡಳಿತ ಮಂಡಳಿಯಲ್ಲಿ ಸರ್ಕಾರದಿಂದ ನಾಮಕರಣ ಹೊಂದಿದ ವಿಜಾಪುರ ಜಿಲ್ಹೆಯ ಜಮಖಂಡಿ ಎಂ.ಎಲ್.ಎ., ಪಿ.ಎಂ. ಬಾಂಗಿ ಹಾಗೂ ಧಾರವಾಡ ಜಿಲ್ಹೆಯ ನರಗುಂದದ ಎಂ.ಎಲ್.ಎ. ವ್ಹಿ.ವಿ. ಜೋಗಣ್ಣವರ ಇದ್ದಾರೆ. ಇವರೆಲ್ಲ ಇರುವ ಆಡಳಿತ ಮಂಡಳಿಯ ಸಭೆಯನ್ನು ಬೆಳಗಾವಿಯಲ್ಲಿ ಕೆ.ಎಲ್.ಇ. ಸೊಸೈಟಿಯ ಚೇರಮನ್ ಪಿ.ಬಿ. ಪಾಟೀಲ ಎಂ.ಎಲ್.ಎ. ಇವರ ಸಮ್ಮುಖದಲ್ಲಿ ಕರೆಯಲಾಗಿತ್ತು. ಈಗ ಎಂ.ಎಲ್.ಎ. ಗಳಿಗೆ ಜೋಡಿಸಿದ ಬೆಳಗಾವಿ ಜಿಲ್ಹೆಯ ಎಂ.ಪಿ.ಯವರೂ ಕೂಡ ಅಲ್ಲಿದ್ದರು. ಸೀಟು ಹೇಗೆ ಹಂಚಬೇಕು. ಏನು ಉಪಾಯ ಮಾಡಬೇಕು ಎಂಬುದನ್ನು ಅವರು ಅವರೆದುರು ವಿವರಿಸಿ ಹೇಳತೊಡಗಿದ್ದರು. ಅವರ ಹೇಳಿಕೆಯ ತಾತ್ಪರ್ಯ ಇಷ್ಟು.

"ಈಗ ಸಮಯ ಬಂದಿದೆ. ಇದೇ ಹೊತ್ತಿನಲ್ಲಿ ಮಾಡಿಕೊಳ್ಳಬೇಕು. ಈ ಸಂಧಿ ಒಮ್ಮೆ ತಪ್ಪಿತೆಂದರೆ ಇನ್ನೊಮ್ಮೆ ಸಿಕ್ಕುವುದಿಲ್ಲ. ಸೀಟಿಗೆ ಇಂತಿಷ್ಟು ಎಂದು ತೆಗೆದುಕೊಂಡು ಕಾಲೇಜಿಗೆ ಕೊಡಬೇಕಾದುದನ್ನು ಕೊಟ್ಟು ಮಿಕ್ಕುಳಿದುದನ್ನು ನಮ್ಮ ನಮ್ಮೊಳಗೆ ಹಂಚಿಕೊಂಡರಾಯಿತು."

ಅನೇಕರು ಕದ್ದು ಮುಚ್ಚಿ ಮಾಡುವುದನ್ನು ಅವರು ಬಹಿರಂಗವಾಗಿಯೇ ಹೇಳಿದರು. ಅವರ ಸ್ಪಷ್ಟವಾದಿತ್ವವನ್ನು ಅದರಮಟ್ಟಿಗೆ ಒಪ್ಪಲೇಬೇಕು. ತಾವು ಹೇಳುವ ಮಾತಿನ ಪರಿಣಾಮವು ಕೇಳುವವರ ಮನಸ್ಸಿನ ಮೇಲೆ ಏನಾಗುವುದೋ,

ಅವರು ಯಾವ ಬಗೆಯ ಪ್ರತಿಕ್ರಿಯೆ ತೋರಿಸಬಹುದೋ ಎನ್ನುವುದೊಂದನ್ನೂ ಗಮನಿಸದೆ, ಆ ಎಂ.ಪಿ.ಗಳು ತಮ್ಮ ಕಾರ್ಡುಗಳನ್ನು ಬಿಚ್ಚಿ ಬಯಲಿಗಿಟ್ಟರು.

ತಮ್ಮ ಪಕ್ಷದ ಎಂ.ಪಿ. ಯಿಂದ ಹಣ ತೆಗೆದುಕೊಳ್ಳುವ ಸೂಚನೆ ಬಂದುದೇ ತಡ ಬಾಂಗಿಯವರು ಬೆಂಕಿ ಬೆಂಕಿಯಾದರು. "ಛೀ, ಇಂಥ ಹೊಲಸು ನಾನು ಜನ್ಮದಲ್ಲಿ ಮಾಡಿದವನಲ್ಲ. ಈಗ ನಾನು ಇಂಥ ಹೇಸಿ ಕೆಲಸದಲ್ಲಿ ನಿಮ್ಮೊಂದಿಗೆ ಕೂಡಿಕೊಳ್ಳಬೇಕೇ?"

ಬಾಂಗಿಯವರನ್ನು ಸಮಾಧಾನಪಡಿಸಲು ಪ್ರಯತ್ನಿಸಿದಂತೆ ಅವರು ವೀರಭದ್ರಾವತಾರವನ್ನೇ ತಳೆದು ನಿಂತರು. "ನ್ಯಾಯವಾಗಿ ಯಾರಿಗೆ ಸೀಟು ಸಿಕ್ಕಬೇಕೋ, ಅವರಿಗೆ ಸೀಟು ಸಿಕ್ಕುವಂತೆ, ನನ್ನ ಸದಸದ್ವಿವೇಕ ಯಾವ ರೀತಿ ಒಪ್ಪುವುದೋ ಆ ರೀತಿ ಒಂದು ಯಾದೀ ಮಾಡಿ ನಾನು ಸರಕಾರಕ್ಕೆ ಕಳಿಸಿಕೊಡುತ್ತೇನೆ. ಯಾವ ರೀತಿ ಸೀಟು ಹಂಚಬೇಕೆಂದು ಅವರಿಗನಿಸುವುದೋ, ಆ ರೀತಿ ಅವರು ಮಾಡಲಿ. ಓದುವ ಮಕ್ಕಳ ಹಣ ತಿನ್ನುವ ನಿಮ್ಮ ಹೇಸಿ ಕೆಲಸ ನನಗೆ ಬೇಕಾಗಿಲ್ಲ. ನಾನು ಬರುತ್ತೇನೆ. ನಿಮಗೆ ನಮಸ್ಕಾರ" ಎಂದು ಹೇಳುತ್ತಾ ಅವರು ಹೊರಗೆ ನಡೆದೇ ಬಿಟ್ಟರು.

**ಪ್ರಪಂಚ ವಾರಪತ್ರಿಕೆ (19-08-1973)**

# ಸಮಯ ಸಾಧಕತೆಯೊಂದಿಗೆ ರಾಜೀ ಮಾಡಿಕೊಳ್ಳದ ಹಿರಿಯ ರಾಜಕಾರಣಿ

1972 ರಿಂದ 78 ರವರೆಗೆ ರಾಜ್ಯ ವಿಧಾನಸಭೆಯಲ್ಲಿ ಜಮಖಂಡಿ ಕ್ಷೇತ್ರವನ್ನು ಸಮರ್ಥವಾಗಿ ಪ್ರತಿನಿಧಿಸಿದ್ದ ನಿರ್ಭಿಡೆಯ ರಾಜಕಾರಣಿ, ಮುತ್ಸದ್ದಿ ಹಾಗೂ ಮಾಜಿ ಶಾಸಕ ಪಿ. ಎಂ. ಬಾಂಗಿ ಈಗ ಬರಿಯ ನೆನಪಾಗಿ ಲಕ್ಷಾಂತರ ಜನರ ಮನದಲ್ಲಿ ಉಳಿದಿದ್ದಾರೆ. 82 ವಯಸ್ಸಿನ ವಯೋವೃದ್ಧರಾಗಿದ್ದ ಅವರು ದಿನಾಂಕ 21.07.1983 ರಂದು ಕೊನೆಯುಸಿರೆಳೆದರು.

50 ವರ್ಷಗಳ ಹಿಂದೆ ಕಾನೂನು ಓದಿ ಜಮಖಂಡಿಯಲ್ಲಿ ವಕೀಲಿ ಆರಂಭಿಸಿದ ಅವರು ಸ್ವಲ್ಪ ಅವಧಿಯಲ್ಲೇ ಸುಪ್ರಸಿದ್ಧ ವಕೀಲರೆಂದು ಹೆಸರುಗಳಿಸಿದ್ದರಲ್ಲದೆ ಜೊತೆಗೆ ಸಾಮಾಜಿಕ ಸೇವೆಗೂ ಧುಮುಕಿದರು. ಜಮಖಂಡಿ ಸಂಸ್ಥಾನದಲ್ಲಿ ಅವರು ಮಂತ್ರಿಯಾಗಿ ಕಾರ್ಯನಿರ್ವಹಿಸಿದ ಅವರು ಬಹಳ ಶಿಸ್ತಿನ ಮನುಷ್ಯನೆಂಬ ಹೆಸರು ಪಡೆದಿದ್ದರು. ಸ್ವಾತಂತ್ರ್ಯ ನಂತರವೂ ಅವರು ತಮ್ಮ ರಾಜಕೀಯವನ್ನು ಮುಂದುವರಿಸಿ ಸುಮಾರು 15 ವರ್ಷಗಳ ಕಾಲ ಕಾಂಗ್ರೆಸ್ ವಿರೋಧಿಗಳಾಗಿ ಜತ್ತಿಯವರ ಹಾಗೂ ಆರ್. ಎಂ. ದೇಸಾಯಿ ಅವರ ವಿರೋಧ ನಿಂತು ಸೋತರು. 1969 ರಲ್ಲಿ ಕಾಂಗ್ರೆಸ್ಸು ಇಬ್ಭಾಗವಾದಾಗ ಅವರು ಇಂದಿರಾ ಕಾಂಗ್ರೆಸ್ ಪಕ್ಷಕ್ಕೆ ಆಕರ್ಷಿತರಾಗಿ ಅದೇ ವರ್ಷ ಜಮಖಂಡಿ ಕ್ಷೇತ್ರದಲ್ಲಿ ನಡೆದ ವಿಧಾನಸಭೆ ಉಪ ಚುನಾವಣೆಯಲ್ಲಿ ಮತ್ತೆ ಸೋತರೂ ಹಿಂಜರಿಯದೆ 1972 ರಲ್ಲಿ ಸ್ಪರ್ಧಿಸಿ ಸಫಲರಾದವರು.

ಅರ್ಧ ಶತಕದಷ್ಟು ಆಯುಷ್ಯವನ್ನು ರಾಜಕೀಯದಲ್ಲಿ ಕಳೆದ ಅವರು ನಿಷ್ಠುರತೆಗೆ ಹೆಸರಾಗಿದ್ದರು. ಏನನ್ನೇ ಹೇಳುವುದಿದ್ದರೂ ಅವರು ಮುಖದ ಮುಂದೆಯೇ ಹೇಳುತ್ತಿದ್ದರೇ ವಿನಃ ಅವರಿಗೆ ಹಿಂದೆ ಎಂಬುದು ಗೊತ್ತೇ ಇರಲಿಲ್ಲ. ಬಹಳ ಕಾಲದ ಹಿಂದೆಯೇ ಕೈಮಗ್ಗ ನೇಕಾರರ ಪರವಾಗಿ ಹೋರಾಟ ಮಾಡಿದ ಅವರು ಕೊನೆಯುಸಿರು ಇರುವವರೆಗೂ ಆ ಸಂಘಟನೆ ಬಿಡಲಿಲ್ಲ. ವಿಧಾನಸಭಾ ಸದಸ್ಯರಾಗಿದ್ದ ಕಾಲದಲ್ಲಿ ಅವರು ರಾಜ್ಯ ಕೈಮಗ್ಗ ಅಭಿವೃದ್ಧಿ ನಿಗಮದ ಅಧ್ಯಕ್ಷರಾಗಿ ಕೈಮಗ್ಗದ ಉದ್ದಿಮೆಯ ಏಳಿಗೆಗಾಗಿ ಅಪಾರವಾಗಿ

ಶ್ರಮಿಸಿದರು. ಅವರ ಅಗಲುವಿಕೆಯಲ್ಲಿ ಕೈಮಗ್ಗ ಉದ್ದಿಮೆ ತನ್ನ ಏಕಮೇವ ಧೀಮಂತ ನಾಯಕರನ್ನು ಕಳೆದುಕೊಂಡಿದೆ.

ಸುಳ್ಳು ಮೋಸ ವಂಚನೆಯೆಂದರೆ ಅವರಿಗೆ ಎಂದೂ ಆಗಿಬರಲಿಲ್ಲ. ಭ್ರಷ್ಟ ಅಧಿಕಾರಿಗಳಿಗೆ ಅವರು ಸಿಂಹಸ್ವಪ್ನರಾಗಿದ್ದರು. ವಿಧಾನಸಭಾ ಸದಸ್ಯತ್ವ ಹೋದರೂ ಅವರು ಸಾಮಾಜಿಕ ಜೀವನದಿಂದ ಹಿಂದೆ ಸರಿಯಲಿಲ್ಲ. ಕೈಮಗ್ಗದ ಹಿತರಕ್ಷಣೆಯ ಜೊತೆಗೆ ರೈತರ ಸಂಘಟನೆಗೂ ಅವರು ತೊಡಗಿದರು. ಅವರ ಇಳಿವಯಸ್ಸು ಅವರ ಕೆಲಸಗಳಿಗೆ ಎಂದೂ ಅಡ್ಡ ಬರಲಿಲ್ಲ. ಎರ್ಡು ವರ್ಷಗಳ ಹಿಂದೆ ಅವರು ತಮ್ಮ ಧರ್ಮಪತ್ನಿ ಚಿನ್ನಮ್ಮ ಅವರನ್ನು ಕಳೆದುಕೊಂಡ ಮೇಲೆ ಸ್ವಲ್ಪ ಅಘಾತವನ್ನೆದುರಿಸಬೇಕಾಯಿತು.

ಇತ್ತೀಚೆಗೆ ಅವರ ಆರೋಗ್ಯ ಅಷ್ಟು ಚೆನ್ನಾಗಿ ಉಳಿಯಲಿಲ್ಲ. ದಿ. 22 ರಂದು ನಡೆದ ಅವರ ಅಂತ್ಯಯಾತ್ರೆಯಲ್ಲಿ ಜಮಖಂಡಿಯ ಇತಿಹಾಸದಲ್ಲಿ ಕಂಡರಿಯದ ಜನಸಮೂಹ ಸೇರಿ ಅಗಲಿದ ಹಿರಿಯ ರಾಜಕಾರಣಿಗೆ ತನ್ನ ಅಂತಿಮ ಗೌರವ ಸಲ್ಲಿಸಿತು. ದಿ. ಬಾಂಗಿಯವರು ತಮ್ಮ ಹಿಂದೆ ನಾಲ್ವರು ಪುತ್ರರು, ಮೂವರು ಪುತ್ರಿಯರು ಹಾಗೂ ಬಂಧು ಬಳಗವನ್ನಗಲಿದ್ದಾರೆ. ದಿ. ಬಾಂಗಿಯವರಿಗೆ "ಕುರುಕ್ಷೇತ್ರ" ದ ಆದರದ ಶ್ರದ್ಧಾಂಜಲಿಗಳು.

**ಕುರುಕ್ಷೇತ್ರ ವಾರಪತ್ರಿಕೆ (31.07.1983)**

# ಸಾಧನೆ – ಸ್ಮರಣೆ

ಪ್ರಾಮಾಣಿಕತೆ, ನಿಷ್ಠುರತೆ, ಗಾಂಭೀರ್ಯಕ್ಕೆ ಜೀವಂತ ನಿದರ್ಶನವಾಗಿದ್ದ ಶ್ರೀ ಪಿ.ಎಂ. ಬಾಂಗಿ ವಕೀಲರು ನಮ್ಮನ್ನಗಲಿ ಹೋದುದು ತುಂಬಿದಾರದ ಹಾನಿ. ಈ ಮೌಲ್ಯಗಳಿಗಾಗಿಯೇ ಅವರು ಕೇವಲ ಎಂ. ಎಲ್. ಎ. ಆಗಿದ್ದರೂ ಇಡೀ ರಾಜ್ಯಕ್ಕೆ ಚಿರಪರಿತರಾಗಿದ್ದರು. ಜಮಖಂಡಿ ತಾಲೂಕು ಒಬ್ಬ ಮುಖ್ಯಮಂತ್ರಿಯನ್ನು ಪಡೆದಿತ್ತು ಮತ್ತು ಒಬ್ಬ ಮಂತ್ರಿಯನ್ನೂ ಹೊಂದಿತ್ತಾದರೂ ಇವರೀರ್ವರ ಕೊಡುಗೆ ಸೊನ್ನೆ. ಆದರೆ ಬಾಂಗಿ ಅವರು ಏನೂ ಆಗದೆ ಸಾಕಷ್ಟು ಕೆಲಸ ಮಾಡಿದರು. ಬನಹಟ್ಟಿ ನಗರಕ್ಕೆ ಅವರು ಮಾಡಿದ್ದು ಎಂದಿಗೂ ಮರೆಯಲಾಗದ ಕೆಲಸ. 1973 ರಲ್ಲಿ ಬರಗಾಲ ಪರಿಹಾರ ಕಾಮಗಾರಿಯಲ್ಲಿ ಕೆರೆ ಕಟ್ಟಿಸಿಕೊಟ್ಟರು. ಬನಹಟ್ಟಿ, ಜಗದಾಳ, ಹೊಸೂರು ಗ್ರಾಮಗಳ ಸಾವಿರಾರು ರೈತರು ಇದನ್ನು ಪಡೆದು ಧನ್ಯರಾಗಿದ್ದಾರೆ. ಸುಡುವ ಬೇಸಿಗೆಯ ಎಪ್ರೀಲ್ ಮೇ ತಿಂಗಳಲ್ಲೂ ಈ ಭಾಗದ ಬಾವಿಗಳಲ್ಲಿ ನೀರು ಇರುತ್ತದೆ. ಹೀಗಾಗಿ ಬಾಂಗಿಯವರು ಬನಹಟ್ಟಿ ಸುತ್ತಮುತ್ತಲಿನ ರೈತರ ಮನದಲ್ಲಿ ಚಿರವಾಗಿ ಉಳಿದಿದ್ದಾರೆ.

ದಿ. ಪಿ.ಎಂ. ಬಾಂಗಿ ವಕೀಲರ ಇನ್ನೊಂದು ಶಾಶ್ವತವಾದ ಕೆಲಸವೆಂದರೆ ಬನಹಟ್ಟಿಯಲ್ಲಿ ತೀವ್ರ ಕೈಮಗ್ಗ ಅಭಿವೃದ್ಧಿ ಯೋಜನೆ ಕಾರ್ಯಗತ ಮಾಡಿದ್ದು. ನಶಿಸಿ ಹೋಗುತ್ತಿದ್ದ ಈ ಭಾಗದ ಮೋಲೋದ್ಯೋಗವಾದ ನೇಕಾರಿಕೆ ಈ ಯೋಜನೆಯಿಂದ ಜೀವಂತವಾಗಿ ಉಳಿಯುವುದು. ಬಡ ನೇಕಾರ ಬದುಕಲು ಇದು ಆಸರೆಯಾಗಿದೆ. ಶ್ರೀ ಬಾಂಗಿಯವರ ಈ ಮಹತ್ತರ ಕಾರ್ಯಗಳ ನೆನಪಿಗಾಗಿಯೇ ಬನಹಟ್ಟಿಯ ಒಂದು ಕಾಲೋನಿಗೆ ಅವರ ಹೆಸರಿಟ್ಟು ಅವರ ಮೂರ್ತಿ ಸ್ಥಾಪಿಸಲಾಗಿದೆ.

**ಜಯವಂತ ಕಾಡದೇವರ**

ವಿಕ್ರಾಂತ ಭಾರತ ವಾರ ಪತ್ರಿಕೆ (29–07–1983)

# ಶ್ರೀ ಪಿ. ಎಮ್. ಬಾಂಗಿಯವರೊಡನೆ ಕೊನೆಯ ಭೆಟ್ಟಿ

ಜೀವನದಲ್ಲಿ ಎಲ್ಲಕ್ಕಿಂತ ಘನತೆಯೇ ಹೆಚ್ಚಿನದು. ಲೋಕದಲ್ಲಿ ಮನುಷ್ಯನು ಹೊಂದಿದ ಯಾವ ಪದವಿ ಪ್ರತಿಷ್ಠೆ ಸಂಪತ್ತುಗಳೂ ಘನತೆಗೆ ಸಮಯೆನಿಸಲಾರವು. ಹಣ–ಪ್ರಭಾವ–ಅಧಿಕಾರದಿಂದ ಘನತೆಯನ್ನು ಪಡೆದುಕೊಳ್ಳಲಿಕ್ಕಾಗುವುದಿಲ್ಲ. ಘನತೆಯು ಚೊಕ್ಕ ಚಿನ್ನದಂತೆ ಎಂಥ ಗಿಲೀಟು ಒರೆಗೆ ಹತ್ತಲಾರದು. ಘನತೆಯು ಅಧಿಕಾರವನ್ನು ಬಯಸುವುದಿಲ್ಲ. ಅಧಿಕಾರ ಇರಲಿ ಇರದಿರಲಿ ಘನತೆಯ ಬೆಲೆಯೇನೂ ತಗ್ಗುವುದಿಲ್ಲ. ಘನತೆಯುಳ್ಳ ಮನುಷ್ಯನ ಬೆಲೆಯು ಅವನ ಅಧಿಕಾರದ ಮೇಲೆ ಅವಲಂಬಿಸಿರುವುದಿಲ್ಲ. ಅಧಿಕಾರದಿಂದ ಬೆಳೆಯುಳ್ಳವನೆನಿಸಿರುವ ಮನುಷ್ಯನು ಅಧಿಕಾರ ಕಳೆದುಕೊಂಡೊಡನೆಯೇ ಅಮೌಲ್ಯಗೊಳ್ಳುತ್ತಾನೆ.

ಪದವಿ ಪ್ರತಿಷ್ಠೆಗಳಿಂದ ಘನತೆಗೆ ಬೆಲೆ ಬರುವುದಿಲ್ಲ. ಘನತೆಯಿಂದ ಪದವಿ ಪ್ರತಿಷ್ಠೆಗಳಿಗೆ ಬೆಲೆ ಬರುತ್ತದೆ. ನಿಜವಾದ ಮನುಷ್ಯನು ಪದವಿ ಪ್ರತಿಷ್ಠೆಗಳನ್ನು ಬಿಟ್ಟಾನು. ಆದರೆ ಘನತೆಯನ್ನು ಬಿಟ್ಟುಕೊಡುವುದಿಲ್ಲ. ಘನತೆಯನ್ನು ಕಳೆದುಕೊಂಡರೆ ಮನುಷ್ಯನೇ ಕಳೆದು ಹೋಗುತ್ತಾನೆ. ಘನತೆಯುಳ್ಳ ಮನುಷ್ಯನು ಅಧಿಕಾರ ಕಳೆದುಕೊಂಡರೂ ಅವನ ಘನತೆಯೇನೂ ಕಳೆದು ಹೋಗುವುದಿಲ್ಲ. ತನ್ನಲ್ಲಿ ಅಧಿಕಾರ ಇರುವಾಗ ಘನತೆಯಿಂದ ನಡೆದುಕೊಳ್ಳುವ ಮನುಷ್ಯನು ತಾನು ನಿರ್ವಹಿಸಿದ ಸ್ಥಾನದ ಬೆಲೆಯನ್ನು ಗೌರವವನ್ನು ಹೆಚ್ಚಿಸುತ್ತಾನೆ.

ಇಂಥ ಘನವಾದ ವ್ಯಕ್ತಿತ್ವ ಜಮಖಂಡಿಯ ಹಿಂದಿನ ಶಾಸಕರು–ಜನಹಿತ ಚಿಂತಕರು–ನೇಕಾರರ ಮುಖಂಡರು ಆದ ಶ್ರೀ ಪಿ. ಎಂ. ಬಾಂಗಿಯವರಲ್ಲಿದೆ. ಶ್ರೀಯುತರು 81 ರ ಗಡಿ ದಾಟಿ ಪ್ರಕೃತಿ ಕ್ಷೀಣಗೊಂಡು ನಿತ್ರಾಣರಾದರೂ ಮತ್ತು ಜನರ ಬಗ್ಗೆ ಚಿಂತನೆಗೊಂಡು ಪ್ರಚಲತ ರಾಜಕೀಯ ಬಗ್ಗೆ ವಿಚಾರ ವಿನಿಮಯ ಮಾಡುವುದನ್ನು ನೋಡಿದರೆ ಇವರಲ್ಲಿರುವ ದೇಶಾಭಿಮಾನ, ಜನರ ಬಗ್ಗೆ ಕಳಕಳಿ ಎದ್ದು ಕಾಣುತ್ತದೆ. ಹಿಂದಿನ ಮೂವತ್ತು ವರುಷಗಳ ರಾಜಕೀಯ ಬಗ್ಗೆ ವಿಚಾರಿಸಿದಾಗ ರಾಜ್ಯದ, ಜಿಲ್ಲೆಯ, ತಾಲೂಕಿನ ಅಂಕಿ ಸಂಖ್ಯೆಗಳೊಂದಿಗೆ

ವಿವರಣೆ ನೀಡುತ್ತಾರೆ. ಅವರ ಜ್ಞಾಪಕ ಶಕ್ತಿ ನೋಡಿದರೆ ಅಚ್ಚರಿ ಪಡಬಹುದು. ಇವರು ಶಾಸಕರಾಗಿದ್ದ ಸಮಯದಲ್ಲಿ ತಾಲೂಕಿನ ಅನೇಕ ಕೆಲಸಗಳನ್ನು ಮಾಡಿ ಒಂದು ದಾಖಲೆ ಸ್ಥಾಪಿಸಿದ್ದಾರೆ.

ನೇಕಾರರ ಜನಾಂಗದ ಬಗ್ಗೆ ಅನುಕಂಪವಿದ್ದು ರಾಜ್ಯದಲ್ಲಿ ಹ್ಯಾಂಡಲೂಮ್ ಕಾರ್ಪೋರೇಶನ್ ಮಾಡಿ ನೇಕಾರರಿಗೆ ಉಪಯುಕ್ತತೆಯನ್ನು ಒದಗಿಸಿದರು. ಜಮಖಂಡಿ ತಾಲೂಕಿನ ಬನಹಟ್ಟಿ ಗ್ರಾಮದಲ್ಲಿ ಕೈಮಗ್ಗ ಕಾರ್ಪೋರೇಶನ್ ಮಾಡಿ ಸಾವಿರಾರು ಕುಟುಂಬಗಳು ಬದುಕುವಂತೆ ಮಾಡಿದ ಶ್ರೇಯಸ್ಸು ಇವರಿಗೆ ಸಲ್ಲುತ್ತದೆ. ಇದೂ ಅಲ್ಲದೆ ಅವರು ತಮ್ಮ ಅಧಿಕಾರ ಅವಧಿಯಲ್ಲಿ ಬರಗಾಲ ಕಾಮಗಿರಿ, ಲಿಫ್ಟ ಇರಿಗೇಷನ್ ಹೀಗೆ ಅನೇಕ ಕೆಲಸ ಕಾರ್ಯಗಳನ್ನು ಮಾಡಿ ತಮ್ಮ ಸೇವೆ ಸಲ್ಲಿಸಿದರು.

ಈ ತಲೆಮಾರಿನ ರಾಜಕೀಯ ವ್ಯಕ್ತಿಗಳಲ್ಲಿ ಶ್ರೀ ಪಿ. ಎಂ. ಬಾಂಗಿಯವರು ಮಾತ್ರ ವಿಶಿಷ್ಟ ವ್ಯಕ್ತಿತ್ವ ಹೊಂದಿದ ಅಪರೂಪದ ಮುಂದಾಳುವಾಗಿದ್ದಾರೆ. ರಾಜಕಾರಣದಲ್ಲಿ ಅನೇಕ ಏರುಪೇರು ಕಂಡ ಅನುಭವಿ. ಎಲ್ಲೇ ಅನ್ಯಾಯವಾಗಲಿ ಪ್ರತಿಭಟನೆ ಮಾಡತಕ್ಕವರು. ಯಾರು ಎಷ್ಟೇ ವಿರೋಧ ಮಾಡಿದರೂ ಯಾರಿಗೂ ಹೆದರದೆ ಅಂಜದೆ ಅಳುಕದೆ ತಮ್ಮ ಹಟ ಬಿಡತಕ್ಕವರಲ್ಲ. ಇವರು ತಮ್ಮ ಜೀವನ ತುಂಬ ಯಾವ ಆಶೆ ಆಮಿಷಕ್ಕೆ ಬಲಿಯಾಗದೇ ಶುದ್ಧ ಚಾರಿತ್ರ್ಯ ಕಾಯ್ದುಕೊಂಡು ಪ್ರಾಮಾಣಿಕತೆಯಿಂದ ನಡೆದು ಮುಂದಿನ ತಲೆಮಾರಿನವರಿಗೆ ಒಂದು ಆದರ್ಶಪ್ರಾಯರಾಗಿದ್ದಾರೆ. ತಮ್ಮ ಅವಧಿಯಲ್ಲಿ ಆಗದೇ ಇದ್ದ ಕೆಲಸದ ಬಗ್ಗೆ ವ್ಯಥೆಪಟ್ಟರು. ಯಲ್ಲಟ್ಟಿ ಹತ್ತಿರ (ಚಿಕ್ಕ ನವಿಲುತೀರ್ಥ) ನೀರಿನ ಸಂಗ್ರಹವಾದರೆ ಕೆಳಗೆ ಎಲ್ಲ ಭಾವಿಗಳಲ್ಲಿ ನೀರು ಸದಾ ಇರುವುದು ಮತ್ತು ಅದರಿಂದ ಎಲ್ಲ ರೈತರಿಗೆ ಉಪಯೋಗವಾಗುವುದೆಂಬ ಅವರ ಕನಸು ಹಾಗೇ ಉಳಿಯಿತು. ಇನ್ನೂ ಅನೇಕ ಕಡೆ ಲಿಫ್ಟ ಇರಿಗೇಶನ್, ಬರಗಾಲ ಕೆಲಸಗಳು ಆಗಬೇಕಾಗಿವೆ ಎಂದ ಅವರಿಗೆ ತಮ್ಮ ಕಾರ್ಯ ಕಾಲದಲ್ಲಿ ಆಗದ ಯೋಜನೆಗಳ ಬಗ್ಗೆ ಚಿಂತೆಯಿದೆ. ಇತ್ತೀಚೆಗೆ ಜಮಖಂಡಿಯಲ್ಲಿ ನೀರಿನ ಬಿಲ್ಲು ಏರಿಸಿದ್ದನ್ನು ಪ್ರತಿಭಟಿಸಲು ಸಂಘರ್ಷ ಸಮಿತಿಯವರಿಗೆ ಮಾರ್ಗದರ್ಶನ ಮಾಡಿದರು. ಅಶಕ್ತರಾಗಿ ಏಳಲು ಬಾರದಂತಿದ್ದರೂ ಜನರ ಸಮಸ್ಯೆಗಳ ಬಗ್ಗೆ ಅವರಿಗಿದ್ದ

ಅನುಕಂಪ ಕಡಿಮೆಯಾಗಿರಲಿಲ್ಲ. ಅನ್ಯಾಯದ ಎದುರು ಮೌನವಾಗಿರಬಾರದು, ಪ್ರತಿಭಟಸಬೇಕು ಎನ್ನುವುದು ಅವರ ಸಂದೇಶ. ನುಡಿದಂತೆ ನಡೆದ ಆದರ್ಶ ವ್ಯಕ್ತಿಯಾಗಿದ್ದಾರೆ ಪಿ. ಎಂ. ಬಾಂಗಿಯವರು.

ಕೈಮಗ್ಗ ನೇಕಾರರಿಗಾಗಿ 50 ವರುಷಗಳಿಂದ ಹೋರಾಟ ನಡೆಸುತ್ತ ಬಂದ ಅವರು ಎಂದೂ ಹಿಂದೆ ಸರಿಯದೆ ನಿಂತು ಕೈಮಗ್ಗ ನೇಕಾರರಿಗೆ ಬೆನ್ನೆಲುಬು ಆಗಿದ್ದರು. ಶ್ರೀಮಂತರು ಅನೇಕ ಎಂ.ಎಲ್.ಎ. ಗಳನ್ನು ಕೊಳ್ಳುವಂತೆ ಇವರನ್ನು ಕೊಳ್ಳುವುದು ಯಾರಿಂದಲೂ ಸಾಧ್ಯವಾಗಲಿಲ್ಲ.

ಸಂಪಾದಕರಾದ ಶ್ರೀ ಎಂ. ಸಿ. ಗೊಂದಿ ಹಾಗೂ ಶ್ರೀ ಭೂಪಾಲ ನಾಂದ್ರೇಕರ ಒಂದು ತಾಸಿನವರೆಗೆ ಚರ್ಚೆ ನಡೆಸಿದರು. ಮನೆಯ ವಿಷಯವಾಗಿ ಒಂದು ಶಬ್ದ ಕೂಡ ಬಿಡದೇ ಕೇವಲ ರಾಜಕೀಯ ಹಾಗೂ ಜನರ ಜೀವನದ ಬಗ್ಗೆ ಚರ್ಚೆ ನಡೆಯಿತು. ಒಬ್ಬ ಮಹಾ ಮುತ್ಸದ್ಧಿ ಪ್ರಜ್ಞಾವಂತ, ವೈಚಾರಿಕ, ವಿಚಾರವಾದಿ ರಾಜಕೀಯ ಹಿರಿಯ ಮುಖಂಡರಾದ ಶ್ರೀ ಪಿ.ಎಂ. ಬಾಂಗಿಯವರ ಪ್ರಕೃತಿ ಉತ್ತಮವಾಗಲಿ. ಅವರ ಸೇವೆ ಅವರ ಮಾರ್ಗದರ್ಶನ ಇನ್ನೂ ಒದಗಲೆಂದು "ವಿಕ್ರಾಂತ ಭಾರತ" ಆಶಿಸುತ್ತದೆ.

**ವಿಕ್ರಾಂತ ಭಾರತ ವಾರ ಪತ್ರಿಕೆ 24–06–1983**

## ಜಮಖಂಡಿ ಅರ್ಬನ್ ಬ್ಯಾಂಕ ಚುನಾವಣೆ : ರೋಮಾಂಚಕ ವಿಜಯ

ಇಡೀ ಜಮಖಂಡಿ ತಾಲೂಕಿನ ಕುತೂಹಲ ಕೆರಳಿಸಿದ್ದ ಅರ್ಬನ್ ಬ್ಯಾಂಕಿನ ಚುನಾವಣೆ ಮುಗಿದಂತಾಗಿದೆ. ನಾಮಪತ್ರ ಹಿಂತೆಗೆಯುವ ಕೊನೆಯ ನಿಮಿಷದ ನಂತರ ಸ್ಪರ್ಧೆಯಿಂದ ಹಿಂದೆಸರಿದು ತಮಗೆ ಮತ ಹಾಕದಂತೆ ಬಹಿರಂಗ ಪ್ರಕಟಣೆ ಹೊರಡಿಸಿ ಸುಮ್ಮನೆ ಕುಳಿತಿದ್ದ ಪಿ. ಎಮ್. ಬಾಂಗಿ ಅವರಿಗೆ ಸ್ಪರ್ಧಿಸಲೇಬೇಕೆಂದು ಒತ್ತಾಯಿಸುವ ಇನ್ನೊಂದು ಪ್ರಕಟಣೆ, ನೂರಾರು ಜನ ಪ್ರಮುಖರ ಸಹಿಗಳೊಂದಿಗೆ ಹೊರಬಂದಿತು. ಈ ಸಲ ಬಾಂಗಿಯವರ ಬೆಂಬಲಿಗರು ಒಂದು ಹೆಜ್ಜೆ ಮುಂದೆ ಹೋಗಿ ಬನಹಟ್ಟಿಯಲ್ಲಿ ಸಾರ್ವಜನಿಕ ಸಭೆ ಮಾಡಿ ಜನರ ಮತ ಯಾಚಿಸಿದರು.

ಏನಿದ್ದರೂ ಚುನಾವಣೆಯ ದಿವಸ ಮಾತ್ರ ಜಮಖಂಡಿಯ ಪಾಗಾ ರಸ್ತೆಯಲ್ಲಿ ದೃಶ್ಯ ನೋಡುವಂತಿತ್ತು. ಅಲ್ಲಿ ಜನರಿಂದ ಇಡೀ ರಸ್ತೆ ತುಂಬಿ ಹೋಗಿತ್ತು. ನೂರಾರು ಜನರು "ಬಾಂಗಿಯವರಿಗೆ ಮತ ಕೊಡಿರಿ" ಎಂಬರ್ಥ ಸೂಚಿಸುವ ಬ್ಯಾಜ್‌ಗಳನ್ನು ಎದೆಯ ಮೇಲೆ ಧರಿಸಿ ಭಾರೀ ಉತ್ಸಾಹದಿಂದ ಓಡಾಡುತ್ತಿದ್ದರು. ಇತ್ತೀಚಿನ ವರ್ಷಗಳಲ್ಲಿ ಈ ರೀತಿ ತುರುಸಿನ ಚುನಾವಣೆ ನಡೆದಿರಲಿಲ್ಲವೆಂದು ಜನರು ಮಾತನಾಡುತ್ತಿದ್ದರು. ಬಸ್ಸು, ಟೆಂಪೋ, ಕಾರುಗಳು, ಟ್ಯಾಕ್ಸಿಗಳು ಮತದಾರರನ್ನು ಹೊತ್ತು ತರುವಲ್ಲಿ ನಿರತವಾಗಿದ್ದವು. ಮತದಾರರನ್ನು ಖುಷ್ ಮಾಡಲು ಎರಡೂ ಗುಂಪಿನವರು ಚಹಾದ ಚೀಟಿಗಳನ್ನು ಯಥೇಚ್ಛವಾಗಿ ಹಂಚುತ್ತಿದ್ದರು. ಬನಹಟ್ಟಿಯ ಮತದಾರರು ಎರಡೂ ಗುಂಪಿನ ಪರವಾಗಿ ಬಂದು ತಮ್ಮ ತಮ್ಮ ಅಭ್ಯರ್ಥಿಗಳಿಗೆ ಮತ ನೀಡಿದರು. ಎಂದಿನಂತೆ ಶ್ರೀ ಬಾಂಗಿಯವರಿಗೆ ಬನಹಟ್ಟಿಯಲ್ಲಿ ಭಾರೀ ಪ್ರಮಾಣದ ಬೆಂಬಲ ಚುನಾವಣೆಯ ಕಾಲಕ್ಕೆ ಕಂಡುಬಂತು. ಅದು ನಿರೀಕ್ಷಿತವೂ ಆಗಿತ್ತು. ರಾಜಕೀಯದಲ್ಲಿ ಶ್ರೀ ಬಾಂಗಿಯವರನ್ನು ವಿರೋಧಿಸುತ್ತಿದ್ದವರು ಸಹ ಬ್ಯಾಂಕಿನ ಭದ್ರತೆಯ ದೃಷ್ಟಿಯಿಂದ ಅವರ ಪರವಾಗಿ ಬಹಿರಂಗ ಪ್ರಚಾರ ಮಾಡುತ್ತಿರುವುದು ಎದ್ದು ಕಾಣುತ್ತಿತ್ತು. ಈ ಗದ್ದಲದಲ್ಲಿಯೂ "ಇಂಡಿಕೇಟು" ಎಂದು ಅರಚುವ ಬುದ್ಧಿಗೇಡಿಗಳೂ ಇದ್ದರು. ಎರಡೂ ಕಡೆಯ ಜನ ಅತ್ಯಂತ ತುರುಸಿನ ಪ್ರಚಾರ

ನಡೆಸಿದ್ದರು. ಎಲ್ಲಿ ಈ ಪ್ರಚಾರ ಘರ್ಷಣೆಗೆ ಕಾರಣವಾಗುವದೋ ಎಂದು ಯೋಚಿಸಿದ್ದ ಕೆಲವರ ಅಂದಾಜು ತಲೆ ಕೆಳಗಾಯಿತು. ಸಂಜೆ ಮತಗಳ ಎಣಿಕೆ ಆರಂಭವಾದಾಗ, ಬಂಗಿಯವರು ಪ್ರಾರಂಭದಲ್ಲಿಯೇ ಮುನ್ನಡೆ ಸಾಧಿಸಿದ್ದರು. ಬನಹಟ್ಟಿಯಲ್ಲಿ ಅವರು ತಮ್ಮ ಇತರ ಸ್ಪರ್ಧಿಗಳಿಗಿಂತ ಸುಮಾರು 200 ಮತಗಳಿಂದ ಮುಂದಿದ್ದರು. ಅಂತಿಮವಾಗಿ ಎಣಿಕೆ ಮುಗಿದಾಗ ಶ್ರೀ ಬಾಂಗಿಯವರು ಪ್ರಥಮರಾಗಿ ಚುನಾಯಿತರಾದರು. ಹೊರಗಡೆ ಅವರ ಉತ್ಸಾಹೀ ಬೆಂಬಲಿಗರು ಪಟಾಕ್ಷಿಗಳನ್ನು ಹಾರಿಸಿ ತಮ್ಮ ಸಂತೋಷ ವ್ಯಕ್ತಪಡಿಸಿದರು.

ಚುನಾಣೆಯ ಫಲಿತಾಂಶ ರಾತ್ರಿ 8–30 ರ ಸುಮಾರಿಗೆ ಅಧಿಕೃತವಾಗಿ ಹೊರಬಿದ್ದು ಕ್ರಮವಾಗಿ ಶ್ರೀ ಬಾಂಗಿ ವಕೀಲರು, ಶ್ರೀ ಆಸಾರಾಮ ಭುತಡಾ, ಶ್ರೀ ಗಣಪತರಾವ ಇಂಗಳಗಿಯವರು ಚುನಾಯಿತರಾದರು. ಕೇವಲ 50–60 ಮತಗಳ ಅಂತರದಿಂದ ಶ್ರೀ ಶಂಕರ ರಾವ ಲಾಡ ಅವರು ಸೋತರು.

ಚುನಾವಣೆಯೇನೋ ಮುಗಿಯಿತು. ಸದ್ಯ ಇರುವ ಡೈರೆಕ್ಟರ್ ಮಂಡಳಿಯಲ್ಲಿ ಶ್ರೀ ಬಾಂಗಿಯವರಿಗೆ ಬಹುಮತವಿಲ್ಲ. ಕಾರಣ ಅವರು ಮತ್ತೊಮ್ಮೆ ಚೇರಮನ್‌ರಾಗುವುದು ಅಸಂಭವವೆಂದು ಹೇಳಲಾಗುತ್ತದೆ. ಅವರು ಚೇರಮನ್‌ರಾಗಲೀ ಬಿಡಲಿ ಬ್ಯಾಂಕಿನಲ್ಲಿ ನಡೆಯುವ ಹೊಲಸನ್ನು ಹೊರತೆಗೆಯಲು ಅವರೊಬ್ಬರೇ ಸಾಕೆಂದು ಅವರ ಅಭಿಮಾನಿಗಳ ಅಭಿಪ್ರಾಯವಾಗಿದೆ. ಒಂದು ಅಂಶ ಮಾತ್ರ ಸ್ಪಷ್ಟವಾಗಿದೆ. ಅದೆಂದರೆ ಜಮಖಂಡಿಯ ಸಿಂಡಿಕೇಟಿನಲ್ಲಿ ಈಗ ಮತ್ತೊಮ್ಮೆ ಬಿರುಕು ಬಿಟ್ಟಿದೆ. "ಬಾಂಗಿ ವಕೀಲರನ್ನು ಇಂಡಿಕೇಟ್ ಸದಸ್ಯರನ್ನಾಗಿ ಮಾಡಿದ ಮೇಲೆಯೇ ಅವರಿಗೆ ನಾವು ಬೆಂಬಲ ಕೊಟ್ಟಿದ್ದೇವೆ" ಎಂದು ಪತ್ತಾರ ವಕೀಲರು ಹಾಗೂ ಅವರ ಜನರು ಹೇಳುತ್ತಿದ್ದಾರಂತೆ! ಇದು ಎಷ್ಟರ ಮಟ್ಟಿಗೆ ನಿಜವೆಂಬುದನ್ನು ಭವಿಷ್ಯವೇ ಹೇಳಬೇಕು. ಜಮಖಂಡಿ ಕಾಂಗ್ರೆಸ್ಸಿನ ಹಳೆಯ ಹುಲಿ, ಶ್ರೀಶೈಲಪ್ಪ ಅಥಣಿಯವರು ಬಾಂಗಿಯವರನ್ನು ವಿರೋಧಿಸಿ ಈ ಚುನಾವಣೆಯಲ್ಲಿ ತಮ್ಮ ಶಕ್ತಿಯನ್ನು ಪಣಕ್ಕೆ ಹಚ್ಚಿದ್ದರು. ಈ ವರೆಗೆ ಶ್ರೀ ಬಾಂಗಿಯವರ ನಿಷ್ಠ ಅನುಯಾಯಿಗಳಾಗಿದ್ದ ಶ್ರೀ ಬಾಗಲಕೋಟ ವಕೀಲರೂ ಚುನಾವಣೆಯಿಂದ

ನಿರ್ಲಿಪ್ತರಾಗಿದ್ದರು. ಇಡೀ ಬ್ಯಾಂಕಿನ ಡೈರೆಕ್ಟರ್ ಮಂಡಳಿಯಲ್ಲಿ ಎಲ್ಲರೂ ಶ್ರೀ ಬಾಂಗಿಯವರಿಗೆ ವಿರೋಧವಾಗಿದ್ದರು. ಈ ಎಲ್ಲಾ ವಿರೋಧವನ್ನು ಸದೆಬಡಿದು ಮತದಾರರು ಸ್ವಯಂಪ್ರೇರಿತರಾಗಿ ಶ್ರೀ ಬಂಗಿಯವರನ್ನು ಆರಿಸಿ ತಂದುದು ಜಮಖಂಡಿ ಇತಿಹಾಸದಲ್ಲಿಯೇ ಎದ್ದು ಕಾಣುವಂತಹ ಸಂಗತಿಯಾಗಿದೆ. ಈ ಚುನಾವಣೆ ಕೇವಲ ಬ್ಯಾಂಕಿಗೆ ಮಾತ್ರ ಸೀಮಿತವಾಗಿರದೇ ಜಮಖಂಡಿ ತಾಲೂಕಿನ ಕಾಂಗ್ರೇಸ್ ರಾಜಕೀಯದ ಇನ್ನೊಂದು ಅಧ್ಯಾಯ ಬರೆಯಲು ಪ್ರಚೋದನೆ ನೀಡಿದಂತಾಗಿದೆ.

ಎಲ್ಲ ವಿಜಯಿಗಳನ್ನು "ಕುರುಕ್ಷೇತ್ರ" ವು ಅಭಿನಂದಿಸಿ ಅವರ ಕಾರ್ಯದಲ್ಲಿ ಯಶಸ್ಸನ್ನು ಹಾರೈಸುತ್ತದೆ.

**ಕುರುಕ್ಷೇತ್ರ ವಾರಪತ್ರಿಕೆ**
**(01.10.1970)**

# ಜಮಖಂಡಿಯ ಅರ್ಬನ್ ಬ್ಯಾಂಕಿನ ಚುನಾವಣೆಯ ಮೇಲೆ ಒಂದು ಕ್ಷ ಕಿರಣ

ಆಕಸ್ಮಿಕವಾಗಿ ಸಂಭವಿಸಿದ ಘಟನೆಗಳು, ಒಮ್ಮತವಾಗಿ ನಡೆಯಬಹುದಾದ ಡೈರೆಕ್ಟರ ಮಂಡಳದ ಮೂವರು ಸದಸ್ಯರು ಆಯ್ಕೆಯನ್ನು ಅತ್ಯಂತ ತುರುಸಿನ ಆಯ್ಕೆಯಾಗಿ ಮಾಡಿದವು. ಕಳೆದ ಕೆಲ ದಿವಸಗಳಿಂದ ಡೈರೆಕ್ಟರ್ ಬೋರ್ಡ ಹಾಗೂ ಅದರ ಚೇರಮನ್ನರಾದ ಶ್ರೀ ಪಿ.ಎಮ್. ಬಾಂಗಿ ವಕೀಲರ ನಡುವಿನ ವಿಷಮ ಸಂಬಂಧಗಳು ಹೊರಕಾಣಿಸಿಕೊಂಡವು. ಬ್ಯಾಂಕಿನ ಈ ಸಲದ ಚುನಾವಣೆಗೆ ಶ್ರೀ ಬಾಂಗಿ ವಕೀಲರನ್ನೊಳಗೊಂಡು 5 ಜನ ಸದಸ್ಯರು ನಾಮಪತ್ರ ಸಲ್ಲಿಸಿದ್ದರು. ಈ ಐವರಲ್ಲಿ ಶ್ರೀ ಶಾಮರಾವ ವಾಟವೆಯವರು ಹಿಂದೆಗೆದುಕೊಂಡು ನಂತರ ಶ್ರೀ ಬಾಂಗಿ ವಕೀಲ, ಶ್ರೀ ಗಣಪತರಾವ ಇಂಗಳಗಿ, ಶ್ರೀ ಶಂಕರಾವ ಲಾಡ ಹಾಗೂ ಶ್ರೀ ಆಸಾರಾಮ ಭೂತಡಾ ಇವರು ಸ್ಪರ್ಧೆಯಲ್ಲಿ ಉಳಿದರು.

ಜಮಖಂಡಿಯಲ್ಲಿ ಶ್ರೀ ಶೈಲಪ್ಪ ಅಥಣಿಯವರು ಶ್ರೀ ಬಾಂಗಿ ಯವರನ್ನೊಳಗೊಂಡ ಮೂರು ಜನರ (ಆಸಾರಾಮ ಹೊರ್ತಾಗಿ) ಒಂದು ಗುಂಪನ್ನು ನಿಲ್ಲಿಸಿ ಆರಿಸಿ ತರಬೇಕೆಂದು ನಿಶ್ಚಯಮಾಡಿದ್ದರು. ಬನಹಟ್ಟಿ ಬಾರಾಕಮಾನ ಗುಂಪಿನವರು ಇದಕ್ಕೊಪ್ಪಲಿಲ್ಲ. ಬಾಂಗಿಯವರನ್ನು ನಿಲ್ಲಿಸಿದರೆ ಕೆಡುವುವುದೊಂದೇ ತಮ್ಮ ಕರ್ತವ್ಯವೆಂದು ಸಾರಿ ಹೇಳಿದರು. ಬಾಂಗಿಯವರ ನಿಷ್ಠುರ ಧೋರಣೆಗಳಿಂದ ಬೆದರಿದ ಡೈರೆಕ್ಟರರು ಇನ್ನು ಮುಂದೆ ಅವರನ್ನು ಆರಿಸುವುದು ಅಶಕ್ಯವೆಂದು ಸ್ಪಷ್ಟವಾಗಿ ಹೇಳಿದರು. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಸ್ಪರ್ಧೆಯಿಂದ ಹಿಂತೆಗೆದುಕೊಳ್ಳಬೇಕೆಂದು ಶ್ರೀಶೈಲಪ್ಪನವರು ಬಾಂಗಿ ವಕೀಲರಿಗೆ ಕೇಳಿಕೊಂಡರು. ಬನಹಟ್ಟಿ ಹಾಗೂ ಜಮಖಂಡಿ ಪೇಟೆಯ ಗಣ್ಯ ವ್ಯಾಪಾರಸ್ಥರ ವಿರುದ್ಧ ಆರಿಸಿಬರುವುದು ಅಶಕ್ಯವೆಂದು ಭಾವಿಸಿ ಬಾಂಗಿ ವಕೀಲರು "ತಮಗೆ ಮತ ನೀಡಕೂಡದು" ಎಂದು ಮತದಾರರನ್ನು ವಿನಂತಿಸಿಕೊಂಡು ಪ್ರಕಟಣೆ ಹೊರಡಿಸಿದರು.

## ಮತದಾರರಿಗೆ ಈ ಮಾತು ಸರಿಬರಲಿಲ್ಲ:

ಕಳೆದ ಮೂರು ವರ್ಷಗಳಿಂದ ನಿರ್ದಾಕ್ಷಿಣ್ಯವಾಗಿ ದಕ್ಷ ಆಡಳಿತವನ್ನು ಸಾಗಿಸಿಕೊಂಡು ಬಂದ ವ್ಯಕ್ತಿಯನ್ನು ಈ ರೀತಿ ಹೊರದೂಡುವದು ಬಹುಜನ ಮತದಾರರಿಗೆ ಸರಿಬರಲಿಲ್ಲ. ಬನಹಟ್ಟಿಯ ಮಹಾದೇವಪ್ಪ ಭದ್ರಣ್ಣವರ ಹಾಗೂ ಜಮಖಂಡಿಯ ರಸೂಲಸಾಹೇಬ ಅವಟಿ ಇವರ ಹಿರಿತನದಲ್ಲಿ ಕೂಡಿದ ಮತದಾರರ ಸಭೆಯಲ್ಲಿ ಶ್ರೀಮಾನ್ ಬಾಂಗಿ ವಕೀಲರನ್ನು ಆರಿಸಿ ತರಲು ನಿರ್ಣಯವನ್ನು ತೆಗೆದುಕೊಳ್ಳಲಾಯಿತು. ಜಮಖಂಡಿಯ ಗಣ್ಯ ವಕೀಲರು ಹಾಗೂ 50 ರಷ್ಟು ಜನ ಮತದಾರರು ಈ ಬಗ್ಗೆ ಜಾಹೀರ ಪತ್ರಿಕೆಯನ್ನು ತೆಗೆದರು. ರೊಚ್ಚಿಗೆದ್ದ ಬನಹಟ್ಟಿಯ ಬಾರಾಕಮಾನ ಹಾಗೂ ಜಮಖಂಡಿಯ ಡೈರೆಕ್ಟರ ಮಂಡಳಿಯ 8 ಜನರು ಈ ಆಹ್ವಾನವನ್ನು ಸ್ವೀಕರಿಸಿ, ಬಾಂಗಿಯವರನ್ನು ಕೆಡವಲಿಕ್ಕೆ ತಮ್ಮೆಲ್ಲ ಪ್ರಯತ್ನಗಳನ್ನು ಮಾಡಿದರು. ಇದು ಬ್ಯಾಂಕಿನೊಳಗೆ ಇರುವ ಕೆಲವು ಪಟ್ಟಭದ್ರ ವ್ಯಕ್ತಿಗಳ, ಹಿತಾಸಕ್ತಿಗಳು ಹಾಗೂ ಸಾಮಾನ್ಯ ಮತದಾರರ ನಡುವೆ ನಡೆದ ಧರ್ಮಯುದ್ಧವಾಗಿತ್ತು.

## ಚುನಾವಣೆಯ ಯಶಸ್ಸು ಮತದಾರರಿಗೆ ಸಲ್ಲಬೇಕು:

ಒಂದೇ ಒಂದು ದಿನದಲ್ಲಿ ನಡೆದ ಅಲ್ಪ ಪ್ರಚಾರವು ಎಷ್ಟು ಪರಿಣಾಮಕಾರಿ ಕೆಲಸ ಮಾಡಿತೆಂದು ಹೇಳುವದು ಅಸಾಧ್ಯ. ಜಾಗೃತರಾದ ಮತದಾರರೇ ಶ್ರೀ ಬಾಂಗಿ ವಕೀಲರನ್ನು ತಮ್ಮ ಒಬ್ಬ ಪ್ರತಿನಿಧಿಯನ್ನಾಗಿ ಇಡುವದು ಯೋಗ್ಯವೆಂದು ಭಾವಿಸಿದರು. ಚುನಾವಣೆಯ ಪ್ರಚಾರದಲ್ಲಿ ಒಳ್ಳೇ ಕೆಲಸ ಮಾಡಿದ ಬನಹಟ್ಟಿಯ ಮಹಾದೇವಪ್ಪ ಭದ್ರಣ್ಣವರ, ತುಕಾರಾಮ ಕೋಪರ್ಡೆ, ಚನ್ನಯ್ಯ ಸಾಲೀಮಠ, ಕಡಿವಾಳ ಮಾಸ್ತರ, ಮಂಡಿ, ಜಿಗಜಿನ್ನಿ ಸುರೇಂದ್ರ ಮಾಸ್ತರ, ಚಿನ್ನಪ್ಪಾ ಚೌಡೇಶ್ವರ, ಜಮಖಂಡಿಯ ರಸೂಲ ಸಾಹೇಬ ಅವಟಿ, ಮಸ್ತಾನಸಾಹೇಬ ಪೆಂಢಾರಿ, ಖಾದರೀ ಸಾಹೇಬ, ಸತ್ಯಪ್ಪ ಸವದಿ ಮೊದಲಾದವರಿಗೆ ಮತ್ತು ಜಾಗೃತ ಮತದಾರರಿಗೇ ಈ ಯಶಸ್ಸಿನ ಶ್ರೇಯಸ್ಸು ಸಲ್ಲುತ್ತದೆ.

ಈ ಚುನಾವಣೆಯ ಒಂದು ವಿಶೇಷವೆಂದರೆ ಉಮೇದುವಾರರಾದ ಶ್ರೀ ಬಾಂಗಿ ವಕೀಲರು ಪ್ರಚಾರದಲ್ಲಿ ಭಾಗವಹಿಸಲಿಲ್ಲ. ತಮ್ಮ ಮತ ಚಲಾಯಿಸಲಿಲ್ಲ. ಆರಿಸಿ ತರುವ ಭಾರವನ್ನು ಮತದಾರರೇ ಹೊತ್ತಿದ್ದರು. ಇದು ಹೊಸ ರೀತಿಯ ಚುನಾವಣೆಯೆಂದೇ ಹೇಳಬೇಕಾಗುತ್ತದೆ. ಎಲ್ಲ ಮತದಾರರೂ ತಮ್ಮ ರಾಜಕೀಯ ಹಾಗೂ ವ್ಯೆಯಕ್ತಿಕ ಭಿನ್ನಾಭಿಪ್ರಾಯಗಳನ್ನು ಮರೆತು ಮತ ಹಾಕಿದ್ದುದು ಇತಿಹಾಸದಲ್ಲಿ ಪ್ರಥಮ ಸಲವಾಗಿರಬಹುದು.

## ಡೈರೆಕ್ಟರರು ಸಾಮಾನ್ಯ ಸಭೆಯ ಇಂಗಿತಕ್ಕೆ ಮನ್ನಣೆ ಕೊಡಬೇಕು :

ದಿನಾಂಕ 27-09-1970ನೇ ದಿವಸ ಕೂಡಿದ ಸಾಮಾನ್ಯ ಸಭೆಯು ಶ್ರೀ ಬಾಂಗಿ ವಕೀಲರನ್ನು ಡೈರಕ್ಟರ್ ಮಂಡಳದ ಚೇರಮನ್ನರನ್ನಾಗಿ ಮಾಡಬೇಕೆಂದು ಅಭಿಪ್ರಾಯ ತಾಳಿದೆ. ಅದನ್ನು ಡೈರೆಕ್ಟರ್ ಮಂಡಳಿಯು ಅಲಕ್ಷ್ಯ ಮಾಡುವುದು ಜಾಣತನವಲ್ಲವೆಂದು ನಮ್ಮ ಅಭಿಪ್ರಾಯ.

**ವಿಕ್ರಾಂತ ಭಾರತ ವಾರ ಪತ್ರಿಕೆ**
**(12.10.1970)**

# ಜಮಖಂಡಿ ಅರ್ಬನ್ ಬ್ಯಾಂಕಿನ ಭದ್ರತೆಯ ಏಕಮೇವ ಪ್ರತೀಕ ಶ್ರೀ ಪಿ.ಎಂ. ಬಾಂಗಿ ವಕೀಲರು

ಜಮಖಂಡಿ ಅರ್ಬನ್ ಬ್ಯಾಂಕ್ ಹುಟ್ಟಿದಂದಿನಿಂದ ಈವರೆಗೆ ಅದರ ಕಾರಭಾರ ಕೆಲವೇ ಕೆಲವು ಶ್ರೀಮಂತರ ಕಪಿಮುಷ್ಟಿಯಲ್ಲಿ ಸಿಕ್ಕು ಅವರ ಹಿತಾಸಕ್ತಿಗಳ ಕಡೆಗೇನೇ ಲಕ್ಷ್ಯಪೂರೈಸುತ್ತ ಬಂದಿತು ಸಹಕಾರಿ ಬ್ಯಾಂಕ್ ಆದಾಗಿದ್ದರೂ ಕೆಲವೇ ಶ್ರೀಮಂತರ ಬ್ಯಾಂಕ್ ಎನಿಸಿಕೊಂಡಿತು. ಅದರ ಏಳ್ಗೆಯು ಎಷ್ಟು ಆಗಬೇಕೋ ಅಷ್ಟು ಆಗದೇ ದಿನೇ ದಿನೇ ಅದರ ಪ್ರಗತಿ ಕುಂಠಿತವಾಗತೊಡಗಿತ್ತು. ಈ ಬ್ಯಾಂಕಿನ ದುರ್ಗತಿ ಕಂಡು ಠೇವುದಾರರು ತಮ್ಮ ಠೇವಣಿ ಹಣದ ಭದ್ರತೆಯ ಕಡೆಗೆ ಚಿಂತಾತುರರಾಗಿ ಅದರ ಕಡೆಗೆ ಲಕ್ಷ್ಯ ಹಾಕಹತ್ತಿದರು. ಡೈರೆಕ್ಟರ್ ಆಯ್ಕೆಯಲ್ಲಿ ಸ್ವಲ್ಪ ಬದಲು ಮಾಡಿ ನೋಡುವಾ ಎಂದುಕೊಂಡರು. ಅಂದ ಹಾಗೆ 3 ವರ್ಷದ ಹಿಂದೆ ಇಲ್ಲಿಯ ಜನರು ಡೈರೆಕ್ಟರ ಎಂದು ಶ್ರೀ ಬಾಂಗಿ ವಕೀಲರನ್ನೂ ಆಯ್ಕೆ ಮಾಡಿಕೊಟ್ಟರು ನಂತರ ಅವರೇ ಚೇರಮನ್ನರಾದರು. ಅವರು ತಮ್ಮ ಅಧಿಕಾರದ ಅವಧಿಯಲ್ಲಿ ಅತ್ಯಂತ ಪ್ರಾಮಾಣಿಕತನದಿಂದ ನಿಷ್ಠುರರಾಗಿ ಕರ್ತವ್ಯ ಮಾಡಿದರು. ಬ್ಯಾಂಕಿನ ಏಳ್ಗೆ ಸದಸ್ಯರ ಏಳ್ಗೆಯಲ್ಲಿದೆಯೆಂದು ಮನೋಭಾವ ತಾಳಿ ಅದರ ಪ್ರಗತಿಗೆ ಸದೈವ ಲಕ್ಷ್ಯ ಕೊಟ್ಟು ಈವರೆಗೆ ಆಗದ ಪ್ರಗತಿಯನ್ನು ತಮ್ಮ ಮೂರು ವರ್ಷದ ಅವಧಿಯಲ್ಲಿ ಸಾಧಿಸಿ ಬ್ಯಾಂಕಿನ ಸಾಮಾನ್ಯ ಮತದಾರರನ್ನು ತಮ್ಮತ್ತ ಸೆಳೆದುಕೊಂಡಿದ್ದು ಈ ಬ್ಯಾಂಕಿನ ಇತಿಹಾಸದಲ್ಲೇ ಹೊಸ ದಾಖಲೆ.

1970 ರ ಜಮಖಂಡಿ ಅರ್ಬನ್ ಬ್ಯಾಂಕಿನ ಚುನಾವಣೆಯು ಶ್ರೀಸಾಮಾನ್ಯ ಮತದಾರನ ಚುನಾವಣೆ ಆಗಿತ್ತು. ಬ್ಯಾಂಕ ಮೊದಲಿನಿಂದಲೂ ಕೆಲವೇ ಕೆಲವು ಶ್ರೀಮಂತರ ಕಪಿಮುಷ್ಟಿಯಲ್ಲಿತ್ತು. ಸಣ್ಣ ಠೇವುದಾರರು ಹಾಗೂ ಸಾಮಾನ್ಯ ಶೇರುದಾರರ ಕಡೆಗೆ ಕಣ್ಣೆತ್ತಿ ಸಹ ನೋಡುತ್ತಿರಲಿಲ್ಲ. ಇದನ್ನು ಬದಲಿಸಲು ಸಾಮಾನ್ಯ ಮತದಾರರ ಶಕ್ತಿ ಸಾಲದಾಗಿತ್ತು. ಸಾಮಾನ್ಯ ಮತದಾರರ ಬಹು ದಿವಸದ ಬಯಕೆಯಂತೆ ಮೂರು ವರ್ಷದ ಹಿಂದೆ ಶ್ರೀ ಬಾಂಗಿ ವಕೀಲರು ಬ್ಯಾಂಕಿನ ಚೇರಮನ್ನರಾದ ಬಳಿಕ ಶ್ರೀಮಂತ ಡೈರೆಕ್ಟರರು ಬ್ಯಾಂಕಿನಲ್ಲಿ ನಡೆಸುತ್ತಿದ್ದ ಅವ್ಯಾಪಾರೇಷು ವ್ಯಾಪಾರ ಎನ್ನುವುದು ನಿಂತಿತು. ಸಾಮಾನ್ಯ

ಮತದಾರರಿಗೆ ಅವರ ಯೋಗ್ಯತೆಗನುಸಾರ ಸಾಲ ಸಿಗತೊಡಗಿತು. ಇದರಿಂದ ಅವರಿಗೆ ಸಣ್ಣ ಸಣ್ಣ ಉದ್ಯೋಗ ದಂಧೆ ಸಾಗಿಸಿ ಉಪಜೀವನ ನಡೆಸಲು ಅನುಕೂಲವಾಯಿತು. ಶ್ರೀ ಬಾಂಗಿಯವರ ಈ ಕ್ರಮದಿಂದ ಮತದಾರರಲ್ಲಿ ಜಾಗೃತಿ ಮೂಡಿತು. ಈ ಜಾಗೃತಿಯೇ ಈ ಸಲದ ಡೈರೆಕ್ಟರ ಚುನಾವಣೆಯಲ್ಲಿ ಹೊಸ ಕ್ರಾಂತಿಗೆ ಕಾರಣವಾಯಿತು.

**ವಿಕ್ರಾಂತ ಭಾರತ ವಾರ ಪತ್ರಿಕೆ**
**(02.10.1970)**

# ಜಮಖಂಡಿ ಅರ್ಬನ್ ಕೋ–ಆಪರೇಟಿವ್ ಬ್ಯಾಂಕಿನ ಮತದಾರರ ಜಾಹೀರ ವಿನಂತಿ

ಇದೇ ರವಿವಾರ 27.09.1970 ನೇ ದಿವಸ ನಡೆಯಲಿರುವ ಜಮಖಂಡಿ ಅರ್ಬನ್ ಬ್ಯಾಂಕಿನ ಡೈರೆಕ್ಟರರ ಚುನಾವಣೆ ಸನ್ನಿಹಿತವಾದ ಸಮಯದಲ್ಲಿ ಶ್ರೀಮಾನ ಪಿ. ಎಂ. ಬಾಂಗಿ ವಕೀಲರು 23.09.1970 ನೇ ದಿವಸ ಹೊರಡಿಸಿದ ಪ್ರಕಟಣೆಯು ಅನಿರೀಕ್ಷಿತವೂ ಅನಪೇಕ್ಷಿತವೂ ಅಸಂತೋಷದಾಯಕವೂ ಆದದ್ದಾಗಿದೆ.

ಸಂಘ–ಸಂಸ್ಥೆಗಳಲ್ಲಿ ಆಡಳಿತ ನಡೆಸುವ ಜನರಲ್ಲಿ ದಿನದಿನವೂ ಪ್ರಾಮಾಣಿಕತೆ ನಿಷ್ಠೆಗಳು ಕಡಿಮೆಯಾಗುತ್ತಿರುವ ಈ ದಿನಗಳಲ್ಲಿ ಶ್ರೀಮಾನ ಪಿ. ಎಂ. ಬಾಂಗಿ ವಕೀಲರಂಥ ಪ್ರಾಮಾಣಿಕ ಕರ್ತವ್ಯ ನಿಷ್ಠರು ದೊರಕುವುದು ತೀರ ವಿರಳ. ಕಳೆದ ಮೂರು ವರ್ಷಗಳಿಂದ ನಿರ್ದಾಕ್ಷಿಣ್ಯವಾಗಿ ಪ್ರಾಮಾಣಿಕವಾಗಿ ಬ್ಯಾಂಕಿನ ಆಡಳಿತವನ್ನು ನಿರ್ಮಲ ರೀತಿಯಿಂದ ನಡೆಸಿಕೊಂಡು ಬಂದು ಬ್ಯಾಂಕನ್ನು ಪ್ರಗತಿ ಪಥದಲ್ಲಿ ನಡೆಸಿದ ಶ್ರೇಯಸ್ಸು ಶ್ರೀಮಾನ ಬಾಂಗಿಯವರಿಗೇ ಸಲ್ಲುವುದೆಂಬುದು ನಿರ್ವಿವಾದದ ಮಾತು.

ಆದರೆ ಕೆಲವು ವಿಶೇಷ ಹಿತಾಸಕ್ತಿಗಳು ತಮ್ಮ ಸ್ವಹಿತದೃಷ್ಟಿಯಿಂದ ನಡೆಸಿದ ಪ್ರಯತ್ನದ ಫಲವಾಗಿ ಇಂಥ ಪ್ರಕಟಣೆ ಹೊರಗೆ ಬಂದುದು ವಿಷಾದದ ವಿಷಯ. ಈ 3 ವರ್ಷಗಳಲ್ಲಿ ಬ್ಯಾಂಕಿನ ಭದ್ರತೆ ಹಾಗೂ ಪಾವಿತ್ರತೆಯನ್ನು ಕಾಯ್ದುಕೊಂಡುಬಂದು ಬಡವರು ಹಾಗು ಮಧ್ಯಮ ತರಗತಿಯ ಜನರಿಗೆ ಪರಮಾವಧಿ ಬ್ಯಾಂಕಿನ ಸಹಾಯ ದೊರಕುವಂತೆ ಮಾಡಿದ ಶ್ರೀಮಾನ ಬಾಂಗಿ ವಕೀಲರಿಗೆ ಈ ಮೂಲಕ ಬ್ಯಾಂಕಿನ ಚುನಾವಣೆಗೆ ಸ್ಪರ್ಧಿಸಲು ಒತ್ತಾಯಪಡಿಸುತ್ತೇವೆ. ಅಲ್ಲದೆ ಶ್ರೀಮಾನ ಬಾಂಗಿ ವಕೀಲರು ತಾ॥ 23.09.1970 ನೇ ದಿವಸ ಹೊರಡಿಸಿದ ಪ್ರಕಟಣೆಯನ್ನು ಅಲಕ್ಷಿಸಿ ಬ್ಯಾಂಕಿನ ಮತದಾರರು ತಮ್ಮ ಅಮೂಲ್ಯವಾದ ಮತಗಳನ್ನು ಅವರಿಗೇ ಕೊಟ್ಟು ಅವರನ್ನು ಆರಿಸಿ ತರಬೇಕೆಂದು ವಿನಂತಿಸಿಕೊಳ್ಳುತ್ತೇವೆ. ಜಮಖಂಡಿ ಮತ್ತು ಬನಹಟ್ಟಿ ಮತದಾರರು (ಬ್ಯಾಂಕಿನ ನೂರಾರು ಶೇರುದಾರರ ಸಹಿಗಳು).

## ಶ್ರೀ ಪಿ. ಎಂ. ಬಾಂಗಿಯವರ ಬದುಕಿನ ಘಟನಾವಳಿ

1903 – 03.03.1903 ರಂದು ಜಮಖಂಡಿಯಲ್ಲಿ ಜನನ.

1914–17 – ಜಮಖಂಡಿಯ ಪರಶುರಾಮ ಭಾವೂ ಹೈಸ್ಕೂಲಿನಲ್ಲಿ ಶಿಕ್ಷಣ

1926–27 – ಸಂಸ್ಕೃತದಲ್ಲಿ ಬಿ.ಎ. (ಆನರ್ಸ) ಪದವೀಧರ ಫರ್ಗ್ಯೂಸನ್ ಕಾಲೇಜ್, ಪುಣೆ–ಇದರ ಸಂಸ್ಕೃತ ಲಿಟರರಿ ಕ್ಲಬ್ ಸದಸ್ಯರು

1928 – ವಕೀಲಿ ವೃತ್ತಿ ಆರಂಭ.

1928 – ಶ್ರೀ ಬಸವೇಶ್ವರ ಕ್ಲಬ್ ಸ್ಥಾಪಕರು.

1931–40 – ಸಕ್ರೀಯ ರಾಜಕಾರಣ ಸೇರಿ, ನಗರ ಸಭೆ ಕಾರ್ಯಾಧ್ಯಕ್ಷ, ಸ್ಥಾಯೀ ಸಮೀತಿ ಚೇರಮನ್, ಸದಸ್ಯರೆಂದು ನಗರ ಸುಧಾರಣೆಗೆ ಆಸಕ್ತಿ ವಹಿಸಿದರು.

1937 – ತಾಲೂಕಾ ಕಾಂಗ್ರೆಸ್ ಸಮಿತಿ ಪ್ರಧಾನ ಕಾರ್ಯದರ್ಶಿ.

1939–48 – ಭಾರತದೊಂದಿಗೆ ಸಂಸ್ಥಾನ ವಿಲೀನಗೊಳ್ಳುವ (08.03.1948) ವರೆಗೆ ಜಮಖಂಡಿ ಸಂಸ್ಥಾನದ ಲೋಕನಿಯುಕ್ತ ಸಭೆಯ ಸದಸ್ಯರಾಗಿದ್ದರು.

1942 – ಯುನಿಯನ್ ವೀವ್ಹರ್ಸ ಕೋ–ಆಪ್ ಸೊಸಾಯಿಟಿ ಲಿ., ಜಮಖಂಡಿಯ ಸ್ಥಾಪಕರು – ಜಮಖಂಡಿ ಭಾಗದಲ್ಲಿ ಮೊಟ್ಟಮೊದಲ ಸಹಕಾರ ಸಂಸ್ಥೆ.

1942 – ಜಮಖಂಡಿ ಸಂಸ್ಥಾನದ ಪ್ರಪ್ರಥಮ ಮುಖ್ಯ ಮಂತ್ರಿ.

1942 – ಆಲಬಾಳ ಗ್ರಾಮದ ಕೆರೆ ನಿರ್ಮಾಣ

1945 – ಪ್ರಜಾ ಪರಿಷತ್ ಆದೇಶದ ಮೇರೆಗೆ ಮುಖ್ಯಮಂತ್ರಿ ಪದಕ್ಕೆ ರಾಜಿನಾಮೆ ನೀಡಿ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗಿಯಾದರು.

1948 – ಮುಂಬೈ ಪ್ರಾಂತದ ನೂಲು ವಿತರಣಾ ಮಂಡಳದ ಸದಸ್ಯರು.

1949 – ವಿಲೀನಗೊಂಡ ದಕ್ಷಿಣ ಸಂಸ್ಥಾನಗಳಲ್ಲಿ ನೇಕಾರರ ಸಂಘಟಕರು.

1960 – ಜಮಖಂಡಿ ಜಿಲ್ಲಾ ರಚನಾ ಹೋರಾಟ ಸಮಿತಿಯ ಉಪಾಧ್ಯಕರು.

1962 – ಬನಹಟ್ಟಿಯ ಜನತಾ ಶಿಕ್ಷಣ ಸಂಸ್ಥೆಯ ಅಧ್ಯಕ್ಷರು.

1965 – ಕರ್ನಾಟಕ ಭೂ ಸುಧಾರಣಾ ಕಾಯ್ದೆಗೆ ತಿದ್ದುಪಡಿ ಮಾಡಿಸಿ ಕುಳಗಳ (ಗೇಣಿದಾರರು) ರಕ್ಷಣೆ ಸಲುವಾಗಿ ಅದನ್ನು ಕಾರ್ಯಾಚರಣೆಗೆ ತರಲು ಹೋರಾಡಿದವರು

1967 – 12ನೆ ಶತಮಾನದ ಕ್ರಾಂತಿ ಪುರುಷ ಜಗಜ್ಯೋತಿ ಬಸವೇಶ್ವರ ಅವರ ಅಷ್ಟಶತಮಾನೋತ್ಸವದ ಸಂಚಾಲಕರು

1967 – ಜಮಖಂಡಿ ಬಸವ ಸಮಿತಿ ಸಂಸ್ಥಾಪಕ ಅಧ್ಯಕ್ಷರು ಮತ್ತು ಬಸವ ಭವನ ನಿರ್ಮಾಣ ಯೋಜನೆಗೆ ಚಾಲನೆ

1967 – ಜಮಖಂಡಿ ಅರ್ಬನ್ ಕೊ–ಆಪರೇಟಿವ್ ಬ್ಯಾಂಕಿನ ಅಧ್ಯಕರಾಗಿ ಒಮ್ಮತದ ಆಯ್ಕೆ.

1970 ಸಪ್ಟೆಂಬರ್ – ಜಮಖಂಡಿ ಅರ್ಬನ್ ಕೊ–ಆಪರೇಟಿವ್ ಬ್ಯಾಂಕಿನ ಐತಿಹಾಸಿಕ ಚುನಾವಣೆ–ಮತದಾರರೇ ಮುಂದಾಗಿ ಶ್ರೀ ಪಿ. ಎಂ. ಬಾಂಗಿ ಅವರನ್ನು ಆರಿಸಿ ತಂದರು

1971 ಜನವರಿ – ಜಮಖಂಡಿ ವಿಧಾನಸಭಾ ಕ್ಷೇತ್ರದ ಚಾರಿತ್ರಿಕ ಉಪಚುನಾವಣೆ – ರಾಜ್ಯದ ರಾಜಕೀಯ ದಿಕ್ಕು ಬದಲಿಸಿದ ಉಪಚುನಾವಣೆ.

| | |
|---|---|
| 1972 | – ಸಾರ್ವತ್ರಿಕ ಚುನಾವಣೆಯಲ್ಲಿ ಜಮಖಂಡಿ ಕ್ಷೇತ್ರದಿಂದ ಶಾಸಕರಾಗಿ ಆಯ್ಕೆಯಾದರು. |
| 1973 | – ಬೆಳಗಾವಿಯ ಕೆ.ಎಲ್.ಇ. ಸೊಸೈಟಿ ಜೆ.ಎನ್. ಮೆಡಿಕಲ್ ಕಾಲೇಜಿನ ಆಡಳಿತ ಮಂಡಳಿ ಸದಸ್ಯರು – ಸರ್ಕಾರದಿಂದ ನಾಮಕರಣ . |
| 1973 | – ಕಾಲೇಜ ಆಡಳಿತ ಮಂಡಳಿ ಸಂಸ್ಥೆಯಲ್ಲಿ ಭ್ರಷ್ಟತೆಯ ವಿರುದ್ಧ ಗುಡುಗು. |
| 1974 | – ಕರ್ನಾಟಕ ಕೈಮಗ್ಗ ಜವಳೀ ಮಸೂದೆಯ ಮಂಡನೆ – ವಿಧಾನಸಭೆಯಲ್ಲಿ |
| 1974 | – ಜಮಖಂಡಿಯ ಜನತಾ ಬಜಾರದ ಸಂಸ್ಥಾಪಕ ಅಧ್ಯಕ್ಷರು. |
| 1975 | – ಕರ್ನಾಟಕ ರಾಜ್ಯ ಕೈಮಗ್ಗ ಸಲಹಾ ಮಂಡಳದ ಅಧ್ಯಕ್ಷರು. |
| 1975 | – ಅಖಿಲ ಭಾರತ ಕೈಮಗ್ಗ ಮಂಡಳದ ಸದಸ್ಯರು. |
| 1975 | – ಕೆ.ಎಚ್.ಡಿ.ಸಿ.ಯ ಸಂಸ್ಥಾಪಕ ಡಾಯರೆಕ್ಟರರು. |
| 1979 | – ಜಮಖಂಡಿಯಲ್ಲಿ ಸಿವ್ಹಿಲ್ ಜಜ್ (ಹಿರಿಯ ಶ್ರೇಣಿ) ನ್ಯಾಯಾಲಯ ಬೇಡಿಕೆಗಾಗಿ ಯಶಸ್ವಿ ಚಳುವಳಿಯ ಮುಂದಾಳತ್ವ ಮತ್ತು ನ್ಯಾಯಾಲಯ ಸ್ಥಾಪನೆ |
| 1980 | – ರೈತ ಸಂಘದ ಅಧ್ಯಕ್ಷರಾಗಿ ರೈತ ಹೋರಾಟಕ್ಕೆ ಪ್ರೇರಣೆ |
| 1981 | – ಜಮಖಂಡಿ ವಕೀಲರ ಸಂಘದ ಅಧ್ಯಕ್ಷರು ಸಂಘದಿಂದ ಗೌರವಾರ್ಪಣೆ. |
| 1983 | – 21.07.1983 ಗುರುವಾರ ಸಂಜೆ ಮರಣ |



ಕೈಮಗ್ಗ ನೇಕಾರ ಸಮುದಾಯದ ಕಲ್ಯಾಣಕ್ಕೆ ಸಲ್ಲಿಸಿದ ಅನುಪಮ ಸೇವೆಯ ಸ್ಮರಣೆಯಲ್ಲಿ, ನೇಕಾರರ ಪಟ್ಟಣ ಬನಹಟ್ಟಿಯಲ್ಲಿ ಕೈಮಗ್ಗ ನೇಕಾರ ಬಾಂಧವರು ಪ್ರತಿಷ್ಠಾಪಿಸಿರುವ ಶ್ರೀ ಪಿ. ಎಂ. ಬಾಂಗಿ ಅವರ ಪುತ್ಥಳಿ
ಸ್ಥಳ : ಪಿ. ಎಂ. ಬಾಂಗಿ ನಗರ, ಕೆ. ಎಚ್. ಡಿ. ಸಿ. ಎದುರಿಗೆ, ಬನಹಟ್ಟಿ



ಕೈಮಗ್ಗ ಅಭಿವೃದ್ಧಿ ನಿಗಮದ ಉದ್ಘಾಟನೆ–ವಿಧಾನಸೌಧದ ಬ್ಯಾಂಕ್ವೆಟ್ ಹಾಲ್‌ದಲ್ಲಿ – ನಿಗಮದ ಮೊದಲ್ನೆ ಅಧ್ಯಕ್ಷ ಶಾಸಕ ಪಿ. ಎಂ. ಬಾಂಗಿ ಅವರು ಹೊಸ ನಿಗಮದ ಹಿನ್ನಲೆ – ಉದ್ದೇಶ ವಿವರಿಸಿ ಭಾಷಣ ಮಾಡುತ್ತಿರುವುದು.



ವಿಧಾನಸಭಾಧ್ಯಕ್ಷರಾದ ಶ್ರೀಮತಿ ಕೆ. ಎಸ್. ನಾಗರತ್ನಮ್ಮ, ಕೈಗಾರಿಕೆ ಮಂತ್ರಿ
ಶ್ರೀ ಎಸ್. ಎಂ. ಕೃಷ್ಣ, ಸಣ್ಣ ಕೈಗಾರಿಕೆ ಮಂತ್ರಿ
ಶ್ರೀ ವೀರಪ್ಪ ಮೊಯಿಲಿ, ಆರೋಗ್ಯ ಮಂತ್ರಿ ಶ್ರೀ ಎಚ್. ಸಿದ್ದವೀರಪ್ಪ



ಕೈಮಗ್ಗ ಅಭಿವೃದ್ಧಿ ನಿಗಮದ ಉದ್ಘಾಟನೆಗೆ ಆಗಮಿಸಿದ ಮುಖ್ಯಮಂತ್ರಿ
ಶ್ರೀ ದೇವರಾಜ ಅರಸು ಅವರನ್ನು ಶ್ರೀ ಪಿ. ಎಂ. ಬಾಂಗಿ ಅವರು
ಬರಮಾಡಿಕೊಳ್ಳುತ್ತಿರುವುದು



ಕೈಮಗ್ಗ ಅಭಿವೃದ್ಧಿ ನಿಗಮ ಸ್ಥಾಪನೆಯ ಸಂತಸದಲ್ಲಿ ಶ್ರೀ ಪಿ. ಎಂ. ಬಾಂಗಿ ಅವರು. ಹಿಂದಿರುವವರು ಅವರ ಹಿರಿಯ ಮಗ ಬಾಳಾಸಾಹೇಬ. ವಿಧಾನಸೌಧದ ಬ್ಯಾಂಕ್ವೆಟ್ ಹಾಲ್‌ದಲ್ಲಿ ನಿಗಮದ ಉದ್ಘಾಟನೆ ವೇಳೆ ತೆಗೆದ ಚಿತ್ರ



ಪತ್ನಿ ಶ್ರೀಮತಿ ಚಿನ್ನಮ್ಮ ಜೊತೆಗೆ
**1967 ರ ಮೇ ತಿಂಗಳು – ಬಸವ ಜಯಂತಿ ದಿವಸ**



ಶ್ರೀ ಪಿ. ಎಂ. ಬಾಂಗಿ ಅವರ ಪತ್ನಿ ಶ್ರೀಮತಿ ಚಿನ್ನಮ್ಮ 1960 ರ ದಶಕದಲ್ಲಿ ರಾಜ್ಯ ಸಮಾಜ ಕಲ್ಯಾಣ ಸಲಹಾ ಮಂಡಳಿ, ಅಕ್ಕನ ಬಳಗ, ಶಾಲಾ ಸುಧಾರಣಾ ಸಮೀತಿ, ಮಹಿಳಾ ಮಂಡಳ ಹೀಗೆ ಹಲವಾರು ಸಂಘ – ಸಂಸ್ಥೆಗಳಲ್ಲಿ ಸಕ್ರಿಯರಾಗಿದ್ದ ಇವರು ಸ್ತ್ರೀ ಸಬಲೀಕರಣ ಮತ್ತು ಸ್ವಾವಲಂಬನೆಗೆ ಶ್ರಮ ವಹಿಸಿ ಜನಮೆಚ್ಚುಗೆಗೆ ಪಾತ್ರರಾಗಿದ್ದರು



ಶ್ರೀಮತಿ ಚಿನ್ನಮ್ಮ
ವಿಧಾನಸಭಾಧ್ಯಕ್ಷರಾದ ಶ್ರೀಮತಿ ಕೆ.ಎಸ್. ನಾಗರತ್ನಮ್ಮನವರ ಜೊತೆಗೆ



ವಿಧಾನಸಭಾಧ್ಯಕ್ಷರಾದ ಶ್ರೀಮತಿ ಕೆ. ಎಸ್. ನಾಗರತ್ನಮ್ಮನವರು 1973 ರಲ್ಲಿ ಜಮಖಂಡಿಗೆ ಬಂದಾಗ ಶ್ರೀ ಪಿ.ಎಂ.ಬಾಂಗಿ ಅವರಿಂದ ಸ್ವಾಗತ. ಸಂದರ್ಭ : ಕಡಪಟ್ಟಿಯ ಬಸವೇಶ್ವರ ಹೈಸ್ಕೂಲಿನ ಸಮಾರಂಭ



ಬನಹಟ್ಟಿ, ಜಗದಾಳ, ಚಿಮ್ಮಡ ಊರುಗಳ 400 ಭಾವಿಗಳಿಗೆ ಹಾಗೂ ನೂರಾರು ಬೋರವೆಲ್‌ಗಳಿಗೆ ನಿರಂತರ ಜೀವ ಸೆಲೆಯಾದ ಕೆರೆ ನಿರ್ಮಾಣ ಯೋಜನೆಯ ಪ್ರಗತಿ ಸಮೀಕ್ಷೆ–1972–73 ರ ಬರಗಾಲದಲ್ಲಿ ಈ ಕೆರೆ ಇವತ್ತಿಗೂ ಶ್ರೀ ಪಿ. ಎಂ. ಬಾಂಗಿ ಅವರ ಕ್ರಿಯಾಶೀಲತೆ ಮತ್ತು ಮುಂದಾಲೋಚನೆಗೆ ಶಾಶ್ವತ ಸಾಕ್ಷಿಯಾಗಿದೆ ಚಿತ್ರದಲ್ಲಿ ಅವರ ಬಲಕ್ಕೆ ಶ್ರೀಮಂತ ಜಿ.ಕೆ.ದೇಸಾಯಿ ಹಿಂದೆ ಜಮಖಂಡಿಯನ್ನು ಆಳಿದ ಕೊಣ್ಣೂರು ದೇಸಾಯಿ ಮನೆತನದ ಹಿರಿಯರು



1972–73ರ ಭೀಕರ ಬರಗಾಲದಲ್ಲಿ ಪರಿಹಾರ ಕಾಮಗಾರಿಗೆ ಚಾಲನೆ
ಬರಪೀಡಿತರಿಗೆ ಉದ್ಯೋಗಾವಕಾಶ



ಜಮಖಂಡಿಯ ಬಸವ ಭವನದ ಉದ್ಘಾಟನೆ 1975



1926–27 ರಲ್ಲಿ ಪುಣೆಯ ಫರ್ಗ್ಯೂಸನ್ ಕಾಲೇಜಿನ
ಸಂಸ್ಕೃತ ಸಾಹಿತ್ಯ ಕ್ಲಬ್ ವಿದ್ವಾನರ ಜೊತೆಗೆ ಸದಸ್ಯರ ಚಿತ್ರ
ನಿಂತವರ ಪೈಕಿ ಎರ್ಡನೆ ಸಾಲಿನಲ್ಲಿ 5 ನೆಯವರು ಶ್ರೀ ಪಿ.ಎಂ.ಬಾಂಗಿ
ಶ್ರೀಯುತರು ಸಂಸ್ಕೃತ ವಿಷಯದಲ್ಲಿ ಬಿ.ಎ. ಆನರ್ಸ ಪದವಿ ಪಡೆದರು



ಜಮಖಂಡಿ ಸಂಸ್ಥಾನದ ಮೊಟ್ಟ ಮೊದಲ್ನೆ ಶಾಸನ ಸಭೆಯ ಸದಸ್ಯರೊಂದಿಗೆ
ಆಗಿನ ರಾಜ ಶ್ರೀಮಂತ ಪಟವರ್ಧನ ಅವರ ಜೊತೆಗಿನ ಚಿತ್ರ
ನಿಂತವರ ಪೈಕಿ ಎರ್ಡನೆ ಸಾಲಿನಲ್ಲಿ 6 ನೆಯವರು ಶ್ರೀ ಪಿ.ಎಂ.ಬಾಂಗಿ
(ತಲೆಗೆ ಕಪ್ಪು ಬಣ್ಣದ ರುಮಾಲು)
ಸ್ಥಳ : ಪಿ.ಬಿ.ಹೈಸ್ಕೂಲಿನ ಕೇಂದ್ರೀಯ ಸಭಾಂಗಣ



ಬನಹಟ್ಟಿಯ ಜನತಾ ಶಿಕ್ಷಣ ಸಂಸ್ಥೆಯ ಆಡಳಿತ ಮಂಡಳಿ ಸದಸ್ಯರೊಂದಿಗೆ
ಸಂಸ್ಥೆಯ ಅಧ್ಯಕ್ಷ ಶ್ರೀ ಪಿ.ಎಂ.ಬಾಂಗಿ
(ಚಿತ್ರದಲ್ಲಿ ಮಧ್ಯದಲ್ಲಿರುವವರು–1962 ರಲ್ಲಿ)



ಜಮಖಂಡಿಯ ಜನತಾ ಬಜಾರದ ಆಡಳಿತ ಮಂಡಳಿ ಸದಸ್ಯರು ಮತ್ತು
ನೌಕರರೊಂದಿಗೆ ಸಂಸ್ಥಾಪಕ ಅಧ್ಯಕ್ಷ ಶ್ರೀ ಪಿ.ಎಂ. ಬಾಂಗಿ
(ಚಿತ್ರದಲ್ಲಿ ಮಧ್ಯದಲ್ಲಿರುವವರು–1982 ರಲ್ಲಿ)



ಕೈಮಗ್ಗ ಸಲಹಾಮಂಡಳಿ ಅಧ್ಯಕ್ಷರಾಗಿ  ನೇಮಕಗೊಂಡು ಜಮಖಂಡಿಗೆ
ಬಂದಾಗ ಶ್ರೀ ಪಿ.ಎಂ.ಬಾಂಗಿ ಅವರಿಗೆ ಸ್ವಾಗತ
ಅವರ ಬಲಬದಿಗೆ ಮಂತ್ರಿ ಕೆ. ಟಿ. ರಾಠೋಡ ಮತ್ತು ಗುರಪ್ಪಾ ಮರನೂರ



ಜಮಖಂಡಿಯ ಪದವಿ ಕಾಲೇಜಿನ ಎದುರು ಪೋಲೋ ಗ್ರೌಂಡ್‌ದಲ್ಲಿ
1973ರ ಧ್ವಜಾರೋಹಣ ಸಮಾರಂಭದಲ್ಲಿ ಶ್ರೀ ಪಿ.ಎಂ.ಬಾಂಗಿ ಅವರಿಗೆ ಸ್ವಾಗತ



ಎನ್.ಸಿ.ಸಿ. ಪರೇಡ್ ವಂದನೆ ಸ್ವೀಕಾರ

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಪ್ರಕಟಗೊಂಡ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಕೆ. ಹನುಮಂತಯ್ಯ | ಪ್ರೊ॥ ಎನ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 20–00 |
| 2. | ಎಸ್. ನಿಜಲಿಂಗಪ್ಪ | ಡಾ॥ ಸಂದೀಪ್ ಶಾಸ್ತ್ರಿ | 15–00 |
| 3. | ಶಾಂತವೇರಿ ಗೋಪಾಲಗೌಡ | ಪ್ರೊ॥ ಎನ್.ಬಿ. ಪಂಗಣ್ಣಾಯ್ಯ | 15–00 |
| 4. | ವೈಕುಂಠ ಬಾಳಿಗಾ | ಡಾ॥ ಪಿ. ಜೀವನ್ ಕುಮಾರ್ | 20–00 |
| 5. | ವೀರೇಂದ್ರ ಪಾಟೀಲ್ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 20–00 |
| 6. | ಕಡಿದಾಳ್ ಮಂಜಪ್ಪ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 15–00 |
| 7. | ಜಿ.ವಿ. ಹಳ್ಳಿಕೇರಿ | ಡಾ. ಆರ್.ಎಂ.ಎಲ್. ಪಾಟೀಲ್ | 15–00 |
| 8. | ಕೆ.ಎಸ್. ನಾಗರತ್ನಮ್ಮ | ಪ್ರೊ॥ ಎಸ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 15–00 |
| 9. | ಡಿ. ದೇವರಾಜ ಅರಸು | ಜೆ.ಎಸ್. ಸದಾನಂದ | 15–00 |
| 10. | ಕೆ.ಟಿ. ಭಾಷ್ಯಂ | ಡಾ. ವಿಘ್ನೇಶ್ ಎನ್. ಭಟ್ | 15–00 |
| 11. | ಕೆ. ಪುಟ್ಟಸ್ವಾಮಿ | ಜಿ. ದಕ್ಷಿಣಾ ಮೂರ್ತಿ | 15–00 |
| 12. | ಟಿ. ಸಿದ್ದಲಿಂಗಯ್ಯ | ಜಿ. ದಕ್ಷಿಣಾ ಮೂರ್ತಿ | 20–00 |
| 13. | ಜಗಳೂರು ಇಮಾಂ | ಜಿ.ಎಸ್. ಸದಾನಂದ | 15–00 |
| 14. | ಕೆ.ಸಿ. ರೆಡ್ಡಿ | ಡಾ. ಸಂಧ್ಯಾರೆಡ್ಡಿ | 20–00 |
| 15. | ಬಿ.ವಿ. ಕಕ್ಕಿಲ್ಲಾಯ | ಎಂ.ಕೆ. ಭಂಡಿ | 20–00 |
| 16. | ಹೆಚ್.ಎಂ. ಚೆನ್ನಬಸಪ್ಪ | ಪ್ರೊ॥ ಬಿ.ಎನ್. ಚಂದ್ರಯ್ಯ | 20–00 |
| 17. | ಬಿ. ರಾಚಯ್ಯ | ನಂಜಯ್ಯ ಹೊಂಗನೂರ್ | 20–00 |
| 18. | ಎಂ. ನಾಗಪ್ಪ | ಡಾ. ಎಂ.ಎಸ್. ಪಾಟೀಲ್ | 15–00 |
| 19. | ಜೆ.ಬಿ. ಮಲ್ಲಾರಾಧ್ಯ | ಡಾ. ಹೆಚ್.ಎಂ.ಪಂಚಾಕ್ಷರಯ್ಯ | 15–00 |
| 20. | ಗಂಗಾಧರ್ ನಮೋಶಿ | ಡಾ. ಕವಂಟೆ ಹಾಗೂ ಇತರರು | 15–00 |
| 21. | ಬಿ.ಡಿ. ಜತ್ತಿ | ಕೃಷ್ಣ ಕೊಲ್ಹಾರ ಕುಲಕರ್ಣಿ | 15–00 |

| | | | |
|---|---|---|---|
| 22. | ಆರ್. ಗುಂಡೂರಾವ್ | ಈಶ್ವರ ದೈತೋಟ | 20–00 |
| 23. | ಕೆ.ಎಚ್. ಪಾಟೀಲ್ | ಎಂ.ಕೆ. ಭಂಡಿ | 15–00 |
| 24. | ಅಜೀಜ್ ಸೇಠ್ | ಹೆಚ್.ಕೆ. ಬಾಲಸೂರಿ | 15–00 |
| 25. | ಸಿ.ಎಂ. ಆರ್ಮುಗಂ | ಹೆಚ್.ಕೆ. ಬಾಲಸೂರಿ | 15–00 |
| 26. | ಜೆ.ಹೆಚ್. ಪಟೇಲ್ | ಶೇಷಚಂದ್ರಿಕ | 30–00 |
| 27. | ಬಿ.ಎಲ್. ಸುಬ್ಬಮ್ಮ | ಡಾ. ಡಿ.ಎಸ್. ಜಯಪ್ಪಗೌಡ | 15–00 |
| 28. | ಟಿ.ಆರ್. ಶಾಮಣ್ಣ | ಎಲ್.ಎನ್. ಮುಕುಂದರಾಜ್ | 20–00 |
| 29. | ಎಸ್.ಡಿ. ಗಾಂವಕರ್ | ಮೋಹನ್ ವೆರ್ಣೇಕರ್ | 20–00 |
| 30. | ಎಂ.ಪಿ.ಎಲ್. ಶಾಸ್ತ್ರಿ | ಹಾರೋಗದ್ದೆ ಉಷಾ ರಮೇಶ್ ನಾಯಕ್ | 20–00 |
| 31. | ಎಸ್. ಶಿವಪ್ಪ | ಕೂಡ್ಲಿಗೆರೆ ಮಲ್ಲಿಕಾರ್ಜುನ | 30–00 |
| 32. | ಕಾಗೋಡು ಚಳವಳಿ | ಕೂಡ್ಲಿಗೆರೆ ಮಲ್ಲಿಕಾರ್ಜುನ | 15–00 |
| 33. | ಕೆ.ವಿ. ಶಂಕರಗೌಡ | ಜಗದೀಶ ಕೊಪ್ಪ | 20–00 |
| 34. | ಟಿ.ಎನ್. ನರಸಿಂಹಮೂರ್ತಿ | ಕೆ.ಜೆ. ಸುರೇಶ್ | 25–00 |
| 35. | ಎಸ್.ಆರ್. ಕಂಠಿ | ಮನು ಬಳಿಗಾರ್ | 30–00 |
| 36. | ಎಸ್.ಸಿ. ಮಲ್ಲಯ್ಯ | ಡಾ. ಟಿ.ಸಿ. ಪೂರ್ಣಿಮ | 20–00 |
| 37. | ಅಬ್ದುಲ್ ನಜೀರ್‌ಸಾಬ್ | ಮನು ಬಳಿಗಾರ್ | 30–00 |
| 38. | ಪಿ.ಎಂ. ನಾಡಗೌಡ | ಗಂಗಾಧರಯ್ಯ ಹಿರೇಮಠ | 30–00 |
| 39. | ಕೆ. ಪಟ್ಟಾಭಿರಾಮನ್ | ಸಂಜಯ್ ದೊರೆ | 20–00 |
| 40. | ಎಂ.ಎಸ್.ಕೃಷ್ಣನ್ | ಹೆಚ್.ಕೆ. ಬಾಲಸೂರಿ | 20–00 |
| 41. | ಎಂ.ವಿ. ಕೃಷ್ಣಪ್ಪ | ಜೆ.ಜಿ. ನಾಗರಾಜ್ | 15–00 |
| 42. | ಕೆ.ಎಚ್. ರಂಗನಾಥ್ | ಎಲ್.ಎನ್. ಮುಕುಂದರಾಜ್ | 20–00 |
| 43. | ರಾಮಕೃಷ್ಣ ಹೆಗಡೆ | ಶೂದ್ರ ಶ್ರೀನಿವಾಸ್ | 20–00 |
| 44. | ಸಿ. ಬೈರೇಗೌಡ | ಪ್ರಹ್ಲಾದರಾವ್ | 20–00 |
| 45. | ಎಸ್.ಎಂ. ಯಾಹ್ಯಾ | ಬಿ.ಎಂ. ಹನೀಫ್ | 20–00 |
| 46. | ಬಾಪುಗೌಡ ದರ್ಶನಾಪುರ | ಗಂಗಾಧರಯ್ಯ ಹಿರೇಮಠ | 20–00 |
| 47. | ಡಾ॥ ಎಚ್. ನರಸಿಂಹಯ್ಯ | ಪ್ರೊ॥ ಗಂಗಾಧರ ಮೂರ್ತಿ | 20–00 |
| 48. | ಕರ್ನಾಟಕ ಏಕೀಕರಣ ಮತ್ತು ನಾಮಕರಣ | ಡಾ. ಸಿ.ಆರ್. ಗೋವಿಂದರಾಜ್ | 15–00 |
| 49. | ಕರ್ನಾಟಕ ರೈತ ಚಳುವಳಿ– ಸತ್ಯಾಗ್ರಹಗಳು ಸಂಪುಟ–1 | ಡಾ. ಎಂ.ಜಿ. ನಾಗರಾಜ್ | 15–00 |

